# ಕನ್ನಡ ಶಾಸನಗಳಲ್ಲಿ ಮೌಲ್ಯಪ್ರಜ್ಞೆ

(ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ)

ಸಂಶೋಧಕರು
**ರಾಜಕುಮಾರ ಎಸ್. ಸಾವಳಗಿ**

ಮಾರ್ಗದರ್ಶಕರು
**ಡಾ. ಎಸ್. ಎಂ. ಹಿರೇಮಠ**
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ




**ಕನ್ನಡ ಅಧ್ಯಯನ ಸಂಸ್ಥೆ**
**ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ**
೨೦೧೮

# ಪ್ರಮಾಣ ಪತ್ರ

**ರಾಜಕುಮಾರ ಎಸ್. ಸಾವಳಗಿ** ಅವರು **"ಕನ್ನಡ ಶಾಸನಗಳಲ್ಲಿ ಮೌಲ್ಯಪ್ರಜ್ಞೆ"** ಎಂಬ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ. ಈ ಹಿಂದೆ ಇದು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲ. ಪ್ರಸ್ತುತ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೦-೦೫-೨೦೧೮

ಸ್ಥಳ : ಕಲಬುರಗಿ

**ಡಾ. ಎಸ್. ಎಂ. ಹಿರೇಮಠ**
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ

# ಘೋಷಣಾ ಪತ್ರ

"ಕನ್ನಡ ಶಾಸನಗಳಲ್ಲಿ ಮೌಲ್ಯಪ್ರಜ್ಞೆ" ಎಂಬ ಈ ಮಹಾಪ್ರಬಂಧವನ್ನು ಡಾ. ಎಸ್. ಎಂ. ಹಿರೇಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಮತ್ತು ಇದರ ಯಾವುದೇ ಭಾಗವನ್ನು ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾಧ್ಯಾಯನವಾಗಿದೆ.

ದಿನಾಂಕ : 20-02-೨೦೧೮

ಸ್ಥಳ : ಕಲಬುರಗಿ

ರಾಜಕುಮಾರ ಎಸ್. ಸಾವಳಗಿ

## ಅರಿಕೆ

ಕನ್ನಡ ನಾಡಿನ ಒಳಗೆ ಹಾಗೂ ಹೊರಗೆ ಸಾವಿರಾರು ಕನ್ನಡ ಶಾಸನಗಳು ದೊರಕಿವೆ, ದೊರಕುತ್ತಿವೆ. ಇವುಗಳ ಅಂತರಾಳದಲ್ಲಿ ಕನ್ನಡ ನಾಡಿನ ಇತಿಹಾಸ, ರಾಜಕೀಯ, ಶಿಕ್ಷಣ ಪದ್ಧತಿ, ಸಂಸ್ಕೃತಿ, ಜನಾಂಗ, ವೃತ್ತಿ-ಪ್ರವೃತ್ತಿಗಳು ಆಚರಣೆಗಳು ಹೀಗೆ ಹಲವಾರು ಅಮೂಲ್ಯವಾದ ಸಂಗತಿಗಳನ್ನು ಅವು ಒಲಗೊಂಡಿವೆ. ವಿದೇಶಿ ಹಾಗೂ ದೇಶಿ ಸಂಶೋಧಕರ ಅವಿರತ ಸಂಶೋಧನೆಯ ಫಲವಾಗಿ ಬೆಳಕು ಕಂಡಿರುವ ಕನ್ನಡ ಶಾಸನ ಸಂಪತ್ತು ಬಹು ಮೌಲಿಕವಾದುದಾಗಿದೆ. ಈ ಸಂಪತ್ತನ್ನು ಕಾಲದ ಅಗತ್ಯಕ್ಕೆ ತಕ್ಕಂತೆ ಅನೇಕ ಕೋನಗಳಿಂದ ಅಧ್ಯಯನಕ್ಕೆ ಒಳಪಡಿಸುವ ಅವಶ್ಯಕತೆಯಿದೆ. ಪ್ರಸ್ತುತ ನನ್ನ ಮಹಾಪ್ರಬಂಧವು ಹೆಸರೆ ಸೂಚಿಸುವಂತೆ ಕನ್ನಡ ನಾಡಿನ ಜನಸಾಮಾನ್ಯರು, ಅರಸರು, ಆಡಳಿತಗಾರರು, ಧಾರ್ಮಿಕ-ಆಧ್ಯಾತ್ಮಿಕ ಸಾಧಕರು ಕಂಡರಿಸಿದ ಮಾನವೀಯ ಮೌಲ್ಯಗಳನ್ನು ಕುರಿತ ಸಂಶೋಧನ ಅಧ್ಯಯನವಾಗಿದೆ.

ನಾನು ಎಂ.ಎ. ಅಧ್ಯಯನ ಮಾಡುವಾಗ ಡಾ. ಎಸ್.ಎಂ. ಹಿರೇಮಠ ಗುರುಗಳು ನಮಗೆ ಶಾಸನ ವಿಷಯವನ್ನು ಬೋಧಿಸುತ್ತಿದ್ದರು. ಆಗ ಅವರು ಶಾಸನಾಧ್ಯಯನ ಎಂಬ ಒಂದು ಪರಿಚಯಾತ್ಮಕ ಕೃತಿಯನ್ನು ಪ್ರಕಟಿಸಿದ್ದರು. ಅವರು ತರಗತಿಗಳಲ್ಲಿ ಶಾಸನಗಳ ವಿಷಯ ಬೋಧಿಸುವ ರೀತಿ ಅತ್ಯಂತ ಪ್ರೌಢವೂ, ಗಂಭೀರವೂ, ಆಕರ್ಷಕವೂ ಆಗಿರುತ್ತಿತ್ತು. ಅವರು ಒಂದು ವಿಷಯಕ್ಕೆ ಕೈಹಾಕಿದರೆ ಸಾಕು ಆ ವಿಷಯದ ತಲಸ್ಪರ್ಶಿಯಾದ ಬೋಧನೆ ನಮಗಾಗುತ್ತಿತ್ತು. ಹೀಗಾಗಿ ನನಗೆ ಅವರ ಕಾವ್ಯಮೀಮಾಂಸೆ ಶಾಸನ ಕುರಿತ ಪಾಠಗಳು ಈ ಹೊತ್ತಿಗೂ ತಾಜಾ ಆಗಿ ಉಳಿದಿವೆ. ಅದರ ಪ್ರಭಾವವೇ ನಾನು ಅವರಲ್ಲಿ ಸಂಶೋಧನಾ ಅಧ್ಯಯನಕ್ಕೆ ತೊಡಗಲು ಪ್ರೇರಣೆಯಾಯಿತು.

ನಾನು 'ಕನ್ನಡ ಶಾಸನಗಳಲ್ಲಿ ಮೌಲ್ಯ ಪ್ರಜ್ಞೆ' ಎಂಬ ವಿಷಯವನ್ನು ಪಿಎಚ್.ಡಿ. ಸಂಶೋಧನ ಅಧ್ಯಯನಕ್ಕೆ ತೆಗೆದುಕೊಂಡಾಗಿನಿಂದ ಮೊದಲುಗೊಂಡು ಈ ಹೊತ್ತಿನವರೆಗೂ ತಮ್ಮ ಅಮೂಲ್ಯ ಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿರುವ ನನ್ನ ಹೆಮ್ಮೆಯ ಗುರುಗಳೂ, ಮಾರ್ಗದರ್ಶಕರೂ ಆದ ಡಾ. ಎಸ್.ಎಂ. ಹಿರೇಮಠ ಗುರುಗಳಿಗೆ ಅನಂತ ಅನಂತ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಸಂಶೋಧನ ಅಧ್ಯಯನ ಕೈಗೊಳ್ಳಲು ಸಾಕಷ್ಟು ಅಧ್ಯಯನ, ತಾಳ್ಮೆ ಬೇಕಾಗುತ್ತದೆ. ನನ್ನಲ್ಲಿ ಅಧ್ಯಯನ ಮಾಡುವ ಹೆಚ್ಚಿನದನ್ನು ತಿಳಿದುಕೊಳ್ಳುವ ಅನುಭವಗಟ್ಟಿಗೊಳಿಸುವ ನಿಟ್ಟಿನಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕರ ಪಾತ್ರ ಮಹತ್ವದ್ದಾಗಿದೆ. ಅವರನ್ನು ಯಾವತ್ತೂ ಮರೆಯುವ ಹಾಗಿಲ್ಲ. ಡಾ. ಸಂಗಮೇಶ ಸವದತ್ತಿಮಠ, ಡಾ. ಚನ್ನಣ್ಣ ವಾಲೀಕಾರ, ಡಾ. ಬಸವರಾಜ ಸಬರದ, ಡಾ. ಪಿ.ಕೆ. ಖಂಡೋಬಾ, ಡಾ. ಡಿ.ಬಿ. ನಾಯಕ, ಡಾ. ವೀರಣ್ಣ ದಂಡೆ, ಡಾ. ಎನ್.ಬಿ. ಬುಳ್ಳಾ, ಡಾ. ಟಿ.ಎಂ. ಭಾಸ್ಕರ್, ಡಾ. ಎಚ್.ಟಿ. ಪೋತೆ, ಡಾ. ವಿಜಯಶ್ರೀ ಸಬರದ, ಡಾ. ಜಯಶ್ರೀ ದಂಡೆ ಈ ಗುರುವೃಂದಕ್ಕೆ ನನ್ನ ಅನಂತ ನಮನಗಳನ್ನು ಸಲ್ಲಿಸುತ್ತೇನೆ.

ನನ್ನ ಶೈಕ್ಷಣಿಕ ಜೀವನದುದ್ದಕ್ಕೂ ಮಾರ್ಗದರ್ಶನ ಮಾಡಿ ಅನ್ನ ಆಶ್ರಯ ನೀಡಿ ನನ್ನನ್ನು ತಮ್ಮ ಮಗನಂತೆ ಪೋಷಿಸಿದ ನನ್ನ ಸೋದರ ಮಾವನವರು ಶಿಕ್ಷಣ ಇಲಾಖೆಯ ಶ್ರೇಷ್ಠ ಅಧಿಕಾರಿಗಳೂ ಆದ ಶ್ರೀ ಶಿವಶರಣಪ್ಪ ಎಂ. ಬನ್ನಿಕಟ್ಟಿ ಹಾಗೂ ನನ್ನ ಅಕ್ಕ ಶ್ರೀಮತಿ ಜಗದೇವಿ ಶಿವಶರಣಪ್ಪ ಬನ್ನಿಕಟ್ಟಿಯವರ ಪಾದಗಳಿಗೆ ಮಣಿಯದಿರಲು ಆಗುವುದಿಲ್ಲ; ಅವರ ಉಪಕಾರ ಸದಾ ಸ್ಮರಿಸುವೆ.

ಬಡತನದ ಗಂಭೀರ ಪರಿಸ್ಥಿತಿಯಲ್ಲೂ ಮಗ ಓದಬೇಕು, ಕಲಿಯಬೇಕೆಂದು ತಮ್ಮ ದುಡಿಮೆಯ ಬಹುಪಾಲನ್ನು ನನಗೆ ಧಾರೆಯೆರೆದ ನನ್ನ ಮುಗ್ಧ ತಂದೆ-ತಾಯಿಗಳ ಋಣ ಸದಾ ನನ್ನ ಪ್ರಜ್ಞೆಯನ್ನು ನೈತಿಕತೆಯನ್ನು ಎಚ್ಚರಿಸುತ್ತದೆ. ಅವರ ಪಾದಗಳಿಗೆ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಹಾಗೆಯೆ ನನ್ನ ಸಹೋದರಿಯರು ಸಹೋದರರಿಗೂ ಈ ಸಂದರ್ಭದಲ್ಲಿ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಮನೆ-ಮಗು-ಉದ್ಯೋಗದ ನಡುವೆಯೂ ನನ್ನ ಅಧ್ಯಯನಕ್ಕೆ ಸಹಕರಿಸಿದ ನನ್ನ ಸಹಧರ್ಮಿಣಿ ಶ್ರೀಮತಿ ಕವಿತಾ ಆರ್. ಸಾವಳಗಿಯವರ ಸಹಕಾರವನ್ನು ಮನದಲ್ಲಿ ಸ್ಮರಿಸುವೆ. ನನ್ನ ಚಿರಂಜೀವಿ ಸುಪುತ್ರ ಕುಮಾರ ಅದ್ವಿಕ್ ಆರ್. ಸಾವಳಗಿಯವರ ಮುದ್ದಾದ ನಗೆ ನನ್ನ ಓಡಾಟದ ದಣಿವನ್ನು ಮರೆಸಿದೆ. ಅವನಿಗೆ ಮಂಗಳವಾಗಲೆಂದು ಆ ದೇವರಲ್ಲಿ ಹಾಗೂ ಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

ನನ್ನ ಪಿಎಚ್.ಡಿ. ಅಧ್ಯಯನದ ಸಂದರ್ಭದಲ್ಲಿ ನನಗೆ ಅಮೂಲ್ಯ ಸಲಹೆಗಳನ್ನು ನೀಡಿ ಸಹಕರಿಸಿದ ಸ್ನೇಹಿತರಾದ ಡಾ. ಸಿದ್ಧಲಿಂಗ ಶಕಾಪೂರ, ಪ್ರೊ. ಮಲ್ಲಪ್ಪ ಎಂ. ಮಾನೆಗರ, ಡಾ. ಶಾಂತಪ್ಪ ಡಂಬಾಳ, ಡಾ. ಕವಿರಾಜ ಸಿ. ಪಾಟೀಲ, ಡಾ. ಬಾಬುರಾವ ಚಿಮಕೋಡ, ಡಾ.

ವಿ.ಜಿ. ಮಠಪತಿ, ಡಾ. ಶಿವಾನಂದ ಹಂಚಿನಾಳ, ಡಾ. ಮಲ್ಲಿನಾಥ ತಳವಾರ ಇವರೆಲ್ಲರಿಗೂ ಈ ಸಂದರ್ಭದಲ್ಲಿ ಆತ್ಮೀಯವಾಗಿ ನೆನೆಯುತ್ತಾ ವಂದನೆಗಳನ್ನು ಸಲ್ಲಿಸುತ್ತೇನೆ.

ಹಾವೇರಿ ಜಿಲ್ಲೆಯ 'ಹಂಸಭಾವಿ'ಯಿಂದ ಕಲಬುರಗಿಗೆ ಬಂದು ನನ್ನ ಪಿಎಚ್.ಡಿ. ಅಧ್ಯಯನದ ಪ್ರಗತಿ ವರದಿಗಳನ್ನು ಕಾಲಕಾಲಕ್ಕೆ ನೀಡಲು ಅವಶ್ಯವಿದ್ದಾಗ ರಜೆ (CL) ಹಾಗೂ ಸೂಕ್ತ ಸಲಹೆ ಸಹಕಾರ ನೀಡಿದ ಎಂ.ಎ.ಎಸ್.ಸಿ. ಕಾಲೇಜಿನ ಪ್ರಾಚಾರ್ಯರಾದ ಡಾ. ಎಂ.ಎಂ. ಅಕ್ಕಿಯವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೆಯೆ ಆಗಾಗ ನನ್ನ ಅಧ್ಯಯನ ವಿಷಯವಾಗಿ ವಿಚಾರಿಸುತ್ತ ಸಲಹೆ ಸಹಕಾರ ನೀಡಿದ ಸಹೋದ್ಯೋಗಿ ಸನ್ಮಿತ್ರರಾದ ಡಾ. ಕೆ.ವಿ. ಜಯಪ್ಪ, ಡಾ. ವಿ.ಎಸ್. ಧಾನೆನವರ, ಡಾ. ವೈ.ಕೆ. ವಿರೂಪಾಕ್ಷಪ್ಪ, ಡಾ. ಎಸ್.ಎಸ್. ಮಠಪತಿ, ಪ್ರೊ. ಶ್ರೀನಿವಾಸ ರೆಡ್ಡಿ, ಪ್ರೊ. ಎಸ್.ಎ. ತಿಪ್ಪೇಶ, ಡಾ. ರವಿನಾಯಕ, ಪ್ರೊ. ಸಿ. ವೆಂಕಟೇಶ, ಪ್ರೊ. ಡಬ್ಲ್ಯು.ಐ. ದಾವೂದಜಿ, ಗ್ರಂಥಪಾಲಕರಾದ ಆತ್ಮೀಯ ಚಂದ್ರಶೇಖರ ರೆಡ್ಡಿ ಈ ಎಲ್ಲರಿಗೂ ವಂದನೆಗಳನ್ನು ಸಲ್ಲಿಸುತ್ತೇನೆ.

ಅತ್ಯಂತ ತ್ವರಿತವಾಗಿ ಹಾಗೂ ಸಮಯಕ್ಕೆ ಸರಿಯಾಗಿ ಸುಂದರವಾಗಿ ಬೆರಳಚ್ಚು ಮಾಡಿಕೊಟ್ಟಿರುವ ಶ್ರೀ ಐ. ಕೊಟ್ರಪ್ಪ ಇವರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ.

ರಾಜಕುಮಾರ್ ಎಸ್. ಸಾವಳಗಿ

# ಪರಿವಿಡಿ

# ಅಧ್ಯಾಯ–೧
# ಕನ್ನಡ ಶಾಸನಗಳ ಅಧ್ಯಯನ ಇತಿಹಾಸ

ಒಂದು ನಾಡಿನ ಇತಿಹಾಸವೆಂದರೆ ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜರ ಇತಿಹಾಸವೇ ಆಗಿದೆ. ಒಂದು ನಾಡು ಎಂದರೆ ಕೇವಲ ಅದನ್ನು ಆಳಿದ ರಾಜನ ಇತಿಹಾಸವಲ್ಲ. ಅಲ್ಲಿ ಬದುಕಿದ ಜನ ಪ್ರಮುಖರಾಗುತ್ತಾರೆ. ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅದರ ಬದುಕಿನ ನೆಲೆಗಳು, ಸಮಸ್ಯೆಗಳು, ಸವಾಲುಗಳು, ಜೀವನ ಮೌಲ್ಯಗಳ ಒಟ್ಟು ಮೊತ್ತವೇ ಇತಿಹಾಸವೆಂದು ಕರೆಸಿಕೊಳ್ಳುತ್ತದೆ. ಪ್ರಾಚೀನ ಭಾರತದಲ್ಲಿ, ಅದರಲ್ಲೂ ಕ್ರಿಸ್ತಶಕದ ಈಚಿನ ಶತಮಾನಗಳಲ್ಲಿ ರಾಜ–ಮಹಾರಾಜರುಗಳ ಇತಹಾಸವೇ ನಮ್ಮ ನಾಡಿನ ಇತಿಹಾಸವೂ ಆಗುತ್ತದೆ. ರಾಜ–ಮಹಾರಾಜರುಗಳ ಜೀವನ, ಸಾಧನೆಗಳಿಗೆ ಅಂದು ಸಾಕ್ಷಿ ಪ್ರಜ್ಞೆಯಾಗಿದ್ದ 'ಶಾಸನ'ಗಳು ಕೂಡ ತಮ್ಮದೇಯಾದ ಭವ್ಯ ಪರಂಪರೆಯನ್ನು ಹೊಂದಿವೆ. ಕನ್ನಡ ನಾಡಿನಲ್ಲಿ ವಿದೇಶಿಯರ ಆಗಮನದಿಂದ ಇತಿಹಾಸದ ಸಂಶೋಧನೆಯಲ್ಲಿ ಹಲವಾರು ಧನಾತ್ಮಕ ಅಂಶಗಳು ಒದಗಿವೆ. ಪಾಶ್ಚಾತ್ಯ ಸಂಸ್ಕೃತಿಯ ಚಿಂತಕರು ಕನ್ನಡ ನಾಡಿನ ಸಾಂಸ್ಕೃತಿಕ ಸಂಪತ್ತಿನ ಬಗೆಗೆ ವಿಶೇಷ ಕಾಳಜಿಯನ್ನು ಹೊಂದಿದ್ದರು. ನೆಲದ ಮರೆಯಲ್ಲಿ ಹುದುಗಿದ್ದ ಅಪೂರ್ವವಾದ ಸಂಪತ್ತನ್ನು ಹೊರಗೆ ತೆಗೆದು ಪಾಶ್ಚಾತ್ಯರು ಸಂಶೋಧಿಸಿ ಕೊಟ್ಟಿರುವ ಬೇರೆ–ಬೇರೆ ಜ್ಞಾನಶಾಖೆಗಳಲ್ಲಿ 'ಶಾಸನ ಸಂಪತ್ತು' ಅತ್ಯಂತ ಮೌಲ್ಯಿಕವಾದುದು. ಭಾರತಕ್ಕೆ ವಿದೇಶಿಯರು ಬಂದದ್ದು ಬೇರೆ–ಬೇರೆ ಉದ್ದೇಶಗಳಿಗಾಗಿ. ಅವರು ತಮ್ಮ ಏನೆಲ್ಲ ಕಾರ್ಯಬಾಹುಳ್ಯದ ನಡುವೆ ಸಾಂಸ್ಕೃತಿಕ ಸಂಶೋಧನೆಯ ಕಾರ್ಯಗಳನ್ನು ಕೈಗೊಂಡುದುದು ಮಹತ್ವದ ಸಾಧನೆಯೆನಿಸುತ್ತದೆ.

ಶಾಸನಾಧ್ಯಯನದ ಸೂಕ್ಷ್ಮ ಸುಳುಹನ್ನು ಸಂಶೋಧಕರಾದ ಪಿ.ಬಿ. ದೇಸಾಯಿಯವರು ಈ ರೀತಿಯಲ್ಲಿ ಗುರುತಿಸಿದ್ದಾರೆ.

೧. ತಿಳುವಿನ ಯುಗ
೨. ಕತ್ತಲೆಯ ಯುಗ
೩. ಸಂಶೋಧನೆಯ ಯುಗ

ತಿಳುವಿನ ಯುಗದಲ್ಲಿ ಶಾಸನಗಳ ಬಗೆಗಿನ ಜ್ಞಾನವು ವಿದ್ವಾಂಸರಲ್ಲಿ ಎಚ್ಚರವಾಗಿರುವುದನ್ನು ಗುರುತಿಸುತ್ತಾರೆ. ಆ ಕಾಲದಲ್ಲಿ ಬದುಕಿದ್ದ ವಿದ್ವಾಂಸರಿಗೆ ಶಾಸನಗಳನ್ನು ಓದಲು ಬರುತ್ತಿತ್ತು. ಅವರಿಗೆ ಶಾಸನದ ಅರ್ಥವು ತಿಳಿಯುತ್ತಿದ್ದಿತು. ಒಟ್ಟಾರೆಯಾಗಿ ಶಾಸನದ ಅಂತರಂಗವನ್ನು ಒಳಹೊಕ್ಕು ನೋಡುವ ಸಾಮರ್ಥ್ಯವು ಅವರಿಗಿದ್ದಿತು.

ಕತ್ತಲೆ ಯುಗದಲ್ಲಿ ಶಾಸನಗಳ ಬಗೆಗಿನ ಜ್ಞಾನವು ವಿದ್ವಾಂಸರಲ್ಲಿ ಪೂರ್ತಿಯಾಗಿ ಲುಪ್ತವಾಗಿರುವುದನ್ನು ದೇಸಾಯಿಯವರು ಗುರುತಿಸಿದ್ದಾರೆ. ಅಂದರೆ ಆ ಕಾಲಘಟ್ಟದಲ್ಲಿ ಶಾಸನಗಳ ಬಗೆಗಿನ ಆಸಕ್ತಿಯು ಕಡಿಮೆಯಾಗಿರುವುದನ್ನು ಗುರುತಿಸಿದ್ದಾರೆ.

ಮೂರನೆಯ ಕಾಲಮಾನವು ಸಂಶೋಧನೆಯ ಯುಗವಾಗಿದೆ. ಈ ಕಾಲವು ಬಂದುದು ಬ್ರಿಟಿಷರಾದಿ ಪಾಶ್ಚಿಮಾತ್ಯರು ಭಾರತಕ್ಕೆ ಬಂದಾಗ ಭಾರತಕ್ಕೆ ಬಂದ ಕೆಲವರಲ್ಲಿ ಭಾರತದ ಪ್ರಾಚೀನ ಜನಗಳ ಇತಿಹಾಸ, ಸಂಸ್ಕೃತಿ, ಸಮಾಜ, ಸಾಹಿತ್ಯಕ ಕಡೆಗೆ ಗಮನಹರಿಸಿ ಕಾರ್ಯಪ್ರವೃತ್ತರಾದರು. ಇದರ ಫಲವಾಗಿಯೇ ಶಾಸನಾಧ್ಯಯನವು ಆರಂಭಗೊಂಡಿತು. ಪಾಶ್ಚಾತ್ಯ ವಿದ್ವಾಂಸರು ಶಾಸನಗಳ ಕಡೆಗೆ ಗಮನಹರಿಸಿದರು. ಅವುಗಳನ್ನು ಹುಡುಕುವುದು, ಓದುವುದು, ಅರ್ಥೈಸುವುದು, ಒಂದೆಡೆಯಲ್ಲಿ ಸಂಗ್ರಹಿಸುವುದು, ತಮ್ಮ ಪರಿಮಿತಿಯಲ್ಲಿ ಟಿಪ್ಪಣಿ–ಲೇಖನಗಳನ್ನು ಬರೆಯುವುದು... ಈ ಎಲ್ಲ ಕಾರ್ಯಚಟುವಟಿಕೆಗಳಿಂದ ಇದು ಸಂಶೋಧನ ಯುಗವಾಯಿತು.

ಶಾಸನಾಧ್ಯಯನದ ದೃಷ್ಟಿಯಿಂದ ಈ ಸಂಶೋಧನೆಯ ಯುಗವು ಅತ್ಯಂತ ಮಹತ್ವದ್ದು. ಇಲ್ಲಿಂದಲೇ ಶಾಸನದ ಇತಿಹಾಸವು ಆರಂಭಗೊಳ್ಳುತ್ತದೆ.

ಡಾ. ಎಂ.ಎಂ. ಕಲಬುರ್ಗಿಯವರು ಶಾಸನಾಧ್ಯಯನದ ಚರಿತ್ರೆಯನ್ನು ಹೆಚ್ಚು ವ್ಯವಸ್ಥಿತವಾದ ನೆಲೆಯಲ್ಲಿ ಗುರುತಿಸಿರುವರು. ಅವರ ಅಧ್ಯಯನದ ವಿಭಾಗವು ಶಾಸನದ ಇತಿಹಾಸವನ್ನೊ ಸರಳವಾಗಿ ತಿಳಿಸಿಕೊಡುತ್ತದೆ. ಅವರ ವಿಭಾಗೀಯ ಕ್ರಮವು ಈ ರೀತಿಯಲ್ಲಿದೆ...

ಅ) ಕರ್ನಲ್ ಮೆಕೆಂಝಿ ಯುಗ (೧೭೯೧–೧೮೩೭)

ಬ) ಸರ್ ವಾಲ್ಟರ್ ಇಲಿಯಟ್ ಯುಗ (೧೮೩೭–೧೮೭೦)

ಇ) ಡಾ. ಫ್ಲೀಟ್ ಮತ್ತು ರೈಸ್ ಯುಗ (೧೮೭೦ರ ನಂತರದಲ್ಲಿ....)

ಕ್ರಿ.ಶ. ೧೯೭೧ರಷ್ಟು ಹಿಂದೆಯೇ ಕಲ್ಕತ್ತದ "Asiatic Researches" ಎಂಬ ಆಂಗ್ಲಪತ್ರಿಕೆಯಲ್ಲಿ "A Royal Great of land in Carnata" ಲೇಖನವು ಅಚ್ಚಾಗಿದೆ.

**ಅ) ಕರ್ನಲ್ ಮೆಕೆಂಝಿ ಯುಗ (ಕ್ರಿ.ಶ. ೧೭೯೧–೧೮೩೭):**

ಕರ್ನಲ್ ಮಕೆಂಝಿಯವರು ಕರ್ನಾಟಕ ಮತ್ತು ಭಾರತದಲ್ಲಿ ದೊರಕಬಹುದಾದ ಶಾಸನಗಳನ್ನು ತುಂಬಾ ಆಸಕ್ತಿಯಿಂದ ಅಧ್ಯಯನ ಮಾಡಿದರು. ಆ ಅಧ್ಯಯನದಿಂದಲೇ ಅವುಗಳ ಬಗೆಗೆ ತೀವ್ರವಾದ ಕುತೂಹಲ ಮೂಡಿತು. ದೇಶದ ಇತಿಹಾಸವನ್ನು ರಚಿಸುವುದರಲ್ಲಿ ಶಾಸನಗಳು ಮಹತ್ವದ 'ಆಕರ'ಗಳಾಗಬಲ್ಲವು ಎಂಬುದನ್ನು ಗುರುತಿಸಿದರು. ಸರ್ ವಿಲಿಯಂ ಜೋನ್ಸ್‌ರವರನ್ನು 'ಆಧುನಿಕ ಭಾಷಾ ವಿಜ್ಞಾನದ ಪಿತಾಮಹ' ಎಂದು ಕರೆಯಲಾಗುತ್ತದೆ. ಇವರಿಂದ ಭಾರತೀಯ ಜ್ಞಾನ ಸಂಪತ್ತು ಸಂವರ್ಧನೆಯಾಗಿದೆ. ಅವರು ಇಂಗ್ಲೆಂಡಿನಿಂದ ಭಾರತಕ್ಕೆ ನ್ಯಾಯಾಲಯದ ನ್ಯಾಯಧೀಶರಾಗಿ ಬಂದರು. ಅದು ಕಲ್ಕತ್ತೆಯ ಶ್ರೇಷ್ಠ ನ್ಯಾಯಾಲಯದಲ್ಲಿ ಕ್ರಿ.ಶ. ೧೭೮೬ ರಿಂದ ೧೭೯೪ ರವರೆಗೆ ಕಾರ್ಯ ನಿರ್ವಹಿಸಿದರು. ಅವರು ಬಹು ಜ್ಞಾನಾಕಾಂಕ್ಷಿಗಳಾಗಿದ್ದರು. ವಂಗ ಮತ್ತು ವಿಲ್ಕಿನ್ಸ್ ಪಂಡಿತರ ಸಹಾಯದಿಂದ 'ಸಂಸ್ಕೃತ' ಭಾಷೆಯನ್ನು ಕಲಿತರು. ಭಾರತೀಯ ಜ್ಞಾನಶಾಖೆಗಳನ್ನು ಬೆಳೆಯಿಸುವುದಕ್ಕಾಗಿಯೇ ಒಂದು ಸಂಸ್ಥೆಯನ್ನು ಕಲ್ಕತ್ತೆಯಲ್ಲಿ ತಮ್ಮ ಅಧ್ಯಕ್ಷತೆಯಲ್ಲಿ ಆರಂಭ ಮಾಡಿದರು. ಕ್ರಿ.ಶ. ೧೭೮೪ರಲ್ಲಿ "ಏಶಿಯಾಟಿಕ್ ಸೊಸಯಿಟಿ ಆಫ್ ಬೆಂಗಾಲ್" ಸಂಸ್ಥೆಯು ತನ್ನ ಕಾರ್ಯಾರಂಭವನ್ನು ಮಾಡಿತು. ಈ ಸಂಸ್ಥೆಯಿಂದ "ಏಶಿಯಾಟಿಕ್ ರಿಸರ್ಚನ್" ಎಂಬ ಪತ್ರಿಕೆಯೊಂದನ್ನು ಹೊರತಂದರು. ಈ ಪತ್ರಿಕೆಯ ಮೂಲಕ ಭಾರತೀಯ ಇತಿಹಾಸದ ವಿನೂತನ ಅಂಶಗಳು ಪ್ರಕಟವಾಗತೊಡಗಿದವು. ವಿಲ್ಕಿನ್ಸ್ ಮತ್ತು ಜೋನ್ಸ್ ಅವರನ್ನು ಅವರ ಸಾಧನೆಯ ಕಾರಣದಿಂದ "ಭಾರತೀಯ ಶಾಸ್ತ್ರದ ಪಿತಾಮಹ"ರೆಂದು ಕರೆಯಲಾಗಿದೆ.

ಅಲೆಕ್ಸಾಂಡರ್ ಮ್ಯಾಕ್ಲಿಯೋಡ್ ಎನ್ನುವ ಆಂಗ್ಲ ಅಧಿಕಾರಿಯು ಕಂಚಿಯಲ್ಲಿದ್ದ ತಾಮ್ರಪಟವನ್ನು ಕ್ರಿ.ಶ. ೧೭೯೧ರಲ್ಲಿ ವಿಲಿಯಂ ಜೋನ್ಸ್ ಅವರಿಗೆ ಕಳುಹಿಸಿಕೊಟ್ಟನು. ವಿಲಿಯಂ ಜೋನ್ಸ್‌ರವರು ತಾಮ್ರಪಟವನ್ನು ಅನೇಕ ಟಿಪ್ಪಣಿಗಳೊಂದಿಗೆ ಆಂಗ್ಲ ಭಾಷೆಗೆ ಅನುವಾದ ಮಾಡಿದರು. ಅದು ವಿಜಯನಗರ ರಾಜರು ಕೊಟ್ಟಿರುವ ದತ್ತಿಯ ವಿಷಯವನ್ನು ತಿಳಿಸುತ್ತದೆ. ಜೋನ್ಸ್‌ರವರು "A Royal Grant of land in carnata' ಎಂಬ ಹೆಸರಿನಿಂದ 'Asiatic Researches' ಎಂಬ ಪತ್ರಿಕೆಯಲ್ಲಿ ಪ್ರಕಟಿಸಿದರು. ಇದುವೇ ಕನ್ನಡ ನಾಡಿನ ಶಾಸನಾಧ್ಯಯನಕ್ಕೆ ನಾಂದಿಯಾಯಿತು. ಈ ಲೇಖನದಿಂದಲೇ ವಿದ್ವಾಂಸರು ಕನ್ನಡ ಶಾಸನ ಚರಿತ್ರೆಯ ಆರಂಭಿಕ ಘಟ್ಟವನ್ನು ಗುರುತಿಸುತ್ತಾರೆ. ಇದರಿಂದ ಪ್ರೇರಣೆಗೊಂಡು ಕರ್ನಲ್ ಮೆಕೆಂಝಿಯವರು ಮೈಸೂರು ಪ್ರದೇಶದ ಪರಿವೀಕ್ಷಣ ಅಧಿಕಾರಿಗಳೆಂದು ನೇಮಕಗೊಂಡರು.

ಮೈಸೂರು ಪ್ರಾಂತಕ್ಕೆ ಬಂದವರೆ ಅದರ ಭೌಗೋಳಿಕ ಪರಿವೀಕ್ಷಣೆಗೆ ಮೆಕೆಂಝಿಯವರು ತೊಡಗಿದರು. ಅಲ್ಲಿಯ 'ಸಾಂಸ್ಕೃತಿಕ ದಾಖಲೆಗಳನ್ನು ಕಂಡು ಮೂಕವಿಸ್ಮಿತರಾದರು. ಆರಂಭದಲ್ಲಿ ಅವರಿಗೆ ಕನ್ನಡ ಬರುತ್ತಿರಲಿಲ್ಲ. ಕ್ರಮೇಣವಾಗಿ ಅನುವಾದ, ಪ್ರಾಚೀನ ಕನ್ನಡ ಮತ್ತು ತುಳುಶಾಸನಗಳ ಅನುವಾದಗಳನ್ನು ಸಂಗ್ರಹಿಸಿದರು. ಮುಂದೆ ಕ್ರಮೇಣವಾಗಿ ಹಿಂದೂಗಳ ಭೂವ್ಯವಸ್ಥೆಯ ಮೇಲೆ ಬೆಳಕು ಬೀರುವ ಶಾಸನಗಳ ಮತ್ತು ತಾಮ್ರಪಟಗಳ ಸ್ವರೂಪ ಹಾಗು ಉಪಯೋಗ ಕುರಿತಾದ ಸುಮಾರು ೩೦೦೦ಕ್ಕಿಂತ ಹೆಚ್ಚಿನ ಬರಹಗಳನ್ನು ಕ್ರಿ.ಶ. ೧೮೦೦ ಸುಮಾರಿಗೆ ಸಂಗ್ರಹಿಸಿದರು. ಈ ಬರಹಗಳು ವೀರಗಲ್ಲು, ಮಾಸ್ತಿಕಲ್ಲು, ಪ್ರಾಚೀನ ವಸ್ತುಗಳ ಪ್ರಾಮುಖ್ಯತೆ, ಈ ನಾಡಿನಲ್ಲಿ ಬಾಳಿ ಬದುಕಿದ ಪ್ರಾಚೀನ ಜನರ ರೀತಿ–ನೀತಿಗಳನ್ನು ತಿಳಿಸುತ್ತವೆ. ತಮಗೆ ದೊರೆತ ಪ್ರಾಚೀನ ಶಾಸನಗಳನ್ನು ಓದಲು ಪ್ರಯತ್ನಿಸಿ, ಯಶಸ್ವಿಯಾದರು. ಅವುಗಳ ಅನುವಾದವನ್ನು ಸಹ ಮಾಡಿಸಿದರು. ಇದರ ಪ್ರಯುಕ್ತ ಕ್ರಿ.ಶ. ೧೮೦೭ ರಿಂದ ಕನ್ನಡ ಶಾಸನಗಳ ಪ್ರಕಟಣೆಯು ತೀವ್ರಗತಿಯಲ್ಲಿ ನಡೆಯಿತು. ಮೆಕೆಂಝಿಯವರು ತಾವು ಸಂಗ್ರಹಿಸಿದ್ದ ಹಲವಾರು ತಾಮ್ರಪಟ ಶಾಸನಗಳನ್ನು ಏಸಿಯಾಟಿಕ್ ಸೊನಾಯಿಟಿಗೆ ಕಳುಹಿಸಿಕೊಟ್ಟರು. ವೆಂಕಟಬೋರಯ್ಯ ಕವೆಲ್ಲ ಎನ್ನುವ ಭಾರತೀಯ ವಿದ್ವಾಂಸನು ಶಾಸನಗಳನ್ನು ಓದುತ್ತಿದ್ದನು. ಅವನಿಗೆ ಪ್ರಾಚೀನ ಭಾಷೆ ಸಂಸ್ಕೃತಿಯ ಜ್ಞಾನವಿದ್ದಿತು. ಮೆಕೆಂಝಿಯವರು ಇವರ

ಸಹಾಯವನ್ನು ಪಡೆದುಕೊಂಡು ಶಾಸನಾಧ್ಯಯನವನ್ನು ಮತ್ತಷ್ಟು ತೀವ್ರಗೊಳಿಸಿದರು. 'ಏಷಿಯಾಟಿಕ್ ರಿಸರ್ಚಸ್' ಪತ್ರಿಕೆಯ ೯ನೇ ಸಂಪುಟದಲ್ಲಿ ತಾವು ಕಂಡ ಕೆಲವು ಶಿಲ್ಪಗಳನ್ನು, ಶಾಸನಗಳನ್ನು ಹೆಸರಿಸಿದ್ದಾನೆ. "೨೭೮ನೇ ಪುಟದಲ್ಲಿ ಕ್ರಿ.ಶ. ೧೮೦೧ ರಲ್ಲಿ ಮೆಕೆಂಝಿ ಸಂಗ್ರಹಿಸಿದ ಶಾಸನದ ಚಿತ್ರವಿದೆ. ಆ ಚಿತ್ರದ ಕೆಳಗೆ ಈ ರೀತಿ ಅಚ್ಚಾಗಿದೆ. Ancient sculpture and inscription at Sravananagoody near Madagasee"[೧]. ಅದೇ ಪತ್ರಿಕೆಯಲ್ಲಿ ೨೭೪ನೆಯ ಪುಟದ ಅಡಿಟಿಪ್ಪಣಿಯಲ್ಲಿ ವಿಲಿಯಮ್ ಬ್ರೌನ್ಸ್ ಎಂಬಾತ ಕೆಲವು ಶಾಸನಗಳನ್ನು ಸಂಗ್ರಹಿಸಿದ ವಿಷಯವು ತಿಳಿಯುತ್ತದೆ.

ಮೆಕೆಂಝಿಯವರು ಬರೆದ ಜೈನರ ಬಗೆಗಿನ ಸುದೀರ್ಘವಾದ ಒಂದು ಲೇಖನವು 'ಏಸಿಯಾಟಿಕ್ ರಿಸರ್ಚಸ್' ಪತ್ರಿಕೆಯಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ಬುಕ್ಕರಾಯನ ಶಾಸನವನ್ನು ವೆಂಕಟಬೋರಯ್ಯನೇ ಅನುವಾದಿಸಿಕೊಟ್ಟಿರುವುದನ್ನು ದಾಖಲಿಸಿದ್ದಾನೆ. ಬುಕ್ಕರಾಯನು ಜೈನರಿಗೂ–ವೈಷ್ಣವರಿಗೂ ಉಂಟಾಗಿದ್ದ ಧಾರ್ಮಿಕ ವಿವಾದವನ್ನು ಬಗೆಹರಿಸಿದ ಸಂಗತಿ ಈ ಶಾಸನದಲ್ಲಿದೆ. ಈ ಶಾಸನವು ಕ್ರಿ.ಶ. ೧೮೦೭ರಲ್ಲಿ ಪ್ರಕಟಗೊಂಡಿದೆ. ಸಂಶೋಧಕರು "ಇದು ಪ್ರಕಟಗೊಂಡ ಕನ್ನಡದ ಪ್ರಥಮ ಶಾಸನವೆಂದು ಗುರುತಿಸುತ್ತಾರೆ"[೨] ಕೋಲ್ಬ್ರೂಕ್‌ನು ಸೊಸಾಯಿಟಿಗೆ ಎರಡು ತಾಮ್ರದ ಪಟಗಳು ಮತ್ತು ಅದಾನಿ ಜಿಲ್ಲೆಯ ಕುರಗೋಡಿನ ಶಿಲಾಶಾಸನಗಳನ್ನು ಮೆಕೆಂಝಿಯವರು ಅನುವಾದ ಮಾಡಿದ್ದಾರೆ. "ಈ ೧೨ನೆಯ ಶತಮಾನದ ಕನ್ನಡ ಶಿಲಾಶಾಸನವನ್ನು ೧೮೦೧ ರಲ್ಲಿ ಆ ಸ್ಥಳದ ನಿವಾಸಿಗಳ ಅಪ್ಪಣೆ ಪಡೆದು ಮೆಕೆಂಝಿಯವರು–ಹಿಂದೂಗಳ ಸಾಹಿತ್ಯದಲ್ಲಿ ಆಸಕ್ತರಾಗಿರುವ ವ್ಯಕ್ತಿಗಳು ಅದನ್ನು ಅಮೂಲ್ಯ ಆಸ್ತಿಯೆಂದು ಭಾವಿಸುತ್ತಾರೆ ಎಂಬ ನಂಬಿಕೆಯಿಂದ ಕಲ್ಕತ್ತಾದ ಸೊಸೈಟಿಗೆ ಕಳುಹಿಸಿಕೊಟ್ಟರಂತೆ."[೩]

ಸರ್ ಜಾನ್ ಮಾಲ್‌ಕಮ್‌ರವರು ಕ್ರಿ.ಶ. ೧೮೨೧ರಲ್ಲಿ ಮುಂಬೈಗೆ ಬಂದರು. ಅವರಿಗೆ ಭಾರತದ ಶಾಸನಗಳ ಬಗೆಗೆ ಆಸಕ್ತಿ ಮೂಡಿತು. ತಮ್ಮ ಆಸಕ್ತಿಯನ್ನು ಮೌಂಟ್ ಸ್ಟುಯರ್ಟ್ ಎಲ್ಫಿನಸ್ಟನ್ ಸ್ಯನ್ ರವರೊಂದಿಗೆ ಚರ್ಚಿಸಿದರು. ಅವರು ಸರ್ ಜಾನ್ ಮಾಲ್‌ಕಮ್‌ರವರಿಗೆ ಸಹಾಯ ಮತ್ತು ಮಾರ್ಗದರ್ಶನ ಮಾಡಿದರು. ಇದರ ಫಲವಾಗಿ 'ಬೆಯ್ಲಿ' ಎಂಬ

ಅಧಿಕಾರಿಯು ಥಾಣಾದಿಂದ ಕೆಲವು ತಾಮ್ರಪತ್ರಗಳನ್ನು ಹುಡುಕಿ ಸಂಗ್ರಹಿಸಿ ಕಳುಹಿಸಿಕೊಡುತ್ತಾನೆ. ಇದರೊಂದಿಗೆ ಕರ್ನಾಟಕದಿಂದಲೂ ೧೪ ಶಾಸನಗಳ ನಕಲು ಮುಂಬೈಗೆ ರವಾನೆಯಾದವು. ಆಗ ಎಲ್ಫಿನ್‌ಸ್ಟನ್‌ನು ಅವುಗಳನ್ನು ಅನುವಾದಿಸಿ ಪ್ರಕಟಿಸಲೆಂದು ಮುಂಬೈ ಸರಕಾರದ ಕಾರ್ಯದರ್ಶಿಯಾಗಿದ್ದ ವಿಲಿಯಂ ಹೆನ್ನಿ ವಥೆನ್ ರವರಿಗೆ ಕಳುಹಿಸಿಕೊಡುತ್ತಾನೆ. ಅವನು ತನಗೆ ಬಂದ ದಾಖಲಾತಿಗಳನ್ನು ಸರಿಯಾಗಿ ಪರಿಶೀಲಿಸಿ, ಅವುಗಳಲ್ಲಿ ೧೨ ಶಾಸನಗಳ ಸಾರಾಂಶವನ್ನು ಕ್ರಿ.ಶ. ೧೮೩೫ ಪ್ರಕಟಿಸಿದನು. ಉಳಿದ ಎರಡನ್ನು ಓದಲಾಗಲಿಲ್ಲವೆಂದು ಹೇಳಿಕೊಂಡಿರುವುದನ್ನು ಡಾ. ಚಿದಾನಂದಮೂರ್ತಿಯವರು ದಾಖಲಿಸಿದ್ದಾರೆ. ಕ್ರಿ.ಶ. ೧೨೦೬ರ ಶಾಸನವೊಂದು ಹಳಗನ್ನಡದಲ್ಲಿದ್ದು, ಅದರ ವಿಷಯವಾಗಿ ಹೀಗೆ ಹೇಳುತ್ತಾನೆ. "ಅದನ್ನು ಹಳೆಗನ್ನಡ ಲಿಪಿ ಮತ್ತು ಭಾಷೆಯಲ್ಲಿ ಬರೆಯಲಾಗಿದೆ. ಈಗಿನ ಪಂಡಿತರು ಅದನ್ನು ಓದಲು ಕಷ್ಟಪಡುತ್ತಿದ್ದಾರೆ"[೪].

**ಆ) ಸರ್ ವಾಲ್ಟರ್ ಇಲಿಯಟ್ ಯುಗ (ಕ್ರಿ.ಶ. ೧೮೩೭–೧೮೭೦)**

ಕನ್ನಡ ಶಾಸನಗಳ ಒಂದು ಸುವ್ಯವಸ್ಥಿತವಾದ ಅಧ್ಯಯನವು ಆಂಭವಾದದ್ದು ಸರ್ ವಾಲ್ಟರ್ ಇಲಿಯಟ್ ಎಂಬಾತನಿಂದ. ಇವರು ಮದ್ರಾಸ್‌ನಲ್ಲಿ ಸಿವಿಲ್ ಸರ್ವಿಸ್ ಅಧಿಕಾರಿಯಾಗಿ ಬಂದವರು. ತಮ್ಮ ಆಡಳಿತದ ನಿರ್ವಹಣೆಯೊಂದಿಗೆ ಭಾರತೀಯ ಸಾಂಸ್ಕೃತಿಕ ವಲಯದಲ್ಲಿ ಆಸಕ್ತಿವಹಿಸಿ ಅಲ್ಲಿನ ಸಾಮಗ್ರಿಯನ್ನು ಸಂಶೋಧಿಸಲು ಶ್ರಮಿಸಿದರು. ತಮಗೆ ಲಭ್ಯವಾದ ಕನ್ನಡದ ಶಾಸನಗಳನ್ನು ಕಷ್ಟಪಟ್ಟು ಓದಿದರು. ಆ ಅಧ್ಯಯನದ ಫಲವಾಗಿಯೇ "Hindu Inscriptions" ಎಂಬ ಮೌಲಿಕವಾದ ಲೇಖನವನ್ನು ಸಿದ್ಧಪಡಿಸಿದರು. ಇದು ಕರ್ನಾಟಕದ ಸಾಂಸ್ಕೃತಿಕ ಮತ್ತು ರಾಜಕೀಯ ಇತಿಹಾಸಗಳ ಅಧ್ಯಯನದಲ್ಲಿ ಒಂದು ಹೊಸ ಅಧ್ಯಾಯಕ್ಕೆ ನಾಂದಿಯಾಯಿತು. ದೇಶೀಯ ಭಾಷೆಗಳನ್ನು ಕಲಿಯಲು ಇಲಿಯಟ್ ತುಂಬಾ ಶ್ರಮಪಟ್ಟರು. ದೇಶೀಯ ವಿದ್ವಾಂಸರಿಂದ ಕನ್ನಡ ಭಾಷೆಯ ವ್ಯಾಕರಣವನ್ನು ಅನುವಾದಗಳನ್ನು ಬರೆಯಿಸಿ ಅವುಗಳ ಉಪಯೋಗ ಮಾಡಿಕೊಂಡರು.

ಸರ್ ವಾಲ್ಟರ್ ಇಲಿಯಟ್ ಶಾಸನಗಳ ಸಹಾಯದಿಂದ ಕನ್ನಡನಾಡಿನ ಇತಿಹಾಸವನ್ನು ಚಿತ್ರಿಸುವ ಪ್ರಯತ್ನ ಮಾಡಿದರು. ಅದರಲ್ಲೂ ಅವರು ಕದಂಬರು, ಚಾಳುಕ್ಯರಂತಹ

ರಾಜಮನೆತನಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದರು. ಅದಕ್ಕೆ ಸಂಬಂಧಿಸಿದಂತೆ ಹಲವಾರು ಲೇಖನಗಳನ್ನು ಬರೆದರು. ಅದರ ಪ್ರಯುಕ್ತವಾಗಿ ಕನ್ನಡ ಶಾಸನಗಳ ವ್ಯವಸ್ಥಿತವಾದ ಅಧ್ಯಯನ ನಡೆಯಿತು. ಕನ್ನಡ ನಾಡಿನ ಬೇರೆ ಬೇರೆ ಭಾಗಗಳಿಗೆ ಶಾಸನ ಸಂಶೋಧನೆಗಳಿಗಾಗಿ ಸಹಾಯಕ ಸಂಶೋಧಕರನ್ನು ಕಳುಹಿಸಿದರು. ೧೩೦೦ ಶಾಸನಗಳು ಸಂಗ್ರಹಗೊಂಡವು. ಅವುಗಳಲ್ಲಿ ೫೯೫ ಶಾಸನಗಳನ್ನು ಕೂಡಿಸಿ "Karnataka Desh Inscriptions" ಎಂಬ ಹಸ್ತಪ್ರತಿಯೊಂದು ಸಿದ್ಧವಾಯಿತು. ಆ ಕಾಲದಲ್ಲಿಯೇ ಜೇಮ್ಸ್ ಪ್ರಿನ್ಸೆಪ್ ಎಂಬುವವರು ಪ್ರಾಚೀನ ಲಿಪಿಗಳ ಮತ್ತು ಭಿನ್ನ ಲಿಪಿಯ ಸಹಾಯದಿಂದ ಹತ್ತನೆಯ ಶತಮಾನದ ಶಾಸನಗಳನ್ನು ಓದುವ ಪ್ರಯತ್ನ ಮಾಡಿದರು. ನಂತರ ತಾವು ತಿಳಿದುಕೊಂಡ ಶಾಸನಗಳ ಸಾರಾಂಶವನ್ನು ಬರೆದು ಲೇಖನ ರೂಪದಲ್ಲಿ ಪ್ರಕಟಿಸಿದರು. ಹೆನ್ರಿ ವಥೆನ್‌ರವರು ತಮ್ಮ ಶಾಸನಾಧ್ಯಯನದ ಚಟುವಟಿಕೆಗಳನ್ನು ಮುಂದುವರೆಸಿದರು. ೧೮೫೯ ರಲ್ಲಿ ಬೆಳಗಾವಿಯಲ್ಲಿರುವ ಪೂರ್ವದ ಹಳೆಗನ್ನಡ ಭಾಷೆಯಲ್ಲಿ ರಚಿತವಾದ ಹಲವು ಜೈನ ಶಾಸನಗಳನ್ನು ಮತ್ತು ಸಂಸ್ಕೃತ ತಾಮ್ರಪಟಗಳನ್ನು ಅನುವಾದಿಸಿ, ತಾಮ್ರ ಪಟಲ್ಲಿರುವ ಲಿಪಿಗೆ ತಾಮ್ರಪಟದಲ್ಲಿರುವ ಲಿಪಿಗೆ ಸಮಾನವಾದ ದೇವನಾಗರಿ ಲಿಪಿಯಲ್ಲಿ ಬರೆದರು.

ಇದೇ ಸಮಯದಲ್ಲಿ ಮೇಜರ್ ಡಿಕನ್ಸ್ ಎಂಬುವವರು ಬೆಳಗಾವಿ, ಹರಿಹರ, ಚಿತ್ರದುರ್ಗಗಳಿಂದ ಸಂಗ್ರಹಿಸಿದ ಸುಮಾರು ೯೦ ಶಾಸನಗಳ ಚಿತ್ರಗಳನ್ನು ಅಂದಿನ ಮೈಸೂರು ಸರಕಾರವು ಕ್ರಿ.ಶ. ೧೮೬೫ರಲ್ಲಿ ಪ್ರಕಟಿಸಿತು. ಆ ಕಾಲದಲ್ಲಿ ಡಾ. ಪಿಗು., ಕರ್ನಲ್ ಬ್ರನ್ಸ್, ಮಿ. ಹೋಪ, ಲ್ಯಾಸೆನ್ ಮುಂತಾದ ಸಂಶೋಧಕರಿದ್ದರು. ೧೮೩೬-೩೮ರ ಅವಧಿಯಲ್ಲಿ ಲಾಸೆನ್ ಮತ್ತು ಪ್ರಿನ್ಸೆಪ್‌ರವರು ಬ್ರಾಹ್ಮಿ ಲಿಪಿಯನ್ನು ಓದಿದರು. ಅದರಿಂದ ಶಾನಗಳನ್ನು ತ್ವರಿತಗತಿಯಲ್ಲಿ ಓದುವ ಮತ್ತು ಅರ್ಥೈಸಿಕೊಳ್ಳುವುದಕ್ಕೆ ಸಾಧ್ಯವಾಯಿತು. ಸಂಶೋಧಕರು, ಶಾಸನಾಸಕ್ತರು ಅದರಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಈ ಎರಡೂ ಯುಗಗಳ ಶಾಸನಗಳೂ ಮತ್ತು ಬರಹಗಳೆಲ್ಲ ಕೆಲವು ಮಹತ್ವದ ಪತ್ರಿಕೆಗಳಲ್ಲಿ ಪ್ರಕಟಗೊಂಡವು. ಅಂತಹ ಮುಖ್ಯವಾದ ಪತ್ರಿಕೆಗಳನ್ನು ಡಾ. ಎಸ್.ಎಂ. ಹಿರೇಮಠರವರು ತಮ್ಮ 'ಶಾಸನಾಸುಸಂಧಾನ' ಕೃತಿಯಲ್ಲಿ ದಾಖಲಿಸಿದ್ದಾರೆ.

"JBBRAS: Journal of the Bombay Branch of the Royal Asiatic Society.
JRAS: Journal of the Royal Asiatic Society
JASB: Journal of the Asiatic Society of Bengal
MJLS: Madras Journal of the literature and Science"[೫]

ಕರ್ನಾಟಕದ ಶಾಸನಗಳ ಅಧ್ಯಯನ ವಿಷಯದಲ್ಲಿ ಮೊತ್ತಮೊದಲು ಆಸಕ್ತಿವಹಿಸಿದ ಭಾರತೀಯ ವಿದ್ವಾಂಸರೆಂದರೆ ಬಾಲಗಂಗಾಧರ ಶಾಸ್ತ್ರೀಯವರು. ಕೊಲ್ಲಾಪುರದ ಸುತ್ತಮುತ್ತ ದೊರಕಿದ 'ದೇವನಾಗರಿ' ಮತ್ತು 'ಹಳೆಗನ್ನಡ' ಲಿಪಿಗಳಲ್ಲಿರುವ ಏಳು ಪ್ರಾಚೀನ ಶಾಸನಗಳನ್ನು ಓದಿ ಅವುಗಳ ಸಾರಾಂಶವನ್ನು ೧೮೪೫ ರಲ್ಲಿ ಪ್ರಕಟಿಸಿದರು.  ಇವುಗಳಲ್ಲಿ ನಾಲ್ಕು ದೇವನಾಗರಿ ಲಿಪಿಯಲ್ಲಿವೆ.  ಮೂರು ಕನ್ನಡ ಲಿಪಿಯಲ್ಲಿವೆ.  ಕ್ರಿ.ಶ. ೧೮೬೫–೬೬ ರಲ್ಲಿ ಮೈಸೂರು ಮತ್ತು ಉತ್ತರ ಕರ್ನಾಟಕಗಳಲ್ಲಿ ಶಾಸನಗಳ ಭಾವಚಿತ್ರಗಳನ್ನು ತೆಗೆದು ಸಂಗ್ರಹಿಸುವ ಕಾರ್ಯವು ನಡೆಯಿತು.  ಕ್ರಿ.ಶ. ೧೮೦೭ ರಲ್ಲಿಯೇ ಡಾ. ಭಾವುದಾಜಿಯವರು ಮೈಸೂರು ಮತ್ತು ಉತ್ತರ ಕರ್ನಾಟಕದಲ್ಲಿ ಸಂಗ್ರಹಿಸಿದ ಶಾಸನಗಳ ಭಾವಚಿತ್ರಗಳ ಸಂಗ್ರಹವನ್ನು ಕುರಿತು ವಿವೇಚನೆ ಮಾಡಿರುವುದನ್ನು ಡಾ. ಎಂ. ಚಿದಾನಂದಮೂರ್ತಿಯವರು ದಾಖಲಿಸಿದ್ದಾರೆ. ಜೆ.ಎಫ್. ಫ್ಲೀಟ್‌ರವರು ಸಂಪಾದಿಸಿ ಪ್ರಕಟಿಸಿರುವ ಸಂಪುಟದಲ್ಲಿ ಕದಂಬರ ಸಂಸ್ಕೃತ ಮತ್ತು ಕನ್ನಡ ಶಾಸನಗಳಿವೆ. ಅವರು ಅವುಗಳನ್ನು ಬಹಳ ಸಮರ್ಪಕವಾಗಿ ಓದಿರುವುದು ತಿಳಿದುಬರುತ್ತದೆ. ಶಾಸನಗಳನ್ನು ಓದುವುದರಲ್ಲಿ ಅವರಿಗೆ ಯಾವ ಕಷ್ಟವೂ ಇದ್ದಂತೆ ತೋರುವುದಿಲ್ಲ. ಸೌಂದತ್ತಿ ಮತ್ತು ಬೆಳಗಾವಿಯ ರಟ್ಟರ ಎಂಟು ಸಂಸ್ಕೃತ ಮತ್ತು ಕನ್ನಡ ಶಾಸನಗಳನ್ನು ಪ್ರಕಟಿಸಿದ್ದಾರೆ. **"**ಶಾಸನಗಳನ್ನು ಓದುವುದರಲ್ಲಿ ಫ್ಲೀಟರಿಗೆ ಇತರರ ಸಹಾಯದ ಅಗತ್ಯವಿದ್ದಂತೆ ಕಾಣಿಸುವುದಿಲ್ಲ. ಅವರು ಸಂಪಾದಿಸಿರುವ ಶಾಸನಗಳೆಲ್ಲ ಅವರ ಸ್ವತಃ ಕೈಯಿಂದ ಪ್ರತಿ ಮಾಡಿಕೊಂಡಂಥವು**"**[೬]. ಅವರಿಗಿಂತ ಹಿಂದೆ ಈ ದಿಸೆಯಲ್ಲಿ ಕೆಲಸ ಮಾಡಿದವರ ಅನುಭವದ ಬೆಂಬಲ ಅವರಿಗಿತ್ತು.

**ಇ) ಡಾ. ಫ್ಲೀಟ್ ಮತ್ತು ರೈಸ್ ಯುಗ (ಕ್ರಿ.ಶ. ೧೮೭೦ರ ತರುವಾಯ...)**

ಫ್ಲೀಟ್‌ರವರು ೧೮೬೭ರಲ್ಲಿ ಮುಂಬೈ ಸರಕಾರದ ಕಂದಾಯ ಇಲಾಖೆಯಲ್ಲಿ ನೌಕರಿಗೆ ಸೇರಿದರು. ಅವರು ಕೈಕೊಂಡ ಸಂಶೋಧನೆಯು ಅಗಾಧವಾದುದು. ಸಂಸ್ಕೃತದೊಂದಿಗೆ ಕನ್ನಡ, ಮರಾಠಿ... ಮುಂತಾದ ಭಾಷೆಗಳನ್ನು ಅಧ್ಯಯನ ಮಾಡಿದರು. ಶಾಸನಾಧ್ಯಯನಕ್ಕೆ

ಸಂಬಂಧಿಸಿದ್ದಂತೆ ಅವರ ಕಾರ್ಯ ಯೋಜನೆಯು ಅತ್ಯಂತ ವಿಸ್ತಾರವಾಗಿದೆ. ಶಾಸನ ಸಂಗ್ರಹದಲ್ಲಿ ಒಂದೊಂದು ಶಾಸನದ ಬಗೆಗೆ ಹತ್ತು-ಹಲವು ವಿವರಗಳನ್ನು ಟಿಪ್ಪಣಿ ಮಾಡಿಕೊಂಡು ಹಲವಾರು ಐತಿಹಾಸಿಕ ಘಟನೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ.

೧೮೭೬ ರಲ್ಲಿ ಡಾ. ಬರ್ಗೆಸ್ ಎನ್ನುವ ವಿದ್ವಾಂಸರು "The Indian Antiquary" ಎಂಬ ಪತ್ರಿಕೆಯನ್ನು ಆರಂಭಿಸಿದುದು ಭಾರತೀಯ ವಿದ್ವತ್ತಿಗೆ, ಅದರಲ್ಲೂ ಕರ್ನಾಟಕದ ಶಾಸನಗಳ ಅಧ್ಯಯನಕ್ಕೆ ದೊಡ್ಡ ಉತ್ತೇಜನವನ್ನು ತಂದುಕೊಟ್ಟಿತು. ಅದರಲ್ಲಿ ಭಾರತಕ್ಕೆ ಸಂಬಂಧಿಸಿದ ದೇಶ-ವಿದೇಶಗಳ ಲೇಖಕರು, ಸಂಶೋಧಕರು ಬರೆದ ಬರಹಗಳು ಪ್ರಕಟಗೊಳ್ಳುತ್ತಿದ್ದವು. ಜೆ.ಎಫ್. ಫ್ಲೀಟ್‌ರವರ ಹಲವಾರು ಸಂಶೋಧನಾತ್ಮಕ ಲೇಖನಗಳು ಅದರಲ್ಲಿ ಪ್ರಕಟಗೊಂಡಿವೆ. ಆ ಕಾಲದಲ್ಲಿ ಭಾರತದಲ್ಲಿ ಯಾವ ಕೆಲಸವನ್ನು ಕೈಗೊಂಡರೂ ಅದು ಸರಕಾರದ ಮೂಲಕವೇ ಆಗಬೇಕಾಗಿತ್ತು. ಪ್ರಾಚೀನ ವಸ್ತುಗಳ ಅಧ್ಯಯನದ ಮಹತ್ವದ ಕಡೆ ಸರಕಾರದ ಗಮನವನ್ನು ಹರಿಸಲು ಈ ಪತ್ರಿಕೆ ಬಹುಮಟ್ಟಿಗೆ ಕಾರಣವಾಯಿತು. ಈ ಪತ್ರಿಕೆಯ ಪ್ರಥಮ ಸಂಪುಟದಲ್ಲಿ ಫ್ಲೀಟ್‌ರವರು ಕನ್ನಡ ಶಾಸನವೊಂದರ ಅನುವಾದವನ್ನು ಕೊಟ್ಟಿದ್ದಾರೆ. ಅಲ್ಲದೇ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳೆಂದರೆ...

೧. "ಮುಂಬೈ ಪ್ರಾಂತದ ಕನ್ನಡ ಜಿಲ್ಲೆಗಳ ರಾಜಮನೆತನಗಳು (೧೮೯೬)
೨. ಪೂರ್ವದ ಗುಪ್ತರಾಜರು ಮತ್ತು ಅವರ ಉತ್ತರಾಧಿಕಾರಿಗಳ ಶಾಸನಗಳು (೧೮೮೮)
೩. ಪಾಲಿ-ಸಂಸ್ಕೃತ ಮತ್ತು ಹಳಗನ್ನಡ ಶಾಸನಗಳು
೪. ಭಾರತೀಯ ಶಾಸನಶಾಸ್ತ್ರ (೧೯೦೭)"[೭]

ಬಿ.ಎಲ್. ರೈಸ್‌ರವರು ಮಾಡಿದ ಶಾಸನ ಕಾರ್ಯವು ಅದ್ಭುತವಾದುದು. ಮೈಸೂರು ಸಂಸ್ಥಾನದ ಪ್ರದೇಶದಲ್ಲಿ ಅವರು ೯೦೦೦ ಶಾಸನಗಳನ್ನು ಸಂಶೋಧಿಸಿದರು! ಅವರಿಗೆ ಭಾರತೀಯ ಸಂಸ್ಕೃತಿಯ ಮೇಲೆ ವಿಶೇಷ ಪ್ರೀತಿಯಿತ್ತು. ೧೮೯೦ ರಲ್ಲಿ ಪುರಾತತ್ವ ಇಲಾಖೆಯಲ್ಲಿ ಪೂರ್ಣಾವಧಿಯ ಅಧಿಕಾರಿಯಾದರು. ಇದರಿಂದ ಅವರಿಗೆ ಶಾಸನಗಳ ಅಧ್ಯಯನ-ಸಂಶೋಧನೆ-ಸಂಗ್ರಹದ ಕಾರ್ಯವು ಹೆಚ್ಚು ಸರಳವಾಯಿತು. ತಮ್ಮ ಕಾಲದಲ್ಲಿ ರೈಸ್‌ರವರು 'ಎಪಿಗ್ರಾಫಿಯಾ ಕರ್ನಾಟಕ'ದ ೧೨ ಸಂಪುಟಗಳನ್ನು ಜಿಲ್ಲಾವಾರು ಕ್ರಮದಲ್ಲಿ ಸಂಪುಟಗಳಾಗಿ ಹೊರತಂದರು. ಈ ಸಂಪುಟಗಳಲ್ಲಿ ೧೨೦೦ ಶಾಸನಗಳ ಸಂಗ್ರಹವಿದೆ.

ಫ್ಲೀಟ್ ಮತ್ತು ರೈಸ್ ಇವರಿಬ್ಬರೂ ಕರ್ನಾಟಕದ ಶಾಸನಾಧ್ಯಯನದ ರಂಗದಲ್ಲಿ ಅಗ್ರಗಣ್ಯರು. ಅವರ ಶಾಸನ ಕ್ಷೇತ್ರದ ಕಾರ್ಯ ಸಾಧನೆಗಳ ವಿಸ್ತಾರವನ್ನು ಗುರುತಿಸಿಯೇ ಪ್ರಾಜ್ಞರು ಅವರನ್ನು "ಶಾಸನಾಧ್ಯಯನ ಕ್ಷೇತ್ರದ ಅಶ್ವಿನಿ ದೇವತೆಗಳು" ಎಂದು ಕರೆದಿದ್ದಾರೆ.

ಫ್ಲೀಟ್‌ರವರು ಕದಂಬರ ಸಂಸ್ಕೃತ ಮತ್ತು ಕನ್ನಡ ಶಾಸನಗಳನ್ನು ಪ್ರಕಟಿಸಿದರು. "On some Sanskrit copper plates found in the Bengaum colletorate" ಎಂಬ ಲೇಖನದಿಂದಲೇ ಇವರ ಶಾಸನ ಅಧ್ಯಯನವು ಆರಂಭಗೊಂಡಿತು"[೮]. ೧೮೭೮ರಲ್ಲಿ ಫ್ಲೀಟ್‌ರವರ "Pali Sanskrit and Old canaries Indians from the Bombay presidency and parts of the Madras Presidency and Mysore" ಎಂಬ ಸಂಗ್ರಹ ಗ್ರಂಥವು ಪ್ರಟಕವಾಯಿತು. ಆದರೆ ರೈಸ್‌ರವರು ಶಾಸನಗಳನ್ನು ಯಥಾವತ್ತಾಗಿ ಪ್ರಕಟಿಸಲಿಲ್ಲ. ಅವುಗಳನ್ನು ಅನುವಾದ ಮಾಡಿ ಅವುಗಳೊಂದಿಗೆ ಪ್ರಕಟಿಸಿದ್ದಾರೆ. ಒಂದೊಂದು ಶಾಸನ ಸಂಪುಟಕ್ಕೂ ಅವರು ಮೌಲಿಕವಾದ ಮುನ್ನುಡಿ ಬರೆದಿರುವರು. ಫ್ಲೀಟ್‌ರವರು ಪ್ರತಿಯೊಂದು ಶಾಸನಕ್ಕೂ ಟೀಕೆ, ಟಿಪ್ಪಣಿ, ವಿವರಣೆ, ಅನುವಾದ, ಐತಿಹಾಸಿಕ ಮಹತ್ವ–ಇವೆಲ್ಲ ಬರೆದು ಪ್ರಕಟಿಸಿದ್ದಾರೆ. ಪ್ರಕಟಿಸಿರುವ ಶಾಸನಗಳ ಸಂಖ್ಯೆಯಿಂದ ರೈಸ್‌ರವರ ಶಾಸನಗಳ ಸಂಖ್ಯೆ ದೊಡ್ಡದು. ಅವರಿಗೆ ಪ್ರಥಮ ಸ್ಥಾನ ಸಲ್ಲಬೇಕು. ಆದರೆ ಫ್ಲೀಟ್‌ರವರ ಕಾರ್ಯಕ್ಷೇತ್ರ ಕರ್ನಾಟಕಕ್ಕಿಂತ ಹೆಚ್ಚು ವಿಶಾಲವಾಗಿದ್ದುದು ಮಾತ್ರವಲ್ಲದೆ ಅವರ ಅಧ್ಯಯನದ ವ್ಯಾಪ್ತಿಯು ವಿಶಾಲವಾಗಿದ್ದಿತು. ಅವರು ನೂರಾರು ಸಂಸ್ಕೃತ ಶಾಸನಗಳನ್ನು ಸಂಪಾದಿಸಿದ್ದಾರೆ. 'ಗುಪ್ತರ ಶಾಸನಗಳ ಸಂಪುಟ' ಅವರ ಶ್ರಮ ಸಾಧ್ಯವಾದ ಸಂಶೋಧನೆ ಮತ್ತು ಪಾಂಡಿತ್ಯಗಳ ಪ್ರತೀಕವಾಗಿದೆ. "ಫ್ಲೀಟ್ ಅವರದು ರೈಸ್ ಅವರ ಬುದ್ಧಿಗಿಂತ ಹೆಚ್ಚು ಹರಿತವಾದುದು. ಅವರದು ತೀಕ್ಷ್ಣವಾದ ವಿಮರ್ಶಕಮತಿ"[೯] ಫ್ಲೀಟ್‌ರವರಿಗೆ ಸಂಸ್ಕೃತಿ ಮತ್ತು ಕನ್ನಡ ಭಾಷೆ ಹಾಗೂ ಸಾಹಿತ್ಯಾದಿಗಳು, ಖಗೋಳ ವಿಜ್ಞಾನ ಮತ್ತು ಶಾಸನ ಸಾಹಿತ್ಯಗಳಲ್ಲಿ ಆಳವಾದ ಆಸಕ್ತಿ ಮತ್ತು ಜ್ಞಾನವಿತ್ತು. ಈಗ ಭಾರತೀಯ ಕಾಲಾನುಕ್ರಮಣಿಕೆ ಮತ್ತು ಶಾಸನ ವಿದ್ಯೆಗಳು ವೈಜ್ಞಾನಿಕ ತಳಹದಿಯ ಮೇಲೆ ನಿಲ್ಲಲು ಇವರ ಶ್ರಮ ಅಪಾರವಾಗಿದೆ. ಅವರು ಒಂದೊಂದು ಶಾಸನವನ್ನು ವಿಸ್ತಾರವಾದ ಟೀಕೆಯೊಂದಿಗೆ ಪ್ರಕಟಿಸಿದ್ದಾರೆ. ಶಾಸನ ದೊರೆತ ಸ್ಥಳ, ಶಾಸನದ ಗಾತ್ರ, ಅದು

ಈಗ ದೊರೆತ ಸ್ಥಿತಿ, ಅದರ ಲಿಪಿ, ಆ ಲಿಪಿಯ ವೈಶಿಷ್ಟ್ಯ, ಆ ಲಿಪಿಯಲ್ಲಿನ ದೋಷಗಳು, ಆ ಶಾಸನದ ಭಾಷೆ, ಅಲ್ಲಿ ಕಂಡುಬರುವ ಅಪೂರ್ವ ಪದಗಳು, ಆ ಶಾಸನಗಳಲ್ಲಿ ಕಂಡುಬರುವ ರಾಜರ ವಿಷಯ, ಅವರ ಕುಲದ ಇತಿಹಾಸ, ಆ ಶಾಸನಗಳಲ್ಲಿ ಕಂಡುಬರುವ ಅಪೂರ್ವ ಸಾಂಸ್ಕೃತಿಕ ಅಂಶಗಳು–ಇವೆಲ್ಲವುಗಳನ್ನು ಚರ್ಚಿಸಿದ್ದಾರೆ. ಶಾಸನಗಳ ನಾಲ್ಕು ಸಾಲಿನ ಬರಹಕ್ಕೂ ನಾಲ್ಕಾರು ಪುಟಗಳ ಮುನ್ನುಡಿ ಬರೆದಿರುವುದು ಫ್ಲೀಟ್‌ರವರ ಆಸಕ್ತಿ ಮತ್ತು ವಿದ್ವತ್ತಿನ ದ್ಯೋತಕವಾಗಿದೆ. ಅದ್ಭುತ ಜ್ಞಾಪಕಶಕ್ತಿಯ, ಬಹು ಚಟುವಟಿಕೆಯ ಮತ್ತು ಎಚ್ಚರಿಕೆಯ, ಸರ್ವವನ್ನು ಗ್ರಹಿಸಬೇಕು ಎಂಬ ಜ್ಞಾನತೃಷೆಯು ಅವರಲ್ಲಿತ್ತು.

ಫ್ಲೀಟ್‌ರವರು ಮಾಡಿದಂತೆ ರೈಸ್ ಅಕ್ಷರಮಟ್ಟಿಗೆ ಒಂದೊಂದು ಶಾಸನಕ್ಕೂ ಕೆಲಸ ಮಾಡಲಿಲ್ಲ. ಅವರ ಪ್ರಧಾನ ಉದ್ದೇಶ, ತಮಗೆ ದೊರಕುವ ಶಾಸನಗಳೆಲ್ಲವನ್ನು ಸಂಗ್ರಹಿಸಿ ಪ್ರಕಟಿಸುವುದಾಗಿತ್ತು. ಹಾಗೆ ಪ್ರಕಟಿಸಿದ ಶಾಸನಗಳಲ್ಲಿ ಒಂದೊಂದಕ್ಕೂ ಟಿಪ್ಪಣಿಯಾಗಲಿ, ಅವುಗಳ ಶುದ್ಧ ಪಾಠದ ಕಡೆಗಾಗಲಿ, ಸಮರ್ಪಕವಾದ ಅನುವಾದದ ಕಡೆಗಾಗಲಿ ಅವರು ಪೂರ್ಣ ಗಮನ ನೀಡಲಿಲ್ಲ. ಆದರೂ ಅವರ ವಿಷಯ ಪರಿಜ್ಞಾನ, ಐತಿಹಾಸಿಕ ವಿವೇಚನೆಗಳು ಅದ್ಭುತವಾಗಿವೆ.

**ದೇಶಿಯ ವಿದ್ವಾಂಸರ ಕೊಡುಗೆ**

ಶಾಸನಗಳ ಅಧ್ಯಯನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಜೊತೆಗೆ ದೇಶಿಯ ವಿದ್ವಾಂಸರ ಕೊಡುಗೆಯು ಅಪಾರವಾಗಿದೆ. ಪ್ರಾಚೀನ ಭಾರತದ ಜ್ಞಾನ, ಅದರಲ್ಲೂ ಶಾಸನಗಳ ಬಗೆಗೆ ಮೊದಲು ಆಸಕ್ತಿ ತೋರಿಸಿದವರೆಂದರೆ ವೆಂಕಟಬೋರಯ್ಯ ಕವೆಲ್ಲಿ. ಇವರು ಮೆಕೆಂಝಿಯವರಿಗೆ ಹಲವಾರು ರೀತಿಯಲ್ಲಿ ಸಹಾಯ ಮಾಡಿದರು. ಸ್ವತಃ ಶಾಸನ ಕುರಿತು ಲೇಖನ ಬರೆದರು. ಇವರು ಸ್ವತಂತ್ರವಾಗಿ ಕೆಲಸ ಮಾಡದೇ ಮೆಕೆಂಝಿಗೆ ಸಹಾಯಕನಾಗಿ ಕಾರ್ಯ ನಿರ್ವಹಿಸಿರುವುದರಿಂದ ಇವರ ಹೆಸರು ಮುಖ್ಯವಾಹಿನಿಯಲ್ಲಿ ಬರದೆ ಹೋಯಿತು. “ಕವೆಲ್ಲಿ ವೆಂಕಟಬೋರಯ್ಯ ಅವರ ಉತ್ಸಾಹ, ನಿಷ್ಠೆ, ಉಳಿದ ದೇಶಿಯರಲ್ಲಿ ಕಾಣಬಾರದ ಪ್ರತಿಭೆಗಳಿಗೆ ಅಲ್ಪಕಾಣಿಕೆ ರೂಪವಾಗಿ ಅವರ ಹೆಸರನ್ನು ಶಿಲಾಶಾಸನದ ಅಂಚಿನಲ್ಲಿ ಕೊರೆಯಿಸಿದ್ದೇನೆ”[೧೦] ಎಂದು ಮೆಕೆಂಝಿಯವರು ಅಭಿಪ್ರಾಯಪಡುತ್ತಾರೆ. ೧೮೦೭ರಲ್ಲಿ ಪ್ರಕಟವಾದ ಶಾಸನವೊಂದರ

ಸಾರಾಂಶವನ್ನು ಬರೆಯುವುದರಲ್ಲಿ ವೆಂಕಟಬೋರಯ್ಯರವರದೇ ಅಗ್ರ ಪಾಲು. ಇದರಲ್ಲಿಯೇ ಮೆಕೆಂಝಿಯವರು ಬೋರಯ್ಯರವರ ಹೆಸರನ್ನು ಕೆತ್ತಿಸಿರುವರು.

ಕರ್ನಾಟಕದ ಶಾಸನಗಳ ವಿಷಯದಲ್ಲಿ ಆಸಕ್ತಿವಹಿಸಿ ಮುಂದೆ ಬಂದ ಮತ್ತೊಬ್ಬ ಭಾರತೀಯ ವಿದ್ವಾಂಸರೆಂದರೆ ಬಾಲಗಂಗಾಧರ ಶಾಸ್ತ್ರೀಯವರು. ಇವರು ಕೊಲ್ಲಾಪುರದ ಸುತ್ತಮುತ್ತಲು ದೊರಕಿದ ದೇವನಾಗರಿ ಮತ್ತು ಹಳಗನ್ನಡ ಲಿಪಿಗಳಲ್ಲಿರುವ ಏಳು ಪ್ರಾಚೀನ ಶಾಸನಗಳನ್ನು ಓದಿ ಅವುಗಳ ಸಾರಾಂಶವನ್ನು ೧೮೪೫ ರಲ್ಲಿ ಹೊರಗೆ ಹಾಕಿದರು. ಆಗ ಅವರು ಕನ್ನಡಬಲ್ಲ ವಿದ್ವಾಂಸರೊಬ್ಬರ ಸಹಾಯವನ್ನು ಪಡೆದುಕೊಂಡುದಾಗಿ ಹೇಳಿಕೊಂಡಿರುವುದನ್ನು ಡಾ. ಎಸ್.ಎಂ. ಹಿರೇಮಠರವರು (೨೦೧೪, ೧೨) ದಾಖಲಿಸಿದ್ದಾರೆ. ೧೮೭೦ರ ಸುಮಾರಿಗೆ ಡಾ. ಭಾವುದಾಜಿಯವರು ಮೈಸೂರು ಮತ್ತು ಉತ್ತರ ಕರ್ನಾಟಕಗಳಲ್ಲಿ ಸಂಗ್ರಹಿಸಿದ ಶಾಸನಗಳ ಭಾವಚಿತ್ರಗಳ ಸಂಗ್ರಹವನ್ನು ಕುರಿತು ವಿವೇಚನೆ ಮಾಡಿ ಲೇಖನಗಳನ್ನು ಬರೆದರು.

ಫ್ಲೀಟರ್‌ರವರ ಸಂಶೋಧನೆಯಲ್ಲಿ ಸಹಾಯ ಮಾಡಿದ ವೆಂಕಟರಂಗೋ ಕಟ್ಟಿ ಮತ್ತು ಗಂಗಾಧರ ಮಡಿವಾಳೇಶ್ವರ ತುರವರಿಯವರ ಹೆಸರುಗಳು ಇಲ್ಲಿ ಉಲ್ಲೇಖನೀಯ.

ಮುಂದಿನ ದಿನಗಳಲ್ಲಿ ಶಾಸನ ಕ್ಷೇತ್ರದಲ್ಲಿ ಹಲವಾರು ವಿದ್ವಾಂಸರು ಬಂದರು. ಅವರಲ್ಲಿ ಅತ್ಯಂತ ಪ್ರಮುಖರಾದವರೆಂದರೆ, ಕೆ.ಬಿ. ಪಾಠಕ್, ಆರ್. ನರಸಿಂಹಚಾರ್, ಆರ್. ರಾಮರಾವ್, ಎಂ.ಹೆಚ್. ಕೃಷ್ಣ, ಆರ್. ಶಾಮಾಶಾಸ್ತ್ರೀ, ಆರ್.ಎಸ್. ಪಂಚಮುಖಿ, ಎನ್. ಲಕ್ಷ್ಮೀನಾರಾಯಣರಾವ್, ಪಾಂಡುರಂಗ ದೇಸಾಯಿ, ಕೆ.ಜಿ. ಕುಂದಣಗಾರ, ಎಸ್.ಸಿ. ನಂದೀಮಠ, ಎ.ಎಂ. ಅಣ್ಣಿಗೇರಿ, ಮೇವುಂಡಿ ಮಲ್ಲಾರಿ, ಜಿ.ಎಸ್. ಗಾಯಿ, ಡಾ. ಎಂ. ಚಿದಾನಂದಮೂರ್ತಿ, ಡಾ. ಎಂ.ಎಂ. ಕಲಬುರ್ಗಿ, ಪ್ರೊ. ಎಸ್. ಶೆಟ್ಟರ್, ಡಾ. ವಿ. ಶಿವಾನಂದ, ಡಾ. ಬಿ.ಆರ್. ಹಿರೇಮಠ... ಈ ಮುಂತಾದವರು. ಹಲವಾರು ಶಾಸನ, ತಾಮ್ರಪಟಗಳನ್ನು ಸಂಗ್ರಹಿಸಿ ಮೌಲಿಕವಾದ ಲೇಖನ–ಕೃತಿಗಳನ್ನು ರಚಿಸಿದರು.

ಅವರ ನಂತರದ ಪರಂಪರೆಯೊಂದು ಬೆಳೆದು ಬಂದಿದೆ. ಅವರಲ್ಲಿ ಹಲವಾರು ಸಂಘ–ಸಂಸ್ಥೆ–ವ್ಯಕ್ತಿಗಳು ಬರುತ್ತಾರೆ. ಕನ್ನಡ ಸಾಹಿತ್ಯ ಪರಿಷತ್ತು, ಮೈಸೂರು ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯಗಳಂತಹ ಸಂಸ್ಥೆಗಳಲ್ಲಿ ಶಾಸನಾಧ್ಯಯನಕ್ಕೆ ಅವಕಾಶ ದೊರಕಿ

ಹಲವಾರು ಜನ ಶಾಸನ ತಜ್ಞರು, ಆಸಕ್ತರು ಮುನ್ನೆಲೆಗೆ ಬರುವಂತಾಯಿತು. ಕನ್ನಡ ವಿಶ್ವವಿದ್ಯಾಲಯವು ತನ್ನ ಶಾಸನ ವಿಭಾಗದಿಂದ ಜಿಲ್ಲಾವಾರು ಶಾಸನ ಸಂಪುಟಗಳ ಪ್ರಕಟಣೆಯ ಮೂಲಕ ಮೂಲೆಗುಂಪಾಗಿರುವ ಶಾಸನ ಸಂಪತ್ತನ್ನೆಲ್ಲ ಹೊರಗೆ ಹಾಕುತ್ತಲಿದೆ. ಸದ್ಯದ ಶಾಸನಾಧ್ಯಯನ ಕ್ಷೇತ್ರವನ್ನು ಗಮನಿಸಿದಾಗ ಹಲವಾರು ಶಾಸನ ತಜ್ಞರು ಕಂಡುಬರುತ್ತಾರೆ. ಪ್ರೊ. ಆರ್. ಶೇಷಶಾಸ್ತ್ರಿ, ಕೆ.ಆರ್. ಗಣೇಶ, ಪ್ರೊ. ದೇವರ ಕೊಂಡಾರೆಡ್ಡಿ, ಪ್ರೊ. ಪರಮಶಿವಮೂರ್ತಿ, ಪ್ರೊ. ಜಿ.ಎಂ. ಮಂಜುನಾಥ, ಡಾ. ಹನುಮಾಕ್ಷಿ ಗೋಗಿ, ಪ್ರೊ. ಎಸ್.ಕೆ. ಕೊಪ್ಪ, ಪ್ರೊ. ಜೆ.ಎಂ. ನಾಗಯ್ಯ, ಪ್ರೊ. ಜಿ.ಎನ್ ಉಪಾಧ್ಯ, ಪ್ರೊ ಮನ್ನಾಚಾರ್ಯ, ಡಾ. ಕೊಟ್ರೇಶ, ಪ್ರೊ. ಭಟಸೂರಿ, ಸೀತಾರಾಮ ಜಾಹಗೀರದಾರ, ಪ್ರೊ. ಎಸ್.ಎಂ. ಹಿರೇಮಠ, ಡಾ. ಬಿ.ಆರ್. ಕೊಂಡಾ, ಡಾ. ಎಂ.ಎಸ್. ಶಿರವಾಳ... ಹೀಗೆಯೇ ಇಲ್ಲಿ ಇನ್ನಷ್ಟು ಜನರನ್ನು ಹೆಸರಿಸಬಹುದಾಗಿದೆ.

ಆರ್. ನರಸಿಂಹಾಚಾರ್ಯರ "ಶ್ರವಣಬೆಳಗೊಳದ ಶಾಸನಗಳು" (ರೈಸ್ ಅವರ ಸಂಗ್ರಹದ ಪರಿಷ್ಕರಣ), ಆರ್.ಎಸ್. ಪಂಚಮುಖಿ ಮತ್ತು ಎನ್. ಲಕ್ಷ್ಮೀನಾರಾಯಣರಾಯರು ಸಂಪಾದಿಸಿದ "ಬೊಂಬಾಯಿ ಕರ್ನಾಟಕದ ಶಾಸನಗಳು" (ಎರಡು ಸಂಪುಟಗಳು, ಎರಡನೆಯ ಸಂಪುಟವನ್ನು ಎನ್. ಲಕ್ಷ್ಮೀನಾರಾಯಣರೊಬ್ಬರೇ ಸಂಪಾದಿಸಿರುವರು) ಪಂಚಮುಖಿಯವರ "ಕರ್ನಾಟಕದ ಶಾಸನ ಸಂಪುಟಗಳು", ಆರ್. ಶಾಮಾಶಾಸ್ತ್ರಿ ಮತ್ತು ಎನ್. ಲಕ್ಷ್ಮೀನಾರಾಯಣರಾಯರು ಸಂಪಾದಿಸಿದ 'ದಕ್ಷಿಣ ಭಾರತದ ಶಾಸನಗಳು' ಉಲ್ಲೇಖನಾರ್ಹವಾದವು. ಈಚೆಗೆ ಉದಕಮಂಡಲದಲ್ಲಿರುವ (ಈಗಿನ ಮೈಸೂರು) ಕೇಂದ್ರ ಶಾಸನ ಇಲಾಖೆಯು ಹೈದರಾಬಾದ ಕರ್ನಾಟಕದ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸಿದೆ.

ಶಾಸನಗಳ ಅಧ್ಯಯನ ಇತಿಹಾಸವನ್ನು ಹೀಗೆ ಸಂಗ್ರಹಿಸಬಹುದು. ೧೮ನೆಯ ಶತಮಾನದ ತನಕ ಇವುಗಳ ಅಧ್ಯಯನವು ಆರಂಭವಾಗುದಿರಲಿ, ಇವುಗಳ ಮಹತ್ವವನ್ನು ಯಾರೂ ಗುರುತಿಸಿರಲಿಲ್ಲ. ಆ ಶತಮಾನದ ಕೊನೆಯಲ್ಲಿ ಶ್ರೀರಂಗಪಟ್ಟಣದ ಅರಸೊತ್ತಿಗೆ ನಾಶವಾಗಿ ಆಂಗ್ಲರ ಪ್ರಭುತ್ವ ನೆಲೆಸಿತು. ೧೭೯೯–೧೮೦೦ ಆಂಗ್ಲ ಅಧಿಕಾರಿ ಮೆಕೆಂಝಿಯವರು ಭಾರತೀಯ ಶಾಸನ, ಸಾಹಿತ್ಯ ಮತ್ತು ಸಂಸ್ಕೃತಿಯ ಬೆಲೆಯನ್ನರಿತು ಅವುಗಳಲ್ಲಿ ಆಸಕ್ತಿಯನ್ನು

ತಾಳಿ ಸಂಗ್ರಹಿಸಲು ಮುಂದಾದರು. ಕವೆಲ್ಲಿ ವೆಂಕಟಬೋರಯ್ಯರವರು ದೇಶಿಯ ಶಾಸನಗಳನ್ನು ಓದುವ ಪ್ರಯತ್ನವನ್ನು ಮಾಡಿದರು. ತಕ್ಕಮಟ್ಟಿಗೆ ಯಶಸ್ವಿಯಾದರು. ೧೮೩೬-೩೮ರಲ್ಲಿ ಲಾಸೆನ್ ಮತ್ತು ಪ್ರಿನ್ಸೆಪ್ ಎನ್ನುವವರು ಬ್ರಾಹ್ಮಿ ಲಿಪಿಯನ್ನು ಓದಿದರು. ಅಷ್ಟೊತ್ತಿಗಾಗಲೇ ಏಥೆನ್... ಮುಂತಾದವರು ಕರ್ನಾಟಕದ ಶಾಸನಗಳನ್ನು ಓದಲು ಪ್ರಯತ್ನಿಸಿದ್ದರು. ಇದರಲ್ಲಿ ಪ್ರಾರಂಭದ ಅತ್ಯಂತ ಪ್ರಮುಖ ವಿದ್ವಾಂಸ ಹೆಚ್ ವಾಲ್ಟರ್ ಇಲಿಯಟ್ ಅವರು. ಬ್ರಾಹ್ಮಿಲಿಪಿಯನ್ನು ಸರಿಯಾಗಿ ಓದಿದುದು, ಕರ್ನಾಟಕದ ಶಾಸನಗಳನ್ನು ಓದುವ ಕಾರ್ಯವನ್ನು ತ್ವರಿತಗೊಳಿಸಿತು. ಶಾಸನಗಳನ್ನು ಓದುವ ಕಾರ್ಯವು ಪರಿಪೂರ್ಣತೆಯನ್ನು ಮುಟ್ಟಿದುದು ಫ್ಲೀಟ್ ಮತ್ತು ರೈಸ್‌ರವರಲ್ಲಿ. ಸುಮಾರು ೧೮೬೮-೭೦ರ ಹೊತ್ತಿಗೆ ಶಾಸನಾಧ್ಯಯನವು ಒಂದು ನಿರ್ದಿಷ್ಟತೆಯನ್ನು ಪಡೆಯಿತು. ಭಾಷೆಯ ವಿಷಯದಲ್ಲಿ ಕರ್ನಾಟಕದ ದೇಶಿಯ ವಿದ್ವಾಂಸರ ಕೊಡುಗೆಯಿದ್ದರೂ; ಲಿಪಿಯನ್ನು ಓದುವುದರಲ್ಲಿ ಪಾಶ್ಚಾತ್ಯ ವಿದ್ವಾಂಸರ ಪ್ರಯತ್ನವೇ ಮುಖ್ಯವಾದುದು.

ಆರಂಭದಲ್ಲಿ ಶಾಸನ ಮತ್ತು ಅದರಲ್ಲಿ ಏನಿದೆಯೆಂಬ ಕುತೂಹಲದ ಫಲವಾಗಿ ಅಧ್ಯಯನಕ್ಕೊಳಗಾದ ಶಾಸನ ಕ್ಷೇತ್ರವು ನಂತರದ ಕಾಲದಲ್ಲಿ ಇತಿಹಾಸ-ಸಂಸ್ಕೃತಿಯ ಆಕರ ಕ್ಷೇತ್ರವಾಗಿ ಪರಿವರ್ತನೆಯಾಯಿತು. ಕೆಲವೊಂದು ಸಣ್ಣಪುಟ್ಟ ಉದಾಹರಣೆಗಳನ್ನು ಬಿಟ್ಟು ಮಿಕ್ಕ ಬಹುತೇಕ ಅಧ್ಯಯನಗಳು ಶಾಸನಗಳ ವೈಭವೀಕರಣ ಅಥವಾ ವರ್ಣನಾ ಪ್ರಧಾನ ಅಧ್ಯಯನಗಳೇ ಆಗಿವೆ. ಇಂದಿಗೂ ಬಹುತೇಕ ಅಧ್ಯಯನ ಇದೇ ಮಾದರಿಯಲ್ಲಿ ಸಾಗುತ್ತಿವೆ. ಈವರೆಗಿನ ಶಾಸನಗಳ ಅಧ್ಯಯನವನ್ನು ಪ್ರಮುಖವಾಗಿ ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದು. ಅವುಗಳೆಂದರೆ....

೧. ಪಠ್ಯ ಪ್ರಕಟನ ಕಾಲ
೨. ಪಠ್ಯ ವೈಭವ ಕಾಲ
೩. ಪಠ್ಯ ಅಧ್ಯಯನ ಕಾಲ
೪. ಪಠ್ಯ ವಿಮರ್ಶನ ಕಾಲ

ಕನ್ನಡ ನಾಡಿನಲ್ಲಿ ಪ್ರಕಟಿತ ಮತ್ತು ಅಪ್ರಕಟಿತ ರೂಪದ ಮೂವತ್ತು ಸಾವಿರಕ್ಕೂ ಮೇಲ್ಪಟ್ಟು ಶಾಸನಗಳು ಇವೆ. ಭಾರತದಲ್ಲಿ ಅತಿ ಹೆಚ್ಚು ಶಾಸನಗಳನ್ನು ಹೊಂದಿರುವ ರಾಜ್ಯ

ತಮಿಳುನಾಡು. ನಂತರದ ಸ್ಥಾನ ಕರ್ನಾಟಕಕ್ಕೆ ಸಲ್ಲುತ್ತದೆ. ಕನ್ನಡನಾಡಿನ ಬಹಳಷ್ಟು ಅಪ್ರಕಟಿತ ಶಾಸನಗಳನ್ನು ಪಾಶ್ಚಾತ್ಯ ಮತ್ತು ಪೌರಾತ್ಯ ಪಂಡಿತರು ಕಷ್ಟಪಟ್ಟು ಸಂಗ್ರಹಿಸಿದ್ದಾರೆ, ಪ್ರಯತ್ನದಿಂದ ಓದಿದ್ದಾರೆ; ಪ್ರಮಾಣಿಕತೆಯಿಂದ ಅರ್ಥೈಸಿದ್ದಾರೆ. ಕನ್ನಡ ಭಾಷೆಯ ಶಾಸನವನ್ನು ಮೊದಲು ಓದಿದ ಕೀರ್ತಿ ಬೋರಯ್ಯನಿಗೆ ಸಲ್ಲುತ್ತದೆ.

ಮೂಲ ಆಕರಗಳಾದ ಶಾಸನಗಳ ಸಂಗ್ರಹದ ಇಪ್ಪತ್ತನೆಯ ಶತಮಾನದಲ್ಲಿ ಪ್ರಾಂತ್ಯವಾರು ಮಟ್ಟದಲ್ಲಿ ನಡೆದಿರುವುದನ್ನು ಗುರುತಿಸಬಹುದು. ಅವುಗಳೆಂದರೆ...

೧. ಹಳೇ ಮೈಸೂರು ಅಧಿಪತ್ಯ
೨. ಮದ್ರಾಸ್ ಅಧಿಪತ್ಯ
೩. ಮುಂಬೈ ಕರ್ನಾಟಕ
೪. ಹೈದರಾಬಾದ ಕರ್ನಾಟಕ

**೧. ಹಳೆ ಮೈಸೂರು ಅಧಿಪತ್ಯ:**

ರೈಸ್ ನಂತರ ಬಂದ ಆರ್. ನರಸಿಂಹಚಾರ್, ಎಂ.ಎಚ್. ಕೃಷ್ಣ, ಕೆ.ಎ. ನೀಲಕಂಠ ಶಾಸ್ತ್ರಿಗಳ ಅವಧಿಯಲ್ಲಿ ಕೋಲಾರ, ಶಿವಮೊಗ್ಗ, ಹಾಸನ, ತುಮಕೂರು, ಮೈಸೂರು ಜಿಲ್ಲೆಯ ಹೆಚ್ಚಿನ ಶಾಸನಗಳು ಆರು ಸಂಪುಟಗಳಲ್ಲಿ 'ಎಫಿಗ್ರಾಫಿಯಾ ಕರ್ನಾಟಿಕಾ'ದ ಪುರವಣಿಗಳಾಗಿ ಪ್ರಕಟಗೊಂಡಿವೆ. ಹಳೇ ಮೈಸೂರು ಪ್ರಾಂತ್ಯದಲ್ಲಿ ಸುಮಾರು ೧೩೫೦೦ ಶಾಸನಗಳು ಪ್ರಕಟವಾಗಿವೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯು ಹಾ.ಮಾ. ನಾಯಕರು ನಿರ್ದೇಶಕರಾಗಿದ್ದ ಕಾಲದಲ್ಲಿ ಇ.ಸಿ.ಯ ಸಂಪುಟಗಳನ್ನು ಪರಿಷ್ಕರಿಸಿ ಪ್ರಕಟಿಸುವಂತಹ ಮಹತ್ವಪೂರ್ಣ ಕಾರ್ಯ ಯೋಜನೆಯನ್ನು ಹಮ್ಮಿಕೊಂಡು ಅದರನ್ವಯ ಕೊಡಗು, ಶ್ರವಣಬೆಳಗೊಳ, ಮೈಸೂರು, ಮಂಡ್ಯ, ಹಾಸನ ಹಾಗೂ ಶಿವಮೊಗ್ಗ ಜಿಲ್ಲೆಯ ಶಾಸನಗಳನ್ನು ಒಳಗೊಂಡ ಹನ್ನೆರಡು ಬೃಹತ್ ಪರಿಷ್ಕೃತ ಶಾಸನ ಸಂಪುಟಗಳು ಹೊರಬಂದವು. ಪರಿಷ್ಕೃತ ಎಫಿಗ್ರಾಫಿಯಾ ಕರ್ನಾಟಿಕಾಗಳ ಸ್ವರೂಪ ರೈಸ್ ಸಂಪುಟಗಳಿಗಿಂತ ತುಸು ಭಿನ್ನವಾಗಿವೆ.

೧. ಕನ್ನಡವಲ್ಲದ ಶಾಸನಗಳಿಗೆ ಕನ್ನಡ ಲಿಪ್ಯಂತರದ ಜೊತೆಗೆ ರೋಮನ್ ಲಿಪ್ಯಂತರದೊಡನೆ ಕೊಡಲಾಗಿದೆ.

೨. ಬೇರೆ–ಬೇರೆ ಮೂಲಗಳಲ್ಲಿ ಪ್ರಕಟವಾಗಿರುವ ಶಾಸನಗಳನ್ನು ಒಂದೆಡೆ ತರಲಾಗಿದೆ.

೩. ಪ್ರತಿಯೊಂದು ಶಾಸನವೂ ಚಿಕ್ಕ ಪರಿಚಯವನ್ನು ಆಂಗ್ಲಭಾಷೆಯಲ್ಲಿ ಹೊಂದಿದೆ.

೪. ಉಪಯುಕ್ತವಾದ ಅನುಬಂಧಗಳನ್ನು ಒಳಗೊಂಡಿದೆ.

(೧) ಶಾಸನಗಳು ದೊರೆತಿರುವ ಊರುಗಳ ಅಕಾರಾದಿ

(೨) ವಂಶಾನುಕ್ರಮದಲ್ಲಿ ಶಾಸನಗಳ ಸೂಚಿ

(೩) ಶಬ್ದಸೂಚಿ

೫. ಪ್ರತಿಯೊಂದು ಸಂಪುಟವು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಸುದೀರ್ಘವಾದ ಪ್ರಸ್ತಾವನೆಯನ್ನು ಒಳಗೊಂಡಿದೆ.

**೨. ಮದ್ರಾಸ್ ಅಧಿಪತ್ಯ:**

ಭಾರತ ಸರಕಾರದ ಪುರಾತತ್ವ ಇಲಾಖೆಯ ಶಾಸನ ವಿಭಾಗವು ದಕ್ಷಿಣ ಭಾರತದ ಶಾಸನಗಳನ್ನು 'South Indian Inscriptions' ಹೆಸರಿನಲ್ಲಿ ಹಲವಾರು ಸಂಪುಟಗಳಲ್ಲಿ ಪ್ರಕಟಿಸಿದೆ. ಈ ಸಂಪುಟಗಳಲ್ಲಿ ಎನ್. ಲಕ್ಷ್ಮೀನಾರಾಯಣರಾಯರು, ಆರ್. ಶಾಮಾಶಾಸ್ತ್ರೀ... ಮುಂತಾದ ಶಾಸನತಜ್ಞರ ಫಲವಾಗಿ ಬಳ್ಳಾರಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆ, ಉಡುಪಿ ಜಿಲ್ಲೆಗಳ ಸುಮಾರು ೬೦೦ ಶಾಸನಗಳು ಪ್ರಕಟವಾಗಿವೆ.

**೩. ಮುಂಬೈ ಕರ್ನಾಟಕ:**

ಮುಂಬೈ ಕರ್ನಾಟಕ ಪ್ರದೇಶದ ಶಾಸನಗಳಲ್ಲಿ ಸುಮಾರು ೨೦೦೦ ಶಾಸನಗಳು South Indian Inscription ಸಂಪುಟಗಳಲ್ಲಿ ಆರ್.ಎಸ್. ಪಂಚಮುಖಿ, ಎನ್. ಲಕ್ಷ್ಮೀನಾರಾಯಣರಾಯ, ಪಿ.ಬಿ. ದೇಸಾಯಿ, ಜಿ.ಎಸ್. ಗಾಯಿ, ಶ್ರೀನಿವಾಸ ರಿತ್ತಿ, ಬಿ.ಆರ್. ಗೋಪಾಲರವರ ಪರಿಶ್ರಮದಿಂದ ಪ್ರಕಟವಾಗಿವೆ.

ಮುಂಬೈ ಸರಕಾರದ ವತಿಯಿಂದ ಮುಂಬೈ ಕರ್ನಾಟಕ ಪ್ರದೇಶದಲ್ಲಿ ಶಾಸನ, ಹಸ್ತಪ್ರತಿ, ನಾಣ್ಯಗಳ ಸಂಗ್ರಹ ಇತ್ಯಾದಿಗಳನ್ನು ಸಂಗ್ರಹಿಸುವ ಸಲುವಾಗಿ 'ಕನ್ನಡ ಸಂಶೋಧನಾ ಸಂಸ್ಥೆ'ಯು ಅಸ್ತಿತ್ವಕ್ಕೆ ಬಂದಿದೆ. ಆ ಸಂಸ್ಥೆಯ ಮೂಲಕ ೧೫೦೦ ಶಾಸನಗಳನ್ನು ಪರಿವೀಕ್ಷಿಸಿ

ಸಂಪಾದಿಸಿ 'Karnataka Inscriptions' ಹೆಸರಿನ ಆರು ಸಂಪುಟಗಳಲ್ಲಿ ಆರ್.ಎಸ್. ಪಂಚಮುಖಿ, ಎ.ಎಂ. ಅಣ್ಣಿಗೇರಿ, ಬಿ.ಆರ್. ಗೋಪಾಲರವರು ಪ್ರಕಟಿಸಿದ್ದಾರೆ. ಈ ಸಂಪುಟಗಳಲ್ಲಿ ವಿಸ್ತಾರವಾದ ಪ್ರಸ್ತಾವನೆ ಹಾಗೂ ಟಿಪ್ಪಣಿಗಳು ಇಂಗ್ಲೀಷನಲ್ಲಿರುವುದನ್ನು ಗುರುತಿಸಬಹುದು.

**೪. ಹೈದರಾಬಾದ ಕರ್ನಾಟಕ**

ಉಳಿದ ಮೂರು ಪ್ರಾಂತಗಳಿಗೆ ಹೋಲಿಸಿದರೆ ಹೈದರಾಬಾದ ಕರ್ನಾಟಕ ಭಾಗದಲ್ಲಿ ಶಾಸನಗಳ ಸಂಗ್ರಹ, ಪ್ರಕಟಣೆಯ ಕಾರ್ಯ ಅಷ್ಟಾಗಿ ನಡೆದಿಲ್ಲ. ಹಾಗೆ ನೋಡಿದರೆ ಕನ್ನಡ ನಾಡಿನಲ್ಲಿ ಶಾಸನಗಳ ಸರ್ವೇಕ್ಷಣೆ, ಪ್ರಕಟಣೆಯ ಕಾರ್ಯ ಮೊದಲಿಗೆ ಪ್ರಾರಂಭವಾದದ್ದು ಈ ಭಾಗದಲ್ಲಿಯೆ! ಆಂಧ್ರಪ್ರದೇಶ ಸರಕಾರದ Government Archaeological Series ಮಾಲಿಕೆಯಲ್ಲಿ ಹಾಗೂ ತೆಲಂಗಾಣ ಶಾಸನವನ್ನು ಎರಡು ಸಂಪುಟಗಳಲ್ಲಿ ಹೈದರಾಬಾದ ಕರ್ನಾಟಕದ ಹಾಗೂ ಆಂಧ್ರಪ್ರದೇಶದಲ್ಲಿಯ ಕೆಲವು ಕನ್ನಡ ಶಾಸನಗಳು ಪ್ರಕಟವಾಗಿವೆ. ದೇಶಿಯ ವಿದ್ವಾಂಸರು ವಿರಳವಾಗಿ ಈ ಭಾಗದಲ್ಲಿ ಶಾಸನಗಳ ಸಂಗ್ರಹ–ಪ್ರಕಟಣೆಯಲ್ಲಿ ತೊಡಗಿಸಿಕೊಂಡಿದ್ದಾರೆ.

ಪಿ.ಬಿ. ದೇಸಾಯಿಯವರು 'Jainism in South Indian and some Jain Epigraphs ಪುಸ್ತಕದ ಅನುಬಂಧದಲ್ಲಿ ಈ ಭಾಗದ ೫೩ ಶಾಸನಗಳನ್ನು ಟಿಪ್ಪಣಿಗಳೊಂದಿಗೆ ಪ್ರಕಟಿಸಿದ್ದಾರೆ. ವಿ.ಎಸ್. ಕುಲಕರ್ಣಿಯವರು 'Historical and cultural studies of the region around Basavakalyana' ನಿಬಂಧದಲ್ಲಿ ಬೀದರ ಜಿಲ್ಲೆಯ ೬೮ ಶಾಸನಗಳ ಪಠ್ಯ ಕೊಟ್ಟಿದ್ದಾರೆ. ವಿ. ಶಿವಾನಂದರವರು ಮೆಕೆಂಝಿ ಸಂಗ್ರಹದಲ್ಲಿದ್ದ ಹಾಗೂ ತಾವು ಸಂಗ್ರಹಿಸಿದ್ದ ಸ್ವಂತದ ಶಾಸನಗಳನ್ನು ಸೇರಿಸಿ "ಹೈದರಾಬಾದ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು" ಎಂಬ ಸಂಪುಟವನ್ನು ಬನಾರಸ್ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಮೂಲಕ ಪ್ರಕಟಿಸಿದ್ದಾರೆ. ಹನುಮಾಕ್ಷಿ ಗೋಗಿ, ಬಿ.ಆರ್. ಹಿರೇಮಠರವರು ಮುದೇನೂರು ಹಾಗೂ ಯಡ್ರಾಮಿ ಶಾಸನಗಳನ್ನು ಪ್ರಕಟಿಸಿದ್ದಾರೆ.

ಶಾಸನಗಳ ಸರ್ವೇಕ್ಷಣ, ಸಂಗ್ರಹಣೆ, ವಾಚನ, ಅಧ್ಯಯನ, ಪ್ರಕಟನ ಕಾರ್ಯ ಶ್ರಮದಾಯಕವಾದುದು. ಆರ್ಥಿಕ ಸಹಾಯ, ತಾಳ್ಮೆ, ಅವಿರತ ಅಧ್ಯಯನ ಪ್ರಮುಖವಾಗಿ ಅಗತ್ಯವಾಗುತ್ತದೆ. ಇಂತಹ ಸಂದರ್ಭದಲ್ಲಿ ಯಾವುದೇ ಸರಕಾರದ ಸಹಾಯವಿಲ್ಲದೇ ವೈಯಕ್ತಿಕವಾಗಿ ಶಾಸನಗಳ ಸಂಗ್ರಹ, ಪ್ರಕಟಣೆಯ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರಲ್ಲಿ ಪ್ರಮುಖರೆಂದರೆ, ಕೆ.ಜಿ. ಕುಂದಣಗಾರ, ಪಿ.ಬಿ. ದೇಸಾಯಿ, ಎಸ್. ಶೆಟ್ಟರ್, ಶ್ರೀನಿವಾಸ ರಿತ್ತಿ, ಹಂಪನಾ ಮೊದಲಾದವರು. ಕುಂದಣಗಾರರ Inscription in Southern Karnataka and Kolhapur State' ಸಂಪುಟದಲ್ಲಿ ಒಟ್ಟು ೪೩ ಶಾಸನಗಳು ವಿಸ್ತೃತವಾದ ಪ್ರಸ್ತಾವನೆ, ಪಠ್ಯ ಹಾಗೂ ಅನುವಾದದೊಂದಿಗೆ ಪ್ರಕಟವಾಗಿದೆ. ಪಿ.ಬಿ. ದೇಸಾಯಿಯವರು 'Studies Epigraphy' ಯಲ್ಲಿ ೫೩ ಶಾಸನಗಳು ಪ್ರಕಟವಾಗಿವೆ. ನೆರೆಯ ಆಂಧ್ರಪ್ರದೇಶ ಹಾಗೂ ತಮಿಳುನಾಡಿನಲ್ಲಿ ದೊರೆತಿರುವ ಕನ್ನಡ ಶಾಸನಗಳ ಪ್ರಕಟಣೆಯಲ್ಲಿ ಆಸಕ್ತಿ ತೋರಿರುವ ಕೆ.ಆರ್. ಗಣೇಶ, ಎಚ್.ಎಸ್. ಗೋಪಾಲರಾವ ಹಾಗೂ ಪಿ.ವಿ. ಕೃಷ್ಣಮೂರ್ತಿಯವರ ಕಾರ್ಯವೂ ಶ್ಲಾಘನೀಯವಾದುದು.

**ಅಡಿಟಿಪ್ಪಣಿಗಳು:**

೧. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೯

೨. ಶಾಸನಾನುಸಂಧಾನ, ಪು. ೫.

೩. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೦.

೪. ಅದೇ ಪು. ೨೧.

೫. ಶಾಸನಾನುಸಂಧಾನ, ಪು. ೮.

೬. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೩.

೭. ಶಾಸನಾನುಂಧಾನ, ಪು. ೯.

೮. ಅದೇ, ಪು. ೧೦.

೯. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೫.

೧೦. ಶಾಸನಾನುಸಂಧಾನ, ಪು. ೧೨.

# ಅಧ್ಯಾಯ–೨
## ಶಾಸನಗಳ ಅರ್ಥ, ಸ್ವರೂಪ ಮತ್ತು ಮಹತ್ವ

ಕನ್ನಡ ಸಂಶೋಧನೆಯು ಪ್ರವೇಶಿಸಿರುವ ಅನೇಕ ಮಹತ್ವದ ನೆಲೆಗಳಲ್ಲಿ ಶಾಸನ ಶಾಸ್ತ್ರವು ಒಂದು. ಕನ್ನಡನಾಡಿನ ವಿವಿಧ ಅರಸರು, ಅವರ ಮನೆತನಗಳ, ಸಾಮಂತರ ಆಳ್ವಿಕೆಯಲ್ಲಿ ಹುಟ್ಟಿದ ಶಾಸನಗಳು ನಾಡಿನ ಜನಾಂಗದ ಬದುಕಿನ ವಿಶ್ವಕೋಶಗಳೆನಿಸಿವೆ. ದೇಶದ ವಾಙ್ಮಯ ಪರಂಪರೆಯು ಪರಿಪೂರ್ಣವಾಗುವುದು ಶಾಸನಗಳ ಅದ್ಯಯನದಿಂದಲೇ.... 'ಶಾಸನ ಸಂಚಯ'ವು ಸಾಹಿತ್ಯದ ಪ್ರಮುಖ ಭಾಗವಾಗಿದೆ. ಶಾಸನ ಸಾಹಿತ್ಯ ಪರಂಪರೆಯೂ ಸಾಂಸ್ಕೃತಿಕ ಮೌಲ್ಯಗಳ ಸಮುದ್ರವೇ ಆಗಿದೆ. ಶಾಸನಗಳ ಅಧ್ಯಯನವೆಂದರೆ ಒಂದು ಜನಾಂಗದ, ಒಂದು ಪ್ರದೇಶದ, ಒಟ್ಟು ದೇಶದ ಸಂಸ್ಕೃತಿಯ ಅಧ್ಯಯನವಾಗಿದೆ. ಶಾಸನವೆಂಬುದು ಬರೀ ಒಂದು ಕಲ್ಲಿನ ಅಥವಾ ಲೋಹದ ಸಾಮಗ್ರಿ ಅಥವಾ ವಸ್ತುವಲ್ಲ. ಅದು ನಿರ್ಜೀವವೂ ಅಲ್ಲ. ಕಲ್ಲಿನ ಪೆಟ್ಟಿಗೆಯಲ್ಲಿ ನಮ್ಮ ಪರಂಪರೆಯೇ ಅವಿತು ಕುಳಿತಿದೆ. ಶಾಸನ ಕವಿಗಳು ಕೇವಲ ಅಕ್ಷರ–ಶಬ್ದಗಳಿಂದ ಕೂಡಿದ ಸಾಲುಗಳನ್ನು ಇಟ್ಟು "ಬರಹಕ್ಕಾಗಿ ಬರಹ"ವೆಂದು ಶಾಸನ ಬರೆಯಲಿಲ್ಲ.

ನಮ್ಮ ದೇಶದ, ನಮ್ಮ ನಾಡಿನ, ನಮ್ಮ ಪೂರ್ವಿಕರ ಇತಿಹಾಸ ರಚನೆಗೆ ಇರುವ ಪ್ರಮುಖ ಆಕರಗಳೆಂದರೆ....

೧. ಪರಂಪರೆ ಮತ್ತು ಐತಿಹ್ಯ
೨. ವಾಙ್ಮಯ ಮತ್ತು ಸಾಹಿತ್ಯ
೩. ಪುರಾತತ್ವ ಶೋಧನೆ

ಈ ಮೇಲಿನ ಮೂರು ಆಕರಗಳಲ್ಲಿ ಪುರಾತತ್ವ ಶೋಧನೆ ಪ್ರಮುಖವಾದುದು. ಈ ಪುರಾತತ್ವಶಾಸ್ತ್ರದ ಒಂದು ಪ್ರಮುಖ ಅಂಗವೇ ಶಾಸನಶಾಸ್ತ್ರ.

'ಶಾಸನ' ಎಂಬುದು ಸಂಸ್ಕೃತ ಪದ. ಇದರ ಮೂಲಾರ್ಥ 'ರಾಜಾಜ್ಞೆ' ಎಂದು. 'ಶಾಸ' ಎಂಬ ಪದವು 'ಶಾಸ್' ಎಂಬ ಧಾತುವಿನಿಂದ ರೂಪುಗೊಂಡಿದೆ. ಇದರ ಅರ್ಥ ಆಜ್ಞಾಪಿಸು, ಶಿಕ್ಷಿಸು, ನಿಯಂತ್ರಿಸು ಎಂದು. 'ಶಾಸನ' ಶಬ್ದಕ್ಕೆ ಈಗಲೂ 'ಕಾನೂನು' ಎಂಬ ಅರ್ಥ

ಪ್ರಚಲಿತದಲ್ಲಿದೆ. ಶಾಸನಗಳು ಮೂಲತಃ ದಾನ ಸಂಬಂಧವಾದ ರಾಜಾಜ್ಞೆಗಳಾಗಿದ್ದು, ಕಾಲಾನುಕ್ರಮದಲ್ಲಿ ವಿಶಾಲ ಅರ್ಥವನ್ನು ಪಡೆದುಕೊಂಡಿದೆ.

**'ಶಾಸನ'** ಪದಕ್ಕೆ ಸಂವಾದಿಯಾಗಿ ಇಂಗ್ಲೀಷಿನಲ್ಲಿ ಬಳಕೆಯಾಗುತ್ತಿರುವ ಶಬ್ದ 'Inscription'. ಇದರಿಂದಲೇ **'**Epigraphy' ಎಂಬ ಶಬ್ದ ಬಳಕೆಯಲ್ಲಿದೆ. 'Inscription' ಎಂಬ ಪದವು Inscriber' ಎಂಬ ಲ್ಯಾಟಿನ್ ಪದದಿಂದ ಬಂದಿದೆ. ಇದರ ಅರ್ಥ **'**ಮೇಲೆ ಬರೆ**'** ಎಂದಾಗುತ್ತದೆ. ಇದನ್ನು **'**Epigraphy' ಎಂಬ ಪದವು **'**Epi' ಮತ್ತು **'**graphic' ಎಂಬೆರಡು ಗ್ರೀಕ್ ಪದಗಳಿಂದ ಹುಟ್ಟಿಕೊಂಡಿದೆ. ಇದರ ಅರ್ಥವೂ ಕೂಡ **'ಮೇಲೆ ಬರೆ'** ಎಂಬುದೇ ಆಗಿದೆ.

'Inscription' ಅಂದರೆ ಬಹುಕಾಲ ನಿಲ್ಲಬಲ್ಲ, ಶಾಶ್ವತವಾಗಿ ಉಳಿಯಬಲ್ಲ ವಸ್ತುಗಳ ಮೇಲೆ ಕೊರೆಯಲ್ಪಟ್ಟ ಬರಹ. ತಾಳೆಗರಿ, ಭೂರ್ಜ ಪತ್ರ, ಕಾಗದ... ಮೊದಲಾದವುಗಳ ಮೇಲೆ ಕಂಡುಬರುವ ಬರಹಗಳನ್ನು ಬಿಟ್ಟು, ಬಹುಕಾಲ ಉಳಿಯುವ ಸಾಮಗ್ರಿಯ ಮೇಲೆ ಅಂದರೆ ಕಲ್ಲು, ತಾಮ್ರ, ಬೆಳ್ಳಿ ಮುಂತಾದವುಗಳ ಮೇಲೆ ಕೊರೆಯಲ್ಪಟ್ಟ ಬರಹಗಳನ್ನು ಶಾಸನಗಳೆಂದು ಕರೆಯುವರು.

ಭಾರತೀಯರು **'ಶಾಸನ'** ಎಂಬ ಪದಕ್ಕೆ ವಿಶಾಲ ಅರ್ಥವನ್ನು ನೀಡುವುದರ ಸಲುವಾಗಿ ಅವುಗಳ ಆಂತರಿಕ ವಿಷಯಗಳನ್ನು ಗಮನದಲ್ಲಿರಿಸಿಕೊಂಡು ವ್ಯಾಖ್ಯಾನಿಸಿದರು. ಈ ನೆಲೆಯಲ್ಲಿ ಶಾಸನವೆಂಬುದು ಆಜ್ಞೆ, ಪ್ರಜೆಗಳೆಲ್ಲರೂ ಪಾಲಿಸಬೇಕಾದ ಒಂದು ಸಂಹಿತೆ, ಸಂವಿಧಾನ, ನೀತಿ–ನಿಯಮಗಳನ್ನು ಉಲ್ಲಂಘಿಸಿದರೆ ಶಿಕ್ಷೆಗೆ ಗುರಿಯಾಗುತ್ತೀರೆಂಬ ಎಚ್ಚರಿಕೆಯ ನೀತಿ ಸಂಹಿತೆಗಳು ಎಂಬ ಅರ್ಥ ಪಡೆದುಕೊಂಡಿತು. ಅಶೋಕನು ತಾನು ಹಾಕಿದ ಶಾಸನಗಳನ್ನು 'ಧರ್ಮಲಿಪಿ'ಗಳು ಎಂದು ಕರೆದುಕೊಂಡಿರುವುದು ಇತಿಹಾಸದ ಪುಟಗಳಿಂದ ಮನವರಿಕೆಯಾಗುತ್ತದೆ. 'Inscribe' ಎಂಬುದರಿಂದ ಹೊರಟ ಕೆತ್ತು, ಕೊರೆ, ಕಂಡರಿಸು ಎಂಬ ಅರ್ಥಕ್ಕಿಂತ ಭಿನ್ನವಾಗಿ ಆಡಳಿತ ಪ್ರಭುತ್ವ, ಆಜ್ಞೆ, ಅಪ್ಪಣೆ, ಕಾನೂನು, ಕಟ್ಟಳೆ, ವಿಧಿ, ನಿಗ್ರಹ, ಹಿಡಿತ, ಶಿಕ್ಷೆ, ದಂಡನೆ, ಶಾಸ್ತಿ, ಒಪ್ಪಂದ ಮತ್ತು ಕರಾರು ಎಂಬ ವ್ಯಾಪಕ ಅರ್ಥಗಳನ್ನು **'ಶಾಸನ'** ಪದವು ಪಡೆದುಕೊಂಡಿತು.

ಅರಸನ ಸಹಿ, ಮುದ್ರೆ, ದಿನಾಂಕಗಳೊಂದಿಗೆ ಅಧಿಕೃತವಾಗಿ ಹೊರಟ ಶಾಸನಗಳು ಶಿಲೆ, ತಾಮ್ರ, ಕಬ್ಬಿಣ.. ಇತ್ಯಾದಿ ಮಾಧ್ಯಮಗಳಲ್ಲಿ ಬರೆದಿರುವ ರಾಜಾಜ್ಞೆಗಳಾಗಿದ್ದಂತೆ, ರಾಜರಲ್ಲದವರ ಕುರಿತು ಬರೆಯಿಸಿದಾಗಲೂ ಅವುಗಳು ಶಾಸನಗಳೆಂದು ಕರೆಯಿಸಿಕೊಂಡವು. ಮಹಾಸತಿಯರ, ವೀರರ, ಸನ್ಯಾಸಿಗಳ ಮರಣ ವೃತ್ತಾಂತವನ್ನು ಉಲ್ಲೇಖಿಸುವ ವೀರಗಲ್ಲು, ಮಾಸ್ತಿಕಲ್ಲು, ನಿಷಿದಿಕಲ್ಲುಗಳೂ ಕೂಡ ಶಾಸನದ ಪರಂಪರೆಗೆ ಸೇರಿದವು. ಅರಸೊತ್ತಿಗೆಯ ಪರಿಸರದಲ್ಲಿ ಬೆಳೆದು ಬಂದ ಶಾಸನಗಳು ದಂಡನೆ, ಶಿಕ್ಷೆ, ಕರಾರು, ಕಟ್ಟಳೆ ಎಂಬ ಸಂಕುಚಿತ ಅರ್ಥವನ್ನು ಕಳಚಿ, ಅಂದಂದಿನ ಜೀವನ ಪದ್ಧತಿಯ ಎಲ್ಲ ಮುಖಗಳನ್ನು ದಾಖಲಿಸುವ ದಾಖಲೆಗಳು ಎಂಬ ಅರ್ಥವನ್ನು ಪಡೆದುಕೊಂಡವು.

ಶಾಸನಗಳೆಂದರೇನು ಎಂಬುದನ್ನು ಕುರಿತು ಕೆಲವು ಪ್ರಸಿದ್ಧ ಇತಿಹಾಸ ತಜ್ಞರು ತಮ್ಮ ಬರವಣಿಗೆಯಲ್ಲಿ ಹಲವು ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅವುಗಳೆಂದರೆ....

"ಶಾಸನ ರಾಜರ ಆಜ್ಞೆಗಳನ್ನು ತಿಳಿಸುವ ಬರಹವನ್ನು ಹೇಳುತ್ತದೆ"– ಕೌಟಿಲ್ಯನ ಅರ್ಥಶಾಸ್ತ್ರ

"ಶಾಸನಗಳು ಬಹು ಸಂದರ್ಭಗಳಲ್ಲಿ ಅಧಿಕೃತ ಲಕ್ಷಣವುಳ್ಳ, ಸಾಧಾರಣವಾಗಿ ಹೆಚ್ಚು ಕಡಿಮೆ ಸಾರ್ವಜನಿಕ ಸ್ವರೂಪವುಳ್ಳ, ಸರಳವಾದ ಅಥವಾ ಇಲ್ಲದಿರುವ ಮತ್ತು ತಾವು ಪ್ರಸ್ತಾಪಿಸುವ ವಿಷಯಗಳ ಬಗ್ಗೆ ಶಾಶ್ವತವಾದ ದಾಖಲೆಗಳಾಗಿರಬೇಕೆಂದು ಉದ್ದಿಷ್ಟವಾದ ಪ್ರಕಟಣೆಗಳು"– ಜೆ.ಎಫ್. ಫ್ಲೀಟ್.

"ಶಾಸನವೆಂದರೆ ಯಾವುದಾದರೊಂದು ಪದಾರ್ಥದ ಮೇಲೆ ಕೊರೆದ ಯಾವುದೇ ಬರಹವೆಂದು ಅಕ್ಷರಶಃ ಅರ್ಥವಾಗುತ್ತದೆ–ಡಿ.ಸಿ. ಸರ್ಕಾರ್.

"ಶಾಸನಗಳು ಸಾಹಿತ್ಯ ತಲಕಾವೇರಿ"–ಎಂ. ಚಿದಾನಂದಮೂರ್ತಿ

"ಶಾಸನವೆಂದರೆ ರಾಜಾಜ್ಞೆ, ರಾಜನು ತಾನು ಅಥವಾ ಬೇರೆ ರಾಜರು ಕೊಟ್ಟ ದತ್ತಿಯನ್ನು ಯಾರೂ ನಾಶಮಾಡಬಾರದು, ಅದನ್ನು ತನ್ನ ಕೆಳಗಿನ ಅಧಿಕಾರಿಗಳು ನಡೆಸಿಕೊಂಡು ಹೋಗಬೇಕು ಎಂದು ಈ ಆಜ್ಞೆ ವಿಧಿಸುತ್ತಿದ್ದನು. ಇದನ್ನು ಜನರಿಗೆ ತಿಳಿಯಪಡಿಸಲು

ಹಾಸುಗಲ್ಲುಗಳ ಮೇಲೆ ಅಥವಾ ತಾಮ್ರಪಟ್ಟಿಕೆಗಳ ಮೇಲೆ ಬರೆಯಿಸುತ್ತಿದ್ದನು"–ಎಂ.ಎಂ. ಅಣ್ಣಿಗೇರಿ, ಮೇವುಂಡಿ ಮಲ್ಲಾರಿ

"ಶಾಸನಗಳು ಕರ್ನಾಟಕದ ಪ್ರಾಚೀನ ಸಂಸ್ಕೃತಿಯ ಮೂಕ ಸಾಕ್ಷಿಗಳು" – ಆರ್.ಸಿ. ಹಿರೇಮಠ, ಎಂ.ಎಂ. ಕಲಬುರ್ಗಿ.

"ಶಾಸನಗಳು ಒಂದು ಪ್ರದೇಶದ ಪ್ರಾಚೀನ ಇತಿಹಾಸವನ್ನು ಸಂಸ್ಕೃತಿಯನ್ನು ತಿಳಿಸುವಲ್ಲಿ ಮೂಕ ಸಾಕ್ಷಿಗಳಾಗಿ ನಿಂತಿವೆ"–ಜೆ.ಎಂ. ನಾಗಯ್ಯ.

"ಶಾಸನಗಳು ಪ್ರಮುಖವಾಗಿ ಒಂದು ಕಾಲದಲ್ಲಿ ನಡೆದ ವ್ಯವಹಾರಗಳ ಲಿಖಿತ ದಾಖಲೆಗಳು. ನಾಡಿನ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಅಂಶಗಳನ್ನು ಅರ್ಥವಾಡಿಕೊಳ್ಳುವ ಮೂಲ ಸಾಮಗ್ರಿಗಳಾಗಿವೆ.– ಸಿ. ನಾಗಭೂಷಣ.

ಹೀಗೆ ಮೇಲ್ಕಾಣಿಸಿದ ವ್ಯಾಖ್ಯಾನಗಳು ಶಾಸನಗಳು ಎಂದರೇನು ಮತ್ತು ಯಾವುವನ್ನು ಶಾಸನಗಳೆಂದು ಪರಿಗಣಿಸಲಾಗುತ್ತಿತ್ತು ಹಾಗೂ ಅವುಗಳಿಂದ ತಿಳಿದುಬರುವ ಐತಿಹಾಸಿಕ ಅಂಶಗಳೇನು ಎಂಬುದರ ಮೇಲೆ ಬೆಳಕು ಚೆಲ್ಲುತ್ತವೆ. ಶಾಸನಗಳು ಯಾವುದೋ ಒಂದೆ ಉದ್ದೇಶದಿಂದ ಜನ್ಮ ತಾಳಿದವು ಎಂದು ಹೇಳಲಾಗದು. ಕಾಲಕ್ರಮೇಣ ವಿವಿಧ ಉದ್ದೇಶಗಳ ಹಿನ್ನೆಲೆಯಲ್ಲಿ ಹಾಕಿಸಿರುವುದು ತಿಳಿದುಬರುತ್ತದೆ.

**ಶಾಸನಗಳ ಸ್ವರೂಪ**

ಭೂಮಿಯ ಮೇಲೆ ಪ್ರತಿಯೊಂದು ವಸ್ತುವಿಗೂ, ವಿಷಯಕ್ಕೂ, ವ್ಯಕ್ತಿಗೂ ತನ್ನದೆಯಾದ ಸ್ವರೂಪವಿರುತ್ತದೆ.  ಶಾಸನಗಳು ಕ್ರಿ.ಪೂ. ೩ನೇ ಶತಮಾನದಿಂದ ಕಂಡು ಬರುತ್ತವೆಯಾದರೂ ಅವುಗಳಿಗೆ ಒಂದು ಸಿದ್ಧ ಚೌಕಟ್ಟು ಹಾಕಿದ್ದು ಮಾತ್ರ ಸ್ಮೃತಿಗಳ ಕಾಲಕ್ಕೆ.  ಶಾಸನಗಳನ್ನು ಹಾಕಿ ಸುತ್ತಿದ್ದವರು ಸಾಮಾನ್ಯವಾಗಿ ರಾಜರಾಗಿರುತ್ತಿದ್ದರು.  ಶಾಸನಗಳಲ್ಲಿ ರಾಜನ ಸ್ವಂತ ರುಜು, ಆ ಆಜ್ಞೆ  ಹೊರಟ ದಿನಾಂಕ ಮತ್ತು 'ನೀವೆಲ್ಲ ಕೇಳಿರಿ, ನೀವೆಲ್ಲ ಹೀಗೆ ಮಾಡಬೇಕು ಮತ್ತು ಈ ಆಜ್ಞೆಯಂತೆ ನಡೆಯಬೇಕು' ಎಂಬ ಆರಂಭ ಇರಬೇಕಿದ್ದವು. "ಲೇಖನ ಮೂಲಕ ಆಜ್ಞೆ ಮಾಡದ ರಾಜ, ರಾಜನ ಆಜ್ಞಾಪತ್ರವಿಲ್ಲದ ಅಧಿಕಾರ ನಡೆಯಿಸುವ ಅಧಿಕಾರಿ ಇಬ್ಬರೂ

ಚೋರರು; ರಾಜ ಮುದ್ರಾಸಹಿತವಾದ ಲೇಖನವೇ ನಿಜವಾದ ರುಜು. ಬರಿಯ ರಾಜ ರಾಜನೇ ಅಲ್ಲ”[೧]. ರಾಜನಾದವನು ಶಾಸನದಲ್ಲಿ ತನಗಿಂತ ಪೂರ್ವದ ಮೂರು ತಲೆಮಾರುಗಳ ವಿಷಯ, ತನ್ನ ವಿಷಯ, ದಾನವನ್ನು ಸ್ವೀಕರಿಸುವವನ ವಿಷಯ, ದಾನದ ಪ್ರಮಾಣ, ಭೂಮಿಯ ಮೇರೆಗಳು, ದಿನಾಂಕಗಳನ್ನು ನಿರೂಪಿಸಿ ತನ್ನ ಮುದ್ರೆ ಮತ್ತು ಸಹಿಗಳನ್ನು ಹಾಕಬೇಕಿತ್ತು. ದಾನವಾಗಿ ಭೂಮಿಯನ್ನು ಕೊಟ್ಟಾಗ ಅದರ ಮೇರೆಯನ್ನು, ಇತರ ವಸ್ತುಗಳನ್ನು ಕೊಟ್ಟಾಗ ಅವುಗಳ ವಿವರವನ್ನು ಅಲ್ಲಿ ಕೊಡಬೇಕಿದ್ದಿತು..

ಕನ್ನಡದ ಶಾಸನಗಳು ಬಹುಮಟ್ಟಿಗೆ ‘ಶ್ರೀ’, ಸ್ವಸ್ತಿ ಶ್ರೀ’, ‘ಸಿದ್ಧಂ’, ‘ನಮಸ್ಸಿದ್ದೇಭ್ಯ’, ‘ಶುಭಮಸ್ತು’, ‘ಶ್ರೀ ಗಣಾಧಿಪತಿಯೇ ನಮೋ’, ‘ಭದ್ರಮಸ್ತು ಜಿನಶಾಸನಸ್ಯ’,... ಮೊದಲಾದ ಮಾತುಗಳಿಂದ ಆರಂಭಗೊಳ್ಳುತ್ತಿದ್ದವು. ನಂತರದಲ್ಲಿ ಮಂಗಳ ಶ್ಲೋಕಗಳಿರುತ್ತಿದ್ದವು. ಶಾಸನವನ್ನು ಹಾಕಿಸುವವರು ಯಾವ ಧರ್ಮಕ್ಕೆ ಸೇರಿರುತ್ತಾರೋ ಆ ಧರ್ಮದ ಆ ದೇವರ ಸ್ತುತಿ ಆರಂಭದ ಶ್ಲೋಕಗಳಲ್ಲಿ ಬರುತ್ತಿದ್ದವು. ಕನ್ನಡದ ಪ್ರಾಚೀನ ಶಾಸನವಾದ ‘ಹಲ್ಮಿಡಿ ಶಾಸನ’ದಲ್ಲಿ ವಿಷ್ಣುವಿನ ಸ್ತುತಿಯಿದೆ.

ಜಯತಿಶ್ರೀ ಪರಿಷ್ವಂಗ ಶಾರ್ಙ್ಗ ಮ್ಯಾನತಿರಚ್ಯುತಃ
ದಾನವಾಕ್ಷೋರ್ಯುಗಾಸ್ತಾಗ್ನಿಃ ಶಿಷ್ಟಾನಾಂತು ಸುದರ್ಶನಃ॥

ಈ ಹಲ್ಮಿಡಿ ಶಾಸನದ ಕಾಲ ೫ನೆಯ ಶತಮಾನ

ವೈಷ್ಣವ ಶಾಸನಗಳಲ್ಲಿ ವಿಷ್ಣುವಿನ ಸ್ತುತಿಯೂ, ಶೈವ ಶಾಸನಗಳಲ್ಲಿ ಶಿವನ ಸ್ತುತಿಯೂ ಹಾಗೂ ಜೈನ ಶಾಸನಗಳಲ್ಲಿ ಜಿನಸ್ತುತಿಯು ಕಂಡುಬರುತ್ತದೆ.

ಮಳವಳ್ಳಿಯ ಶಾತವಾಹನ ಮತ್ತು ಕದಂಬ ಪ್ರಾಕೃತ ಶಾಸನಗಳೆರಡೂ ‘ಸಿದ್ಧಂ ಜಯಂತಿ ಭಗವನ್ ಮಟ್ಟ ಪಟ್ಟಿದೇವಃ’ ಎಂದು ಆರಂಭವಾಗುತ್ತವೆ. ಕದಂಬರ ಕೆಲವು ಪ್ರಾಚೀನ ತಾಮ್ರಾಪಟಗಳು ಸಾಮಾನ್ಯವಾಗಿ ‘ಜಿತಂಭಗವತಾಗತ ಘನ ಗಗನಾಭೇನ ಪದ್ಯನಾಬೇನ’ ಎಂದು ಆರಂಭವಾಗುತ್ತದೆ.

ವೈಷ್ಣವ ಶಾಸನಗಳ ಆರಂಭದಲ್ಲಿ ಸಾಮಾನ್ಯವಾಗಿ ಈ ಶ್ಲೋಕ ಕಂಡುಬರುತ್ತದೆ.

ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂಕ್ಷೋಭಿ ತಾರ್ಣವಂ
ದಕ್ಷೀಣೋನ್ನತದಾಕ್ಷಾಗ್ರ ಭುವನಂ ವಪುಃ॥

ಈ ಶ್ಲೋಕ ಕ್ರಿ.ಶ. ೭೦೮ರ ರಾಯಗಡದ ತಾಮ್ರ ಶಾಸನದಲ್ಲಿ ಕಂಡುಬರುತ್ತದೆ. ಕನ್ನಡ ಶಾಸನಗಳಲ್ಲಿ ಕ್ರಿ.ಶ. ೯೩೦ರ ಕಳಸದ ಶಾಸನದಲ್ಲಿ ಮೊಟ್ಟ ಮೊದಲಿಗೆ ಕಾಣಿಸಿಕೊಳ್ಳುತ್ತದೆ. ಶೈವ ಶಾಸನಗಳ ಆರಂಭದಲ್ಲಿ ಈ ಮಂಗಳ ಶ್ಲೋಕವು ಹೆಚ್ಚಾಗಿ ಕಾಣಿಸುತ್ತದೆ.

"ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥

ಇದು ೭ನೆಯ ಶತಮಾನದ ಸಂಸ್ಕೃತ ಕವಿ ಬಾಣಭಟ್ಟನ ಹರ್ಷಚರಿತದ ಮಂಗಳ ಶ್ಲೋಕ. ಇದು ನಮ್ಮ ಶಾಸನ ಕವಿಗಳ ಮನಸ್ಸನ್ನು ಬಹುವಾಗಿ ಆಕರ್ಷಿಸಿದೆ. ಶಾಸನಗಳ ಮಂಗಳ ಶ್ಲೋಕವಾಗಿ ಈ ಪದ್ಯ ಬರುವಷ್ಟು ಪ್ರಾಯಶಃ ಇನ್ನಾವ ಶ್ಲೋಕವೂ ಬರುವುದಿಲ್ಲ, ಬಂದಿಲ್ಲ. ಇದನ್ನು ಅನುಕರಿಸಿ ಹಲವಾರು ಶಿವಪರವಾದ ಶ್ಲೋಕಗಳು ರಚನೆಯಾಗಿವೆ. ಅವು ಈ ಶ್ಲೋಕದ ಜನಪ್ರಿಯತೆಗೆ ಸಾಕ್ಷಿಯಾಗಿವೆ.

ಜೈನಶಾಸನಗಳು ಸಾಮಾನ್ಯವಾಗಿ ಜಿನಸ್ತುತಿಯಿಂದ ಆರಂಭವಾಗುತ್ತವೆ. ಪ್ರಾಚೀನ ಜೈನ ಶಾಸನಗಳಲ್ಲಿ "ಭದ್ರಮಸು ಜಿನಶಾಸನಯ" ಎಂದು ಮಾತ್ರ ಇದ್ದರೆ, ೧೦ ಮತ್ತು ೧೧ನೆಯ ಶತಮಾನದ ಜೈನ ಶಾಸನಗಳಲ್ಲಿ ಈ ಶ್ಲೋಕ ಕಾಣಿಸಿಕೊಳ್ಳಲಾರಂಭಿಸಿದೆ.

"ಶ್ರೀ ಮತ್ಪರಮ ಗಂಭೀರ ಸ್ಯಾದ್ವಾದಾಮೊಘ ಲಾಂಛನಮ್
ಜೀಯತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ॥"

ಇದು ಕ್ರಿ.ಶ. ೭ನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಆಕಳಂಕನ 'ಪ್ರಮಾಣ ಸಂಗ್ರಹ'ದ ಮಂಗಲ ಶ್ಲೋಕ. ಈ ಶ್ಲೋಕವನ್ನು ಅನುಕರಿಸಿ ಅನೇಕ ಶ್ಲೋಕಗಳು ಬಂದಿವೆ.

ಪ್ರಾರ್ಥನಾ ಶ್ಲೋಕವಾದ ಬಳಿಕ ಆ ಕಾಲದ ರಾಜನ ವಂಶಾವಳಿಯ ವಿವರವಿರುತ್ತದೆ. ಹಿಂದಿನ ಮೂರು ತಲೆಮಾರುಗಳ ವಿಷಯ ಸಾಮಾನ್ಯವಾಗಿ ಶಾಸನಗಳಲ್ಲಿ ಬರಬೇಕೆಂದು 'ಸ್ಮೃತಿ ಗ್ರಂಥಗಳು' ಹೇಳಿದರೂ ಶಾಸನಗಳಲ್ಲಿ ಆ ರಾಜನ ವಂಶದ ಮೂಲ ಪುರುಷನಿಂದ ಆರಂಭ ಮಾಡಿ ಪ್ರಸ್ತುತ ರಾಜನವರೆಗೂ ವಂಶಾವಳಿಯನ್ನು ಕೊಡುತ್ತವೆ. ರಾಜರ ಬಿರುದುಗಳನ್ನು,

ಸಾಹಸ ಪರಾಕ್ರಮಗಳನ್ನು, ಸದ್ಗುಣಗಳನ್ನು ಕಾವ್ಯಮಯವಾಗಿ ಚಿತ್ರಿಸಿರುತ್ತವೆ. ಶಾಸನಗಳಲ್ಲಿ ಬರುವ ಈ ಭಾಗವನ್ನು 'ರಾಜಾವಳಿ' ಎಂದು ಕರೆಯುತ್ತಾರೆ. ಇಂಥಹ ರಾಜಾವಳಿಗಳು ಅದನ್ನು ಅಧಿಕಾರಯುತವಾಗಿ ನಿರೂಪಿಸಬಲ್ಲ ಕವಿಯಿಂದ ರಚನೆಯಾಗುತ್ತಿದ್ದವು. ಅದಕ್ಕೆ ಸರಕಾರದ ಒಪ್ಪಿಗೆ ದೊರೆತ ಮೇಲೆ ಶಾಸನ ಕರ್ತೃಗಳು ಅದನ್ನು ಉಪಯೋಗಿಸಿಕೊಳ್ಳುತ್ತಿದ್ದರು. ರಾಜನ ಪ್ರಶಸ್ತಿಯ ಈ ಭಾಗವಾದ ಮೇಲೆ ದಾನಿಯ ಪ್ರಸ್ತಾಪ ಬರುತ್ತದೆ. ಇಲ್ಲಿಯೂ ಅವರ ಮೂರು ತಲೆಮಾರಿನ ವಂಶಾವಳಿ ಹೇಳಲಾಗುತ್ತಿತ್ತು. ದಾನವನ್ನು ಕೊಟ್ಟ ಕಾಲದ ಪ್ರಸ್ತಾಪ ಬರುತ್ತದೆ. ಶಾಸನಗಳಲ್ಲಿ ಉಲ್ಲೇಖಗೊಂಡ ಪಕ್ಷ, ತಿಥಿ, ನಕ್ಷತ್ರಗಳು ರಾಜನ ಕಾಲವನ್ನು ತಿಳಿಯಲು ಬಹು ಸಹಾಯಕವಾಗುತ್ತವೆ.

ಶಾಸನಗಳಲ್ಲಿ 'ಕಾಲ ನಿರೂಪಣೆ' ತುಂಬಾ ಪ್ರಮುಖವಾದುದು. ರಾಜನ ಆಳ್ವಿಕೆಯ ವರ್ಷಗಣನೆಯ ಪ್ರಕಾರ ಕಾಲ ನಿರೂಪಣೆ ಕಂಡುಬರುತ್ತದೆ. ವಿವಿಧ ಶಕೆಗಳ ಕಾಲವನ್ನು ಹೇಳಿಕೊಳ್ಳುವ ಪದ್ಧತಿ ಸುಮಾರು ಕ್ರಿ.ಶ. ಆರಂಭದಿಂದ ಮೊದಲುಗೊಂಡಿತ್ತು. ಮಹಮದೀಯರ ಶಾಸನಗಳು ಮಹಮದೀಯ ಅಥವಾ ಹಿಜ್ರ ಶಕೆಯಿಂದ ಆರಂಭವಾಗುತ್ತವೆ. ಐಹೊಳೆಯ ಪುಲಿಕೇಶಿಯ ಶಾಸನದಲ್ಲಿ ಕಾಲಗಣನೆಯನ್ನು ಕಾಣುತ್ತೇವೆ. ಕ್ರಿ.ಶ. ೫೦೫ರಲ್ಲಿ ವರಾಹಮಿಹರನು ಕಾಲ ಗಣನೆಗೆ ಶಾಲಿವಾಹನ ಶಕೆಯನ್ನು ಬಳಸುವುದನ್ನು ತೋರಿಸಿಕೊಟ್ಟನು. ಅಂದಿನಿಂದ ಕರ್ನಾಟಕದಲ್ಲಿ 'ಶಾಲಿವಾಹನ ಶಕೆ' ಬಹುತೇಕವಾಗಿ ಪ್ರಚಾರದಲ್ಲಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ವಿಕ್ರಮ ಶಕೆ ಕ್ರಿ.ಶ. ೧೦೭೬ ರಲ್ಲಿ ಆರಂಭವಾಗಿ ಸುಮಾರು ೧೦೦ ವರ್ಷಗಳವರೆಗೆ ಮಾತ್ರ ಬಳಕೆಯಲ್ಲಿತ್ತು. ವಿಕ್ರಮ ಶಕೆಯಂತೆಯೆ ಇತರ ಶಕೆಗಳು ಕರ್ನಾಟಕದಲ್ಲಿ ಹುಟ್ಟಿಕೊಂಡರೂ ಅವು ಹೆಚ್ಚು ಪ್ರಚಾರವನ್ನು ಪಡೆಯಲಿಲ್ಲ. ಕರ್ನಾಟಕದ ಶಾಸನಗಳಲ್ಲಿ ಸಾಮಾನ್ಯವಾಗಿ ಶಾಲಿವಾಹನ ಶಕೆಯನ್ನು ನೋಡಬಹುದು. ಶಾಲಿವಾಹನ ಶಕೆಗೆ ೭೮ ವರ್ಷಗಳನ್ನು ಸೇರಿಸಿದರೆ 'ಕ್ರಿಸ್ತಶಕೆ' ಆರಂಭವಾಗುತ್ತದೆ. ಕೆಲವು ಶಾಸನಗಳಲ್ಲಿ 'ಶಾಲಿವಾಹನ ಶಕೆ'ಯನ್ನೇ 'ಶಕ' ಎಂದೂ ನಮೂದಿಸಿರುತ್ತದೆ.

ಉತ್ತರ ಭಾರತದಲ್ಲಿ ಕ್ರಿ.ಶ. ೪೯೯ ರಲ್ಲಿ ಪಾಟಲಿಪುತ್ರದ ಆರ್ಯಭಟ್ಟ ಎಂಬುವವನು ಕಾಲನಿರೂಪಣೆಯಲ್ಲಿ ನೂತನ ಪದ್ಧತಿಯನ್ನು ಕಂಡುಹಿಡಿದನು.

ಕನ್ನಡ ಶಾಸನಗಳಲ್ಲಿ 'ಶಾಲಿವಾಹನ ಶಕೆ' ವಿಶೇಷವಾಗಿ ಬಳಕೆಗೊಂಡಿದೆ. ಶಾಸನಗಳಲ್ಲಿ ವರ್ಷ, ಮಾಸ, ಪಕ್ಷ, ವಾರ ಮತ್ತು ತಿಥಿಗಳನ್ನು ಗುರುತಿಸಬಹುದು. ಕೆಲವು ಶಾಸನಗಳಲ್ಲಿ ಯಾವ ಶಕೆಯನ್ನು ಕೊಡದೆ ರಾಜನ ಆಳ್ವಿಕೆಯ ವರ್ಷವನ್ನು ಮಾತ್ರ ಕೊಟ್ಟಿರುತದೆ. ಇನ್ನೂ ಕೆಲವು ಶಾಸನಗಳಲ್ಲಿ ಯಾವುದೇ ರೀತಿಯಿಂದಲೂ ಕಾಲವನ್ನು ಹೇಳಿರುವುದಿಲ್ಲ. ಉದಾಹರಣೆಗೆ 'ಹಲ್ಮಿಡಿ ಶಿಲಾಶಾಸನ'ದಲ್ಲಿ ಕಾಲದ ಪ್ರಸ್ತಾವಿಲ್ಲ. ಅಂತಹ ಸಮಯಗಳಲ್ಲಿ ರಾಜನ ಹೆಸರಿನಿಂದಲೋ, ಭಾಷೆಯ ಸಹಾಯದಿಂದಲೋ ಅಥವಾ ಲಿಪಿಯ ಆಧಾರದಿಂದಲೋ ಶಾಸನದ ಕಾಲವನ್ನು ಗುರುತಿಸಬೇಕಾಗುತ್ತದೆ.

ಶಾಸನಗಳ ರಚನೆಯಲ್ಲಿ ಭಾಷೆಯ ಪಾತ್ರ ತುಂಬಾ ಮುಖ್ಯವಾದುದು. ಶಾಸನಗಳ ರಚನೆಗೆ ವಿಶಿಷ್ಟ ಪದಗಳು ಬೇಕು. ಶಾಸನಗಳು ರಾಜಾಜ್ಞೆಗಳಾಗಿದ್ದರಿಂದ ಅವುಗಳಲ್ಲಿ ಅಂದಿನ 'ಆಡಳಿತ ಭಾಷೆ'ಯನ್ನು ಬಳಸಲಾಗುತ್ತಿತ್ತು. ಶಾಸನಗಳು ಜೈನಪರವಾಗಿದ್ದರೆ ಆಚಾರ್ಯರ ಹೆಸರಿನ ಹಿಂದೆ ಸಂಘ, ಗಣ, ಗಚ್ಛ, ಅನ್ವಯಗಳ ಉಲ್ಲೇಖ ತಪ್ಪದೇ ಬರುತ್ತದೆ. ದಾನಶಾಸನಗಳಲ್ಲಿ ವೈದಿಕ ಧರ್ಮದವರ ಉಲ್ಲೇಖ ಅಧಿಕವಾಗಿಸಿ ಕ್ರಮಿತ, ಷಡಂಗಿ, ಘೈಸಾಸ, ಭಟ್ಟ, ಭಟ್ಟೋಪಾಧ್ಯಾಯವೆಂಬ ಉಪಸರ್ಗೋಪೇತ ಬ್ರಾಹ್ಮಣ ವ್ಯಕ್ತಿಗಳ ಹೆಸರಿನ ಹಿಂದೆ ಅವರ ಗೋತ್ರ, ಅನ್ವಯ ಹೇಳಲ್ಪಟ್ಟಿರುತ್ತದೆ. ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನ, ಮಹಾಜನ, ಷಟ್ಕರ್ಮ ಮೊದಲಾದವು ಅವರಿಗಾಗಿ ಬಳಸಲ್ಪಟ್ಟ ಪರಿಭಾಷೆಗಳು. ಶೈವ ಶಾಸನಗಳಲ್ಲಿ ಲಕುಶೀತ ಪಾರುಮತ ಪಂಥದ ಉಲ್ಲೇಖ ಬರುತ್ತದೆ. ಅವರ ಹೆಸರುಗಳ ಹಿಂದೆ ಸಿಂಹಪರ್ಷ, ಶಕ್ತಿಪರ್ಷ, ಪರ್ವತಾವಳಿ, ಭುಜಂಗಾವಳಿ, ಮೂವರ ಕೋಣೆಯ ಸಂತತಿ, ಅವಳಿ ಸಂತತಿಗಳ ಸೂಚನೆ ದೊರೆಯುತ್ತದೆ. ಎಕ್ಕೋಟಿ, ಗೊರವ, ಜೀಯ, ಮಾಹೇಶ್ವರ, ಸ್ಥಾನಿಕ, ಸ್ಥಾನಪತಿ... ಇವು ಅವರಿಗೆ ಸಂಬಂಧಿಸಿದ ಇತರ ಪರಿಭಾಷೆಗಳು. ಜೀವನಕ್ಕೆ ಸಂಬಂಧಪಟ್ಟ ಮುಖ್ಯ ಉದ್ಯೋಗಗಳಲ್ಲಿ ವಾಣಿಜ್ಯ ಹೆಚ್ಚು ಕ್ರಿಯಾಶೀಲವಾದುದು. ಶಾಸನಗಳಲ್ಲಿ ಅದಕ್ಕೆ ಸಂಬಂಧಿಸಿದ ವಿಶಿಷ್ಟ ಪರಿಭಾಷೆಗಳು ಬಳಕೆಯಾಗಿವೆ. ವ್ಯಾಪಾರದ ಮಾಧ್ಯಮ ಹಣಕಾಸು ಶಾಸನಗಳು ಪ್ರಾಚೀನ ಕರ್ನಾಟಕದ ನಾಣ್ಯ ಪ್ರಪಂಚದ ವಿವರಗಳನ್ನು ಒದಗಿಸುತ್ತವೆ. ಕಮ್ಮಟ, ಅಚ್ಚಿನ ಕಮ್ಮಟ, ಪಿರಿಯಕಮ್ಮಟ, ಟಂಕಸಾಲೆ ಎಂಬ ಅಚ್ಚುಮನೆಗಳ ಪಣ, ಹಾಗು ಅಡ್ಡ, ದ್ರಮ್ಮ, ವೀಸ,

ಬೇಳೆ, ಕಾಕಿಣಿ, ಧರಣ, ಗದ್ಯಾಣ, ಲೊಕ್ಕಿಗದ್ಯಾಣ, ಪೊಕ್ಕಿಯ ಗದ್ಯಾಣ, ಬೃಹತ್‌ಭೈರವಗದ್ಯಾಣ, ಆನೆಯಪೋನ್, ನವಿಲ ಪೋನ್, ನವಿಲಚ್ಚಿನ ಪೊನ್ನು–ಹೀಗೆ ಹಲವು ಹೆಸರಿನ ನಾಣ್ಯಗಳ ವಿಷಯವೂ ಶಾಸನದಲ್ಲಿದೆ.

ರಾಜಕೀಯವೇ ಇರಲಿ, ಧಾರ್ಮಿಕವೇ ಇರಲಿ ಬಹಳಷ್ಟು ಶಾಸನಗಳ ವಿಷಯದಾನ, ಇಲ್ಲಿ ಹಣದ ರೂಪಕ್ಕಿಂತ ಭೂಮಿರೂಪದ ದಾನ ವಿಶೇಷ.  ಆಗ ಬಳಸುವ ಪ್ರಮಾಣಗಳೆಂದರೆ ಕೋಲು, ಮತ್ತರ, ಗಳೆ, ದಾನವಾಗಿ ಕೊಡುವ ಭೂಮಿ ಬಯಲು ಇಲ್ಲವೆ ನೀರಾವರಿ ಇರಬಹುದು.  ಶಾಸನಗಳಲ್ಲಿ ಬರುವ ಬೆದ್ದಲೆ, ಗದ್ದೆ ಇವುಗಳ ಪರ್ಯಾಯ ಪದಗಳು ಭೂಮಿಯ ಮೇರೆಯನ್ನು ಗುರುತಿಸಲು ನೆರೆಹೊರೆಯ ಹೊಲ, ಹೊಳೆ, ಹಳ್ಳಗಳನ್ನು ಹೇಳುವಂತೆ ನಾಲ್ಕು ಮೂಲೆಗೆ ಕವಿಲೆಕಲ್, ಆದಿತ್ಯನಕಲ್, ಚಂದ್ರನಕಲ್, ಪದ್ಮಾವತಿಯ ಕಲ್, ನಾಗರಕಲ್, ಇತ್ಯಾದಿ ಕಲ್ಲುಗಳನ್ನು ನಿಲ್ಲಿಸುತ್ತಿದ್ದರು. ಆಗಾಗ ನಿವೇಶ, ಮನೆ, ಅಂಗಡಿಗಳನ್ನು ದಾನ ನೀಡುತ್ತಿದ್ದರೂ ಕೂಡ.  ದಾನಕ್ಕೆ ಉಪಯೋಗಿಸುವ ಇತರ ವಸ್ತುಗಳಲ್ಲಿ ಆಹಾರಧಾನ್ಯ, ಎಣ್ಣೆ ಮುಖ್ಯವಾದವು. ಆ ಸಂದರ್ಭದ ಅಳತೆಯ ಸಾಧನಗಳೆಂದರೆ ಕೊಳಗ, ಮಾನ, ಖಂಡುಗ, ಸೊಲ್ಲಿಗೆ... ವಿಶಿಷ್ಟವಾಗಿದ್ದವು. ಇವುಗಳಿಗೆ ಹೊರತಾಗಿ ಸುಂಕ, ತೆರಿಗೆಗಳನ್ನು ದಾನವಾಗಿ ಕೊಡುತ್ತಿದ್ದರು. ಅವು ತೆರೆ, ಪಣ, ಸುಂಕ.. ಹೆಸರಿನಿಂದ ರೂಢಿಯಲ್ಲಿದ್ದವು.

ಕವಿ, ಲಿಪಿಕಾರ, ರೂವಾರಿಗಳ ನಿರ್ದೇಶನದಲ್ಲಿ ಲಿಖಿತಂ, ಬರೆದಂ, ಬರೆಪಂ... ಮೊದಲಾದ ವಿಶಿಷ್ಟ ಪದಗಳು ಬಳಕೆಗೊಂಡಿವೆ. ಕವಿಗಳಿಗೆ ಸುಕವಿ, ಒಳ್ಗವಿ ಇತ್ಯಾದಿ ಬಿರುದುಗಳೂ, ಲಿಪಿಕಾರನಿಗೆ ಬರವರಾಚಾರ್ಯ, ಬಿರುದು ಲೇಖಕ, ಮದನ ಮಹೇಶ್ವರ ಇತ್ಯಾದಿ ಬಿರುದುಗಳು ಸಾಮಾನ್ಯ. ನಿಯೋಗಪ್ರಭು, ಸಂಧಿವಿಗ್ರಹಿ, ಕುಳಕರಣಿ, ಸೇನಬೋವ, ಶ್ರೀಕರಣ, ಕಾಯಸ್ಥ, ಗಣಕರು ಲೇಖನ ಕಾರ್ಯವನ್ನು ನಿರ್ವಹಿಸಿದ್ದಾರೆ. ಅಕ್ಕಸಾಲಿ, ಕಮ್ಮಾರ, ಕಂಚುಗಾರ, ಬಡಿಗ ವರ್ಗದವರು ಈ ಕಾರ್ಯ ಮಾಡಿದ್ದರೂ ಮೂಲತಃ ಈ ವೃತ್ತಿ ಕಲ್ಲುಕುಟಿಗರದು. ಅವರ ಹೆಸರಿನ ಹಿಂದೆ ಸರಸ್ವತಿಗಣಭಾತ್ರ, ಸರಸ್ವತಿಗುಣಪುತ್ರ, ಸರಸ್ವತಿಗಣದಾಸಿ, ಕಂಡರಣೆಕಾರ, ಶಾಸನಾಚಾರ್ಯ, ಸೂತ್ರಧಾರಿ, ವಿಶ್ವಕರ್ಮ, ಅಕ್ಕಸಾಲಿ, ಬಿನ್ನಣಿ,

ಬಡಗಿ, ಶಿಲ್ಪಿ, ಆಚಾರಿ, ಕಮ್ಮಾರ, ಕಂಚಗಾರ, ಗವುಂಡ, ರೂವಾರಿಯೆಂಬ ವಿಶೇಷಣಗಳೂ ಹೆಸರಿನ ಮುಂದೆ ಓಜಿ, ಆಚಾರಿ, ಶಿಲ್ಪಿ ಎಂಬ ಉಪಸರ್ಗಗಳನ್ನು ಬಳಸಲಾಗುತ್ತಿತ್ತು.

ಜೆ.ಎಫ್. ಫ್ಲೀಟ್‌ರವರು ಶಾಸನ ಸ್ವರೂಪವನ್ನು ಈ ರೀತಿಯಲ್ಲಿ ಹೇಳಿದ್ದಾರೆ.

"The Inscriptions are notification, very frequently of on official character and generally more or less of public nature, which recite facts, simple or complex with or without dates and were included to be lasting records of the matters to which they refer"

ಶಾಸನಗಳ ವಿಷಯವು ಮುಂದಿನ ಸಾವಿರಾರು ವರ್ಷಗಳ ಅವಧಿಯಲ್ಲಿ ಬಂದವರಿಗೆಲ್ಲ ತಿಳಿಯಲಿ ಎಂಬುದು ಶಾಸನ ಹಾಕಿಸುವವರ ಹಂಬಲವಾಗಿರುತ್ತಿತ್ತು. ಅದು 'ದಾನ'ವಾಗಿರಬಹುದು, ಮೆರೆದ ಕಲಿತನವಾಗಿರಬಹುದು, ದೇವಾಲಯ ನಿರ್ಮಾಣದ ವಿಷಯವಾಗಿರಬಹುದು, ಕೆರೆ–ಬಾವಿಯಾದಿಗಳನ್ನು ಕಟ್ಟಿಸಿದ ಸಂಗತಿಯಾಗಿರಬಹುದು. ಶಾಸನಗಳಲ್ಲಿ 'ಆಚಂದ್ರಾರ್ಕ ತಾರಾಂಬರ" ಎನ್ನುವಂತಹ ಮಾತುಗಳು ಬರುತ್ತಲೇ ಇರುತ್ತವೆ. ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ 'ಶಾಸನ' ಕುರಿತು ಪ್ರಸ್ತಾಪಿಸಿದ್ದಾನೆ. "ಶಾಸನವೆಂಬುದು ರಾಜನ ಆಜ್ಞೆಯಾಗಿದೆ. ಶಾಸನಗಳು ಬಹುಮುಖಿ. ಏಕೆಂದರೆ ಇವುಗಳ ಮೇಲೆಯೇ ರಾಜ್ಯದ ಶಾಂತಿ ಮತ್ತು ಯುದ್ಧಗಳು ನಿಂತಿರುವುದು" ಎಂದು ಹೇಳಿದ್ದಾನೆ. ಕೌಟಿಲ್ಯನು ಶಾಸನ ಬರವಣಿಗೆಗೆ ಕಾರಣವಾಗಿರುವ ೧೩ ಅಂಶಗಳನ್ನು ತಿಳಿಸುತ್ತಾನೆ. ಅವುಗಳೆಂದರೆ....

೧. ನಿಂದಾ
೨. ಪ್ರಶಂಸಾ
೩. ಪೃಚ್ಛಾ
೪. ಆಖ್ಯಾನ
೫. ಬೇಡಿಕೆ
೬. ನಿರಾಕರಣೆ
೭. ಉಪಾಲಂಭ (ನಿನಗದು ಯೋಗ್ಯವಲ್ಲವೆಂದು ಹೇಳುವುದು)
೮. ಪ್ರತಿಷೇದ

೯. ಚೋದನಾ (ಆಜ್ಞೆ-
೧೦. ಸಾಂತ್ವ (ಸಮಾಧಾನ)
೧೧. ಅಭ್ಯವ ಪತ್ತಿ (ಸಹಾಯದ ಭರವಸೆ)
೧೨. ಅನುನಯ

'ಶುಕ್ರನೀತಿಸಾರ'ವು ಶಾಸನದ ಸ್ವರೂಪ ಕುರಿತು ಹೀಗೆ ಹೇಳುತ್ತದೆ. "ರಾಜನ ಸ್ವಂತ ರುಜುವುಳ್ಳದ್ದು. ಅವನು ಹೊರಸಿಸಿದ ಆಜ್ಞೆಯ ದಿನದ ದಿನಾಂಕವನ್ನು ಹೊಂದಿರುವುದು" ಮತ್ತೇ ಮುಂದುವರಿದು "ಶಾಸನದ ಬರಹವು ಹೀಗೆ ಆರಂಭವಾಗಬೇಕು, ನೀವೆಲ್ಲ ಕೇಳಿರಿ, ನೀವೆಲ್ಲ ಹೀಗೆ ಮಾಡಬೇಕು ಮತ್ತು ಆ ಆಜ್ಞೆಯಂತೆ ನಡೆದುಕೊಳ್ಳಬೇಕು"

ಯಾಜ್ಞವಲ್ಕ್ಯನು ಅರಸನ ಕರ್ತವ್ಯಗಳನ್ನು ಹೇಳುವಾಗ ಶಾಸನ ಸ್ವರೂಪ ಕುರಿತು ವಿವರಗಳನ್ನು ನೀಡುತ್ತಾನೆ. ಅಂದರೆ....

"ಭೂಮಿಯನ್ನು ದಾನ ಮಾಡುವಾಗಲೋ ಅಥವಾ ಯಾವುದಾದರೂ ಶಾಶ್ವತವಾದ ಏರ್ಪಾಟು ಮಾಡುವಾಗಲೋ ಅದರ ನಿಯಮಗಳನ್ನು ಮುಂದಿನ ರಾಜರುಗಳ ತಿಳುವಳಿಕೆಗಾಗಿ ವಸ್ತ್ರಪಟದ ಮೇಲಾಗಲಿ, ತಾಮ್ರಪಟದ ಮೇಲಾಗಲಿ ಬರೆಯಿಸಬೇಕು. ಅದರಲ್ಲಿ ತನಗಿಂತ ಹಿಂದಿನ ಮೂರು ತಲೆಮಾರುಗಳ ವಿಷಯ, ತನ್ನ ವಿಷಯ, ದಾನವನ್ನು ಸ್ವೀಕರಿಸುವವನ ವಿಷಯ, ದಾನದ ಪ್ರಮಾಣ, ಭೂಮಿಯ ಮೇರೆಗಳು, ದಿನಾಂಕ ಇವುಗಳನ್ನು ನಿರೂಪಿಸಿ, ತನ್ನ ಮುದ್ರ ಮತ್ತು ಸಹಿಗಳನ್ನು ಹಾಕಬೇಕು. ಹೀಗೆ ದಾನವು ಶಾಶ್ವತವಾಗುವಂತೆ ಮಾಡಬೇಕು."

ಒಟ್ಟು ವಿವರವನ್ನು ಹಿನ್ನೆಲೆಯಾಗಿಟ್ಟುಕೊಂಡು ಡಾ. ಎಸ್.ಎಂ. ಹಿರೇಮಠರವರು (೨೦೧೪, ೨೬-೨೭-೨೮) ಶಾಸನದ ಸಮಗ್ರ ಸ್ವರೂಪವನ್ನು ವಿವರಿಸಿದ್ದಾರೆ.

೧. "ಶಾಸನವೆಂದರೆ ರಾಜನ ಆಜ್ಞೆ
೨. ರಾಜನು ಹೊರಡಿಸುವ ಕಾಯ್ದೆಯ ಬರಹವೇ ಶಾಸನ
೩. ಆಜ್ಞೆ ಮೀರಿದವರಿಗೆ ಶಿಕ್ಷಿಸಬೇಕೆಂಬ ಪರೋಕ್ಷ ತಿಳುವಳಿಕೆ ಮೂಡಿಸುವ ಬರಹದ ದಾಖಲಾತಿಯೇ ಶಾಸನ.
೪. ಶಾಸನ ಎಂಬುದು ಕಂಠ ಅಥವಾ ಲೆಕ್ಕಣಿಕೆಯಿಂದ ಬರೆದುದಲ್ಲ; ಅದು ಕೆತ್ತಿದ ಅಥವಾ ಕೊರೆದ ದಾಖಲಾತಿ.
೫. ಶಾಸನವೆಂಬುದು ಗಟ್ಟಿಯಾದ ಪದಾರ್ಥದ ಮೇಲೆ ಕೊರೆಯಲ್ಪಟ್ಟಿದ್ದು.

೬. ಶಾಸನವೆಂಬುದು ಹೆಚ್ಚಾಗಿ ದಾನದ ವಿಷಯವನ್ನೇ ಒಳಗೊಂಡಿದ್ದು.

೭. ಶಾಸನವೆಂಬುದು ದಾನದ ಪ್ರತ್ಯೇಕತೆಯನ್ನು ಸ್ಪಷ್ಟವಾಗಿ ತೋರಿಸಬೇಕೆಂಬ ಆಜ್ಞೆ.

೮. ಧಾರ್ಮಿಕ ತತ್ವ ಪ್ರಸಾರ ಮಾಡಲೆಂದು ಹುಟ್ಟಿಕೊಂಡ ಕಲ್ಲು ಅಥವಾ ಲೋಹಗಳ ಮೇಲಿನ ಬರಹವೇ ಶಾಸನ.

೯. ದಾನಿಯ ಹೆಗ್ಗಳಿಕೆಯನ್ನು ಹೇಳುವ ಶಿಲಾ ಅಥವಾ ಲೋಹ ಲೇಖನವೇ ಶಾಸನ.

೧೦. ಸಂಸ್ಕೃತಿಯ ವಾಹಕವಾಗಿರುವ ಶಿಲೆಯ ಬರಹವೇ ಶಾಸನ.

೧೧. ಅರಸನ ಮುದ್ರಾಂಕಿತ ಹೊಂದಿದ ಶಿಲೆ ಅಥವಾ ಲೋಹ ಬರಹದ ದಾಖಲಾತಿಯೇ ಶಾಸನ.

೧೨. ಇತಿಹಾಸಕ್ಕೆ ಮುಖವಾಣಿಯಾಗಿರುವ ಕೊರೆದ ಬರಹವೇ ಶಾಸನ.

೧೩. ಗಟ್ಟಿಯಾದ ವಸ್ತುವಿನ ಮೇಲೆ ಕೊರೆದ ಮತ್ತು ಮೌಲ್ಯಗಳನ್ನು ಒಳಗೊಂಡಿರುವ ಬರಹವೇ ಶಾಸನ.

೧೪. ಸಾಹಿತ್ಯಿಕ ಮೌಲ್ಯಗಳ ಪ್ರಾತಿನಿಧಿಕವಾದ ಶಿಲೆಯ ಬರಹವೇ ಶಾಸನ.

೧೫. ಕಲ್ಲುಗಳ ಒಡಲಿನಿಂದ ಚಿಮ್ಮಿಬರುವ ಜೀವಧ್ವನಿಯೇ ಶಾಸನ.

೧೬. ಜೀವನದ ಸಮಗ್ರಮುಖಗಳಿಗೆ ಶಿಲೆಯ ಮೂಲಕವೇ ಕನ್ನಡಿಯಾಗಬಲ್ಲ ಶಿಲಾಫಲಕದ ಬರಹವೇ ಶಾಸನ.

೧೭. ಪ್ರಭುಸಂಮ್ಮಿತದ ಶಿಲಾ ಮತ್ತು ಲೋಹದ ಮೇಲಿನ ಬರಹಗಳೇ ಶಾಸನ.

೧೮. ತ್ಯಾಗ-ವೀರ-ದಾನಗಳ ಶಿಲಾಸ್ತಂಭವೇ ಶಾಸನ.

೧೯. ಹಸ್ತಪ್ರತಿಗಳಿಗಿಂತಲೂ ಭಿನ್ನವಾಗಿರುವ ಬಹರಗಳೇ ಶಾಸನಗಳು.

೨೦. ಪ್ರಾಚೀನವಾಗಿರುವ ದಾಖಲಾತಿಗಳನ್ನು ರಕ್ಷಿಸಿಕೊಂಡಿರುವ ಶಿಲೆಯ ಮೇಲಿನ ಪ್ರಾಚೀನತಮ ಬರಹಗಳೇ ಶಾಸನ.

೨೧. ಶಿಲೆಯು ಅರಳಿ ಗ್ರಂಥವಾದುದೇ ಶಾಸನ. ಲೋಹವು ಮೃದುಗೊಂಡು ಅಕ್ಷರವಾದುದೇ ಶಾಸನ.

೨೨. ಪ್ರಭುತ್ವದ ಶಾಂತಿಯ ಆಕರಗಳೇ ಶಾಸನ.

೨೩. ಯುದ್ಧ ಸಂಘಟನೆ ಇಲ್ಲವೆ ನಿಯಂತ್ರಣದ ಬರಹದ ಕಟ್ಟಳೆಗಳೇ ಶಾಸನ.

೨೪. ಪ್ರಭುತ್ವದ ವಿಧಿ-ವಿಧಾನಗಳನ್ನು ಬರಹದ ಮೂಲಕ ಪ್ರಕಟಗೊಂಡ ಆಕರಗಳೇ ಶಾಸನ.

೨೫. ಅರಸನ ಪ್ರತಿನಿಧಿಯಂತಿದ್ದ ಅಕ್ಷರ ರೂಪವೇ ಶಾಸನ.

೨೬. ಆಜ್ಞಾ ಪತ್ರಗಳು ಸಂಶೋಧನೆಯ ಮೂಲಕ ತಿಳಿಸುವ ಬರಹದ ದಾಖಲಾತಿಯೇ ಶಾಸನ.

೨೭. ಅರಸನ ಕೀರ್ತಿ ಚಿರಸ್ಥಾಯಿಯಾಗಿಸುವ ದಾಖಲಾತಿಯೇ ಶಾಸನ.

೨೮. ಪ್ರಭುತ್ವದ ಜನ್ಮಕುಂಡಲಿಯೆ ಶಾಸನ.

೨೯. ಅರಸನು ಮಾಂಡಳಿಕ ಸಾಮಂತ-ಅಧಿಕಾರಿಗಳಿಗೆಲ್ಲ ತಿಳಿಸಬೇಕಾದ ಕರ್ತವ್ಯಾದಿಗಳೆಲ್ಲ ಬರಹದ ಮುಖಾಂತರ ವ್ಯಕ್ತವಾಗಬೇಕೆಂಬ ಅನಿವಾರ್ಯದ ಬರಹದ ದಾಖಲಾತಿಯೇ ಶಾಸನ.

೩೦. ರಾಜ-ಮಹಾರಾಜರುಗಳ ಗತ್ತು-ಗಮ್ಮತ್ತಿನ ಧ್ವನಿಯೇ ಶಾಸನ."[೨]

**ಶಾಸನಗಳ ಮಹತ್ವ:**

ಭಾರತದ ಇತಿಹಾಸದ ರಚನೆಗೆ ಚಾರಿತ್ರಿಕ ಆಧಾರಗಳ ಅಭಾವ, ಅಸಮರ್ಪಕತೆ, ಅವಿಶ್ವಾಸನೀಯತೆಗಳು ಕಂಡುಬರುತ್ತವೆ. ಹಾಗೆಯೇ ಭಾರತದಲ್ಲಿ ಇತಿಹಾಸ ರಚಿಸಲು ಯಾವುದೇ ರೀತಿಯ ಆಕರಗಳು ಇಲ್ಲ ಎನ್ನುವ ಕೊರತೆ ಓರಿಯಂಟಲಿಸ್ಟರನ್ನು ಕಾಡಿದಾಗ, ಅವರಿಗೆ ದೊರೆತ ಆಕರಗಳೆಂದರೆ ಈ ಶಾಸನಗಳು. "ಭರತಖಂಡದಲ್ಲಿ ಅಸಂಖ್ಯಾತವಾದ ಶಾಸನಗಳು ದೊರಕುತ್ತವೆ. ಅದರಲ್ಲೂ ಕರ್ನಾಟಕದಲ್ಲಿ ಸಿಗುವಷ್ಟು ಶಾಸನಗಳು ಭಾರತದ ಬೇರಾವ ಪ್ರಾಂತದಲ್ಲೂ ಸಿಗುವುದಿಲ್ಲವೆಂದು ವಿದ್ವಾಂಸರ ಮತ" ಎಂಬುದನ್ನು ಡಾ. ಚಿದಾನಂದಮೂರ್ತಿಯವರು (೨೦೧೬, ೨೭) ದಾಖಲಿಸಿದ್ದಾರೆ. ಕನ್ನಡ ನಾಡಿಗೆ ಸಂಬಂಧಿಸಿದಂತೆ ಇಂದು ಸಂಶೋಧಕ-ಸಂಪಾದಕರು ಸುಮಾರು ೩೫೦೦೦ ದಿಂದ ೫೦೦೦೦ ಸಾವಿರ ಶಾಸನಗಳನ್ನು ಸಂಶೋಧಿಸಿ ಬೆಳಕು ಕಾಣುವಂತೆ ಮಾಡಿರುವರು. ಹಾಗಾಗಿ ಶಾಸನಗಳ ಅಧ್ಯಯನಕ್ಕೆ ಹೆಚ್ಚು ಮಹತ್ವ ಬಂದಿದ್ದು ಬ್ರಿಟಿಷ ವಸಾಹತುಶಾಹಿ ಆಡಳಿತಾವಧಿಯಲ್ಲಿ, ಅಲ್ಲಿಯವರೆಗೆ ಸಾಹಿತ್ಯಾಂಶಗಳಿಂದ ಪ್ರಾಚೀನ ಭಾರತದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳನ್ನು ತಿಳಿಯಬಹುದಾದರೂ ಅವು ಶಾಸನಗಳಷ್ಟು ಪ್ರಾಚೀನವಾದ ಹಾಗೂ ನಿಖರವಾದ ಮಾಹಿತಿಯನ್ನು ಒದಗಿಸುವುದಿಲ್ಲ. ಇದರಿಂದಲೇ ಶಾಸನಗಳ ಮಹತ್ವ ಎಷ್ಟೆಂಬುದನ್ನು ಊಹಿಸಬಹುದು. ಈ ರಾಷ್ಟ್ರದ ಗತ ಇತಿಹಾಸವನ್ನು ಪುನಃರಚಿಸುವಲ್ಲಿ ಲಭ್ಯವಿರುವ ಏಕೈಕ ಖಚಿತ ಆಧಾರಗಳೆಂದರೆ ಶಾಸನಗಳು!

ಶಾನಗಳ ಮಹತ್ವ ಸಾಹಿತ್ಯಿಕವಾಗಿ ಗೌಣ, ಸಾಹಿತ್ಯಿಕಾಂಶಗಳಿಗಿಂತ ಅವು ಕೂಡುವ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ.... ಮುಂತಾದ ವಿವರಗಳು ಅತ್ಯಂತ ಪ್ರಮುಖವಾದವು. ಸಾಹಿತ್ಯ ಗ್ರಂಥಗಳನ್ನೇ ಆಗಲಿ, ವಿದೇಶಿ ಪ್ರವಾಸಿಗರ ಬರಹಗಳೇ ಆಗಲಿ, ಶಾಸನಗಳೊಡನೆ ಹೋಲಿಸಿದಾಗ ಈಚಿನವು ಎನಿಸುತ್ತವೆ. ಅಲ್ಲದೇ, ಅವು ಶಾಸನಗಳಷ್ಟು

ಖಚಿತವಾಗಿ ಆ ಕಾಲದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳನ್ನು ಕೊಡುವುದಿಲ್ಲ. ಶಾಸನಗಳಲ್ಲಿ ಇಲ್ಲದೆ ಇರುವ ವಿಷಯವಿಲ್ಲ. ಆ ಕಾಲದ ಭಾಷಾ ಸ್ವರೂಪವನ್ನು ತಿಳಿಯಲು ಶಾಸನಗಳಿಗಿಂತ ಉತ್ತಮ ಸಾಧನಗಳು ಬೇರೊಂದಿಲ್ಲ. ಕವಿಗಳ ಕಾಲ ಯಾವುದೇ ಆಗಿರಲಿ, ತಮ್ಮ ಕಾವ್ಯ ಭಾಷೆಯು ಪ್ರೌಢವಾಗಿರಬೇಕು ಎಂಬ ಬಯಕೆಯಿಂದ ತಮಗಿಂತ ಪೂರ್ವದ ಹಿಂದಿನ ಭಾಷೆಯನ್ನು ಬಳಸಬಹುದು. "ಹಳೆಗನ್ನಡದ ಗದ್ಯಗ್ರಂಥ, ವಡ್ಡಾರಾಧನೆ'ಯ ಭಾಷೆಯು ಎಷ್ಟು ಪ್ರಾಚೀನ ಎಂಬ ಭಾವನೆ ಬರುತ್ತದೆಯೋ ಅಷ್ಟು ಪ್ರಾಚೀನವಲ್ಲ ಆ ಗ್ರಂಥ. ನಡುಗನ್ನಡ ಕಾಲದಲ್ಲಿ, ಅಷ್ಟೇಕೆ ಆಧುನಿಕ ಕಾಲದಲ್ಲಿಯೂ ಎಷ್ಟೋ ಕವಿಗಳು ಕಾವ್ಯಗಳನ್ನು ಹಳಗನ್ನಡದಲ್ಲಿಯೇ ರಚಿಸಿದ್ದಾರೆ. ಶಾಸನಗಳಲ್ಲಿ ಹೀಗಾಗಿರುವುದು ಕಡಿಮೆ. ಇಲ್ಲಿಯೂ ಪ್ರೌಢರಾದ ಕವಿಗಳು ತಮಗಿಂತ ಪ್ರಾಚೀನವಾದ ಭಾಷೆಯನ್ನು ಬಳಸಿರುವುದುಂಟು. ಆದರೂ ಸ್ವಲ್ಪ ಎಚ್ಚರಿಕೆವಹಿಸಿ ಶಾಸನಾಭ್ಯಾಸವನ್ನು ಮಾಡಿದರೆ, ಆ ಕಾಲದ ಭಾಷಾ ಸ್ವರೂಪವನ್ನು ಹೆಚ್ಚು ಖಚಿತವಾಗಿ ತಿಳಿಯಬಹುದು"[೩]

ಕೋಲ್ ಬ್ರೂಕ್‌ರವರು ಶಾಸನಗಳ ಮಹತ್ವ ಕುರಿತು ಈ ರೀತಿಯಲ್ಲಿ ಹೇಳಿದ್ದಾರೆ.

"ಹಿಂದೂ ಜನಾಂಗದವರಿಗೆ ಅಧಿಕೃತ ಚರಿತ್ರೆ ಇಲ್ಲದಿರುವಾಗ ಆಕಸ್ಮಿಕಗಳ ಮೂಲಕ ಆಗಾಗ ಪತ್ತೆಯಾಗುವ ಎಲ್ಲ ಅಸಲಿ ಸ್ಮಾರಕಗಳಿಗೆ ವಿಶೇಷವಾಗಿ ಸಿಲಾಶಾಸನ ಲೋಹಗಳಿಗೆ ನ್ಯಾಯವಾಗಿಯೇ ಪ್ರಾಮುಖ್ಯತೆ ಸಿಗುತ್ತದೆ".

ಜೆ.ಎಫ್. ಫ್ಲೀಟ್‌ರವರು ಈ ತೆರನಾಗಿ ಹೇಳಿದ್ದಾರೆ.

"ವಿಶೇಷವಾಗಿ ಭರತಖಂಡ ಶಾಸನರೂಪದ ಅವಶೇಷಗಳಲ್ಲಿ ಶ್ರೀಮಂತವಾಗಿರುವುದು ಮಾತ್ರವಲ್ಲದೆ ಆ ಶಾಸನಗಳೇ ಈ ದೇಶದ ಪ್ರಾಚ್ಯಯುಗ ಸಂಬಂಧವಾದ ಎಲ್ಲಾ ಸಂಶೋಧನಾ ಪಥಗಳಲ್ಲಿಯೂ ಐತಿಹಾಸಿಕ ಫಲಿತಾಂಶಗಳಿಗೆ ಖಚಿತವಾದ ಏಕಮಾತ್ರ ಬುನಾದಿಯಾಗಿದೆ".

ಪ್ರೊ. ಜಿ.ಎಸ್. ದೀಕ್ಷಿತ್ ರವರ ಪ್ರಕಾರ

"ಶಾಸನಗಳು ಪ್ರಾಚೀನ ಭಾರತದ ಕಾಲಾನುಕ್ರಮಣಿಕೆಯ ಒಂದೇ ಒಂದು ಅಂತಿಮ ಆಲಂಬನ"

ಬಿ.ಸಿ. ಛಾಬಾರವರು ಈ ರೀತಿಯಲ್ಲಿ ಹೇಳಿದ್ದಾರೆ.

"ಶಾಸನಗಳು ಭಾರತದ ಜೀವನಾಡಿ".

ಡಾ. ಪಿ.ಬಿ. ದೇಸಾಯಿಯವರ ಅಭಿಪ್ರಾಯದಂತೆ

"ಶಾಸನಗಳು ನಮ್ಮ ನಾಡಿನ ಅಪೂರ್ವವಾದ ಸಂಪತ್ತು".

ಡಾ. ಬಿ.ಎ. ವಸಂತಶೆಟ್ಟಿಯವರ ಪ್ರಕಾರ

"ಸಂಶೋಧಕರಿಗೆ ಶಾಸನಗಳು ಅತ್ಯಂತ ಪ್ರಾಮಾಣಿಕವಾದ ಶುದ್ಧವಾದ, ನಿಚ್ಚಳವಾದ ಕಣ್ಣುಗಳಿದ್ದಂತೆ. ಆ ಕಣ್ಣುಗಳ ಮುಖಾಂತರ ಸಂಶೋಧಕರು ಪ್ರಾಚೀನ ಕಾಲದ ಧರ್ಮ, ಸಮಾಜ, ಸಂಸ್ಕೃತಿಯಾದಿಗಳನ್ನು ನೋಡತೊಡಗಿದರೆ ಅವುಗಳ ಸತ್ಯರೂಪವು ಕಾಣಬಲ್ಲದು".

ದಿ. ಸ್ಕಾಲ್ಕಾರ್‌ರವರು ಹೇಳಿರುವಂತೆ

"ಭಾರತೀಯ ಸಂಸ್ಕೃತಿಯನ್ನು ಅಧ್ಯಯನ ಮಾಡುವವರಿಗೆ ಸಾಹಿತ್ಯದಂತೆಯೇ ಶಾಸನಗಳೂ ವಿಷಯದ ಗಣಿಯಾಗಿವೆ. ಭಾರತೀಯರ ಜೀವನ ಮತ್ತು ಆಲೋಚನೆಗಳ ಮೇಲೆ, ಬೇರೆ ಬೇರೆ ಕೋನಗಳ ಮೇಲೆ ಅವು ಸಾಕಷ್ಟು ಬೆಳಕನ್ನು ಬೀರುತ್ತವೆ. ಭಾರತೀಯ ಸಂಸ್ಕೃತಿಯ ಐಕ್ಯತೆಯನ್ನು ಕಾಪಾಡುವಲ್ಲಿ ಇವು ಪ್ರಧಾನ ಪಾತ್ರವನ್ನು ವಹಿಸುತ್ತವೆ. ಪ್ರಾಚೀನತಮ ಜ್ಞಾನದ ಕೊರತೆಯನ್ನು ಶಾಸನಗಳ ಅಭ್ಯಾಸದಿಂದ ಹೋಗಲಾಡಿಸಿಕೊಳ್ಳಬಹುದು".

ಡಾ. ಎಂ. ಚಿದಾನಂದಮೂರ್ತಿಯವರ ಪ್ರಕಾರ

"ಶಾಸನಗಳು ಸಾಹಿತ್ಯದ ತಲಕಾವೇರಿ ಕನ್ನಡ ನಾಡಿನ ಜೀವನವು ಎಲ್ಲಿಯೂ ಯಾವ ಗ್ರಂಥಗಳಲ್ಲಿಯೂ ಮಡುಗಟ್ಟಿ ನಿಂತಿಲ್ಲ. ಅದು ಕೆಲವು ಕಾವ್ಯಗಳಲ್ಲಿ ಅಲ್ಲಲ್ಲಿ ಗೋಪಾದ, ಜಲದಂತೆ ಕಂಡುಬಂದರೂ ಹೆಚ್ಚು ಪ್ರಮಾಣದಲ್ಲಿ, ಹೆಚ್ಚು ವಿಸ್ತಾರವಾಗಿ, ಹೆಚ್ಚು ಶುದ್ಧರೂಪದಲ್ಲಿ ಕಾಣಿಸಿಕೊಳ್ಳುವುದು ಶಾಸನಗಳಲ್ಲಿ".

ಭರತಖಂಡ ಇತಿಹಾಸವನ್ನು ರೂಪಿಸುವುದರಲ್ಲಂತೂ ಶಾಸನಗಳೇ ಪ್ರಮುಖ ಆಧಾರ. ಮನುಷ್ಯನ ಇತಿಹಾಸದ ವಿಷಯದಲ್ಲಿ ನಮಗಿರುವ ಜ್ಞಾನವೆಲ್ಲ, ಜ್ಞಾತದಿಂದ ಅಜ್ಞಾತಕ್ಕೆ ಹೋಗಿ

ಸಂಪಾದಿಸಿದುದು. ಈ 'ಜ್ಞಾತ'ವಾದುದೆಲ್ಲವೂ ಬಹುಮಟ್ಟಿಗೆ ಎಲ್ಲಾ ದೇಶಗಳಲ್ಲಿಯೂ ಶಾಸನಗಳಿಂದ ತಿಳಿದುಬರುತ್ತದೆ. ನಮ್ಮ ನಾಡಿನ ಜನಜೀವನವು ಶಾಸನಗಳಲ್ಲಿ ಅಭಿವ್ಯಕ್ತಗೊಂಡಿರುವಂತೆ ಪ್ರಾಯಶಃ ಇನ್ನೆಲ್ಲೂ ವ್ಯಕ್ತವಾಗಿಲ್ಲ. ಶಾಸನಗಳಿಂದ ರಾಜರ ಇತಿಹಾಸವನ್ನು, ಅವರು ಪರಸ್ಪರ ಮಾಡಿದ ಭಯಂಕರ ಯುದ್ಧಗಳನ್ನು, ಅವರ ಕಾಲ್ಪನಿಕ ಹೊಗಳಿಕೆಯನ್ನು ಮಾತ್ರ ಅರಿಯಬಹುದು. ಆ ಕಾಲದ ಒಳ ಆಡಳಿತ, ವ್ಯಾಪಾರ, ಸಾಮಾಜಿಕ ವ್ಯವಸ್ಥೆಗಳು, ಧಾರ್ಮಿಕ ಪರಿವರ್ತನೆಗಳು ಮತ್ತು ತಿಕ್ಕಾಟಗಳು ಈ ವಿಷಯಗಳಲ್ಲಿ ಶಾಸನಗಳಿಂದ ನಮಗೆ ಯಾವ ಉಪಯೋಗವೂ ಇಲ್ಲವೆಂಬುದನ್ನು ಕೆಲವು ವಿದ್ವಾಂಸರು ಹೇಳಿದ್ದುಂಟು.

ಭಾಷೆಯ ದೃಷ್ಟಿಯಿಂದ ಕರ್ನಾಟಕದ ಶಾಸನಗಳನ್ನು ನಾಲ್ಕು ಅವಧಿಗಳಿಗೆ ಹಂಚಬಹುದು. ಆದಿಕಾಲದಲ್ಲಿ ನಮಗೆ ದೊರಕುವ ಶಾಸನಗಳೆಲ್ಲ ಪ್ರಾಕೃತದಲ್ಲಿವೆ. ಅದು ಮೊದಲ ಘಟ್ಟ. ಸು. ಕ್ರಿ.ಶ. ೪೫೦ ರಿಂದ ಕನ್ನಡ ಶಾಸನಗಳು ಆರಂಭವಾಗುತ್ತವೆ. ಸಂಸ್ಕೃತ ಶಾಸನಗಳೂ ಆಗಲೇ ಕಾಣಿಸಿಕೊಳ್ಳಲಾರಂಭವಾಗುತ್ತವೆ. ೯ನೇ ಶತಮಾನದವರೆಗೆ ದೊರಕುವ ಶಾಸನಗಳಲ್ಲಿ ಸಂಸ್ಕೃತವೇ ಹೆಚ್ಚು. ಅದು ಎರಡನೆಯ ಘಟ್ಟ. ಅಲ್ಲಿಂದ ೧೧ನೇ ಶತಮಾನದವರೆಗೆ ಕನ್ನಡ, ಸಂಸ್ಕೃತಗಳು ಸಮಸಮನಾಗಿಯೇ ದೊರಕುತ್ತವೆ. ಕನ್ನಡದ ಶಾಸನಗಳ ಪ್ರಾಬಲ್ಯ ಹೆಚ್ಚು. ಅದು ಮೂರನೆಯ ಘಟ್ಟ. ಅಲ್ಲಿಂದ ಮುಂದೆ ಕನ್ನಡ ಶಾಸನಗಳೇ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಶಾಸನಗಳ ಸೊಗಸನ್ನೂ, ಕಾವ್ಯ ಸೌಂದರ್ಯವನ್ನು ಕಂಡುಕೊಂಡು, ಆ ದೃಷ್ಟಿಯಿಂದ ಅವುಗಳ ಸಂಗ್ರಹವೊಂದನ್ನು ಕ್ರಿ.ಶ. ೧೯೨೩ರಲ್ಲಿ ಆರ್. ನರಸಿಂಹಾಚಾರ್ಯರು "ಶಾಸನಪದ್ಯಮಂಜರಿ" ಎಂಬ ಹೆಸರಿನಲ್ಲಿ ಪ್ರಕಟಿಸಿದರು.

ಭಾರತದಲ್ಲಿ ಸಿಕ್ಕುವಷ್ಟು ಶಾಸನಗಳು ಜಗತ್ತಿನ ಯಾವ ಭಾಗದಲ್ಲೂ ದೊರಕಲಾರವು. ಅವುಗಳ ಸಾಂಸ್ಕೃತಿಕ ಮಹತ್ವವನ್ನು ಇಂದು ಅರಿತುಕೊಳ್ಳಬೇಕಾಗಿದೆ.

೧. "ಶಾಸನಗಳು ಸಂಸ್ಕೃತಿಯ ಗಣಿಗಳಾಗಿವೆ.
೨. ಶಾಸನಗಳು ಜೀವನ ಆಲೋಚನೆಗಳ ಮೇಲೆ ಹೊಸ ಬೆಳಕು ಚೆಲ್ಲುತ್ತವೆ.
೩. ಶಾಸನಗಳು ಸಂಸ್ಕೃತಿಯ ಐಕ್ಯತೆಗೆ ನೆರವಾಗುತ್ತವೆ.
೪. ಶಾಸನಗಳಿಂದ ಬೇರೆ–ಬೇರೆ ಜ್ಞಾನ ಶಾಖೆಗಳು ಪರಿಚಯಕ್ಕೆ ಬರುತ್ತವೆ.
೫. ಶಾಸನಗಳು ಅರುವಿನ ಭಂಡಾರಗಳಾಗಿವೆ.

೭. ಶಾಸನಗಳ ರಕ್ಷಣೆ–ಅಧ್ಯಯನವೆಂದರೆ ನಮ್ಮ ಸಂಸ್ಕೃತಿಯ ಪೋಷಣೆ ವ್ಯಾಸಂಗವಾಗಿದೆ.

೭. ಶಾಸನಗಳು ಜ್ಞಾನದ ಆಂತರ್ಯ ಒಳಹೊಕ್ಕು ನೋಡುವ ಕಣ್ಣುಗಳಾಗಿವೆ.

೮. ಶಾಸನಗಳು ಸತ್ಯದ ದಾಖಲೆಗಳಾಗಿವೆ.

೯. ಶಾಸನಗಳು ಸಾಹಿತ್ಯದ ತಲಕಾವೇರಿ

೧೦. ಶಾಸನಗಳು ಪ್ರಾಚೀನತೆಯನ್ನು ಅರ್ವಾಚೀನತೆಯ ಅಂಚಿಗೆ ತಲುಪಿಸಬಲ್ಲ ಪೂರ್ವಗ್ರಹಪೀಡೆಯಿಂದ ಹೊರತಾದ ಸ್ವಚ್ಛವಾದ ದಾಖಲೆಗಳಾಗಿವೆ.

೧೧. ಶಾಸನಗಳಿಂದ ನಮ್ಮದೆಯಾದ 'ಅರ್ಥಶಾಸ್ತ್ರ'ವೊಂದನ್ನು ರಚಿಸಿಕೊಳ್ಳಬಹುದಾಗಿದೆ."[೪]

ಶಾಸನಗಳಲ್ಲಿರುವ ಮಹತ್ವವನ್ನು ಸ್ಥೂಲವಾಗಿ ಧಾರ್ಮಿಕ, ಚಾರಿತ್ರಿಕ, ಸಾಮಾಜಿಕ, ಸಾಹಿತ್ಯಕ, ಭಾಷಿಕ, ಸಾಂಸ್ಕೃತಿಕ ಎಂದು ವಿಭಾಗಿಸಿಕೊಂಡಿದೆ.

**೧. ಧಾರ್ಮಿಕ ಮಹತ್ವ:**

ನಮ್ಮ ನಾಡು ಸಂಪತ್ತಿಗೆ, ಸಂಸ್ಕೃತಿಗೆ ರಾಜ್ಯಭಾರಕ್ಕೆ ಹೆಸರುವಾಸಿಯಾದಂತೆ ಧರ್ಮ ಸಹಿಷ್ಣತೆಗೂ ಹೆಸರುವಾಸಿಯಾಗಿದೆ. ಈ ನಾಡಿನ ಆಯಾ ರಾಜರ ಆಳ್ವಿಕೆಯ ಕಾಲದಲ್ಲಿ ಬೌದ್ಧ, ಜೈನ, ಶೈವ, ಮಾಧ್ವ, ಸಿಖ್... ಮುಂತಾದ ಅನೇಕ ಧರ್ಮಗಳು ಉಳಿದು ಬೆಳೆದು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವ ಮೂಲಕ ಜನಸಾಮಾನ್ಯರ ಮೇಲೆ ಪ್ರಭಾವವನ್ನು ಬೀರಿ ತಮ್ಮ ಹತೋಟಿಯಲ್ಲಿಟ್ಟುಕೊಳ್ಳುವಲ್ಲಿ ಯಶಸ್ವಿಯಾಗಿವೆ. ಈ ಶಾಸನಗಳಲ್ಲಿ ಧಾರ್ಮಿಕ ದೃಷ್ಟಿಯಿಂದ ನೀಡಿದ ದಾನದ ಬಗ್ಗೆ, ಧರ್ಮ ಸಮನ್ವಯಕ್ಕಾಗಿ ಹಾಕಿಸಿದ ಶಾಸನಗಳು, ಧರ್ಮವ್ಯಾಜ್ಯವನ್ನು ಪರಿಹರಿಸಲೆಂದು ಹಾಕಿದ ಶಾಸನಗಳನ್ನು ನೋಡಬಹುದು.

ಚಾಲುಕ್ಯ ವಿಜಯಾದಿತ್ಯ ಸತ್ಯಾಶ್ರಯ ಕಾಲದ ಬಾದಾಮಿಯ ಶಾಸನ ಬ್ರಹ್ಮ, ವಿಷ್ಣು, ಮಹೇಶ್ವರ ಈ ತ್ರಿಮೂರ್ತಿಗಳನ್ನು ಏಕಕಾಲದಲ್ಲಿ ಸ್ಥಾಪಿಸಿದುದನ್ನು ಹೇಳುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಧಾರ್ಮಿಕ ಭಾವನೆ ಇನ್ನೂ ವಿಶೇಷವಾಗಿ ಬೆಳೆಯಿತು. ಅದಕ್ಕೆ ಅವರ ಕಾಲದ ಶಾಸನಗಳೇ ಸಾಕ್ಷಿ. "ರಾಷ್ಟ್ರಕೂಟರ ಶಾಸನಗಳಲ್ಲಿ ಶಿವ ಮತ್ತು ವಿಷ್ಣು ಇಬ್ಬರನ್ನು ಸ್ತುತಿರೂಪವಾದ ಶ್ಲೋಕಗಳು ದೊರೆಯುತ್ತವೆ. ಅವರ ನಾಣ್ಯಗಳ ಮೇಲೆ ವಿಷ್ಣುವಿನ ವಾಹನ ಗರುಡ, ಧ್ಯಾನಸ್ಥನಾದ ಶಿವ ಇರುವುದು ಧರ್ಮ ಸಹಷ್ಣುತೆಯನ್ನು ಸೂಚಿಸುತ್ತದೆ"[೫]. ಹನ್ನೊಂದನೆ ಶತಮಾನದಲ್ಲಿ ೧ನೇ ಸೋಮೇಶ್ವರನ ಕಾಲದಲ್ಲಿ ರಚಿತವಾದ ಶಾಸನ (೧೦೪೮)

ದಲ್ಲಿ ಜಿನ ಮತ್ತು ವಿಷ್ಣುಸ್ತುತಿಗಳು ಏಕಕಾಲದಲ್ಲಿಯೇ ಬರುತ್ತವೆ. ಜಿನ ಮತ್ತು ವಿಷ್ಣು ಹಾಗೂ ಈಶ್ವರರಿಗಾಗಿ ಒಂದು ದೇವಾಲಯವನ್ನು ಕಟ್ಟಿಸಿದುದನ್ನು ಹೇಳುತ್ತದೆ.

ಹೊಯ್ಸಳರ ಕಾಲದಲ್ಲಿಯೂ ಈ ಧಾರ್ಮಿಕ ಸಹನೆ, ಸಮನ್ವಯತೆ ಪರಿಣಾಮಕಾರಿಯಾದ ರೀತಿಯಲ್ಲಿ ಮುಂದುವರೆಯಿತು. ಎರಡನೆಯ ನರಸಿಂಹನ ದಂಡನಾಯಕ ಪೋಲಾಳ್ವನು ಹರಿಹರ ಮೂರ್ತಿಯನ್ನು ಪ್ರತಿಷ್ಠಾಪಿಸಿದನೆಂದು ದಾವಣಗೆರೆ ಶಾಸನವೊಂದರಿಂದ ತಿಳಿದುಬರುತ್ತದೆ. ಶ್ರೀ ವೈಷ್ಣವರಿಗೂ ಮತ್ತು ಜೈನರಿಗೂ ವಿರೋಧ ಬಂದಾಗ ವಿಜಯನಗರದ ಎರಡನೆಯ ಬುಕ್ಕರಾಯ ಆ ಎರಡೂ ಮತೀಯರಲ್ಲಿ ರಾಜಿ ಮಾಡಿಸಿದ ಸಂಗತಿಯನ್ನು ಶ್ರವಣಬೆಳಗೊಳದ ಒಂದು ಶಾಸನವು ತಿಳಿಸುತ್ತದೆ. ಅತ್ತಿಮಬ್ಬೆಯು ಪೊನ್ನವಿರಚಿತ 'ಶಾಂತಿಪುರಾಣ'ದ ೧೦೦೦ ಪ್ರತಿಗಳನ್ನು ಮಾಡಿಸಿ ಹಂಚಿದ್ದಲ್ಲದೆ, ೧೫೦೦ ಬಸದಿಗಳನ್ನು ಕಟ್ಟಿಸಿದಳು ಎಂಬ ಮಾಹಿತಿಯು ಲಕ್ಕುಂಡಿ ಶಾಸನದಿಂದ ತಿಳಿದುಬರುತ್ತದೆ. "ಮಹಾದೇವ ದಂಡಾಧಿಪತಿಯು ಈಗಿನ ಕುಕನೂರಿನ ಬಳಿ ಇರುವ ಇಟ್ಟಿಗೆಯಲ್ಲಿ ಮಹಾದೇವ ದೇವಾಲಯವನ್ನು ನಿರ್ಮಿಸಿದ್ದಾನೆ. ಅಲ್ಲದೇ ಮೂರ್ತಿನಾರಾಯಣ, ಚಂದಲೇಶ್ವರ, ಸಾಹಸಭೈರವ ಎಂಬ ದೇವಾಲಯಗಳನ್ನು ಸರಸ್ವತಿಗೆ ಒಂದು ಮಠವನ್ನು ಕಟ್ಟಿಸಿದ್ದಾನೆಂಬುದು ಇಟ್ಟಿಗೆಯ ಒಂದು ಶಾಸನ ಹೇಳುತ್ತದೆ"[೬].

ದೇವಾಲಯಗಳು ಜನಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತಿದ್ದು, ಜನರನ್ನು ಮುನ್ನಡೆಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು. ಅನೇಕ ದೇವಾಲಯಗಳು ಶಾಲೆಗಳನ್ನು, ಪ್ರೌಢ ವಿದ್ಯಾಸಂಸ್ಥೆಗಳನ್ನು ನಡೆಸುತ್ತಾ ಜನಜೀವನವನ್ನು ರೂಪಿಸುವ ಶಕ್ತಿ ಕೇಂದ್ರಗಳಾಗಿದ್ದವು. ದೇವಾಲಯಗಳಿಗೆ ದಾನವಾಗಿ ಬಂದ ಹಣದಿಂದ ಅನ್ನ ಛತ್ರಗಳನ್ನು ನಡೆಸುತ್ತಿದ್ದರು. ದೇವಾಲಯಗಳ ನಿರ್ಮಾಣ ಉದಾತ್ತವಾದ ಸಂಸ್ಕೃತಿಯ ಸಾಧನೆಗೆ ಹಿನ್ನೆಲೆಯಾಗಿತ್ತು. ಜೀವನದಲ್ಲಿ ಒಂದಾದರೂ ದೇವಾಲಯವನ್ನು ಕಟ್ಟಿಸಬೇಕು ಎಂಬುದು ಇಲ್ಲವೇ ಕಟ್ಟಿಸಿದ ದೇವಾಲಯಗಳಿಗೆ ದಾನವನ್ನು ಕೊಡಬೇಕೆಂಬುದು ಅಂದಿನ ಜನರ ಧಾರ್ಮಿಕ ಭಾವನೆಯಾಗಿತ್ತು. ದೇವಾಲಯಗಳು ಮತ್ತು ಅವುಗಳ ನಿರ್ಮಾಣ, ನಿರ್ವಹಣೆಗೆ ಕಾರಣರಾದ ಮಹಾವ್ಯಕ್ತಿಗಳು ಜನರ ಧಾರ್ಮಿಕ ಜೀವನವನ್ನು ರೂಪಿಸಲು ಕಾರಣಿಕರ್ತರಾದರು. ಇದರಿಂದ

ಎಲ್ಲ ಮತಗಳಿಗೂ ಸಮಾನವಾದ ಧಾರ್ಮಿಕ ಭಾವನೆಗಳು ಜನರ ಮನಸ್ಸಿನಲ್ಲಿ ಬೇರೂರಿದವು. ಇದನ್ನು ಶಾಸನ ಅಧ್ಯಯನ ನಮಗೆ ಸ್ಪಷ್ಟವಾಗಿ ತೋರಿಸಿಕೊಡುತ್ತದೆ.

**೨. ಶಾಸನಗಳ ಚಾರಿತ್ರಿಕ ಮಹತ್ವ:**

ಭಾರತದ ಪ್ರಾಚೀನ ಇತಿಹಾಸವನ್ನು ಪುನಾರಚಿಸುವಲ್ಲಿರುವ ಏಕೈಕ ಖಚಿತ ಆಧಾರಗಳೆಂದರೆ ಶಾಸನಗಳು! "ಪ್ರಾಚೀನ ಭಾರತದ ಕಾಲಾನುಕ್ರಮಣಿಕೆಯ ಒಂದೇ ಒಂದು ಅಂತಿಮ ಅವಲಂಬನ ಶಾಸನಗಳು" ಎಂದು ಬಿ.ಸಿ. ಛೋಪ್ರಾರವರು ಹೇಳಿದ್ದಾರೆ. ನೇಪಾಳದ 'ರುಮ್ಮಿಂದಯ್' ಎಂಬಲ್ಲಿ ದೊರಕಿರುವ ಅಶೋಕನ ಸ್ತಂಭಶಾಸನವೊಂದು ಬುದ್ಧನ ಜನ್ಮಸ್ಥಳವನ್ನು ನಿಖರವಾಗಿ ನಿರ್ಣಯಿಸಿದೆ. ಅಶೋಕನ ಮಸ್ಕಿ ಶಾಸನದಲ್ಲಿ 'ಅಶೋಕ' ಎಂಬ ಹೆಸರಿಗೂ 'ದೇವನಾಂಪ್ರಿಯ' ಎಂಬ ಬಿರುದಿಗೂ ಇದ್ದ ಭಿನ್ನತೆಯನ್ನು ನಿವಾರಿಸಿ ಎರಡೂ ಒಂದೇ ಎಂಬುದಾಗಿ ಖಚಿತಪಡಿಸುತ್ತದೆ. ಇಮ್ಮಡಿ ಪುಲಕೇಶಿಯ 'ಐಹೊಳೆ ಶಾಸನ'ದಲ್ಲಿ ಬಾದಾಮಿ ಚಾಲುಕ್ಯರ ವಂಶಾವಳಿ ಹಾಗೂ ಇಮ್ಮಡಿ ಪುಲಕೇಶಿಯ ಸಾಧನೆಗಳನ್ನು ವರ್ಣಿಸಲಾಗಿದೆ. ಕಾಕುತ್ಸವರ್ಮನ ತಾಳಗುಂದ ಶಾಸನವು ಅವನ ಗುಣಗಾನ ಮಾಡುವುದರ ಜೊತೆಗೆ ಮಯೂರಶರ್ಮ, ಮಯೂರವರ್ಮನಾದ ಬಗೆಗೂ ಪಲ್ಲವರನ್ನು ಸೋಲಿಸಿ ಕದಂಬ ರಾಜ್ಯ ಸ್ಥಾಪಿಸಿದುದರ ಬಗೆಗೂ ವಿವರಣೆಯನ್ನು ನೀಡುತ್ತದೆ. ಬಾದಾಮಿಯ ಶಾಸನವು 'ಕಲಿಯುಗ ವಿಪರೀತ'ನೆಂಬ ಹೆಗ್ಗಳಿಕೆಗೆ ಪಾತ್ರನಾದ ಕಪ್ಪೆ ಆರಭಟ್ಟನ ಶೌರ್ಯ ಪರಾಕ್ರಮಗಳನ್ನು ಉಲ್ಲೇಖಿಸುತ್ತದೆ. ವಿಷ್ಣುವರ್ಧನನ 'ಬೇಲೂರ ಶಾಸನ'ವು ಅವನ ದಿಗ್ವಿಜಯಗಳನ್ನು ವರ್ಣಿಸುತ್ತದೆ.

ಚರಿತ್ರೆಯ ದೃಷ್ಟಿಯಿಂದ ನೋಡಿದಾಗಲೂ ಇಲ್ಲಿ ಆಳ್ವಿಕೆ ನಡೆಸಿದ ರಾಜರ ಮಾಹಿತಿಯನ್ನು ನಿಖರವಾಗಿ ನೀಡುವಲ್ಲಿ ಶಾಸನಗಳು ಮಹತ್ವದ ಪಾತ್ರ ವಹಿಸುತ್ತವೆ.

**೩. ಶಾಸನಗಳ ಸಾಮಾಜಿಕ ಮಹತ್ವ:**

ಸಮಾಜದಲ್ಲಿ ಜೀವಿಸುವ ಜನರ ನಡುವಳಿಕೆಗಳು, ಅವರ ಆಚರಣೆ, ಸಂಸ್ಕೃತಿಗೆ ಸಂಬಂಧಿಸಿದ ವಿಷಯಗಳನ್ನು ಕೂಡ ಶಾಸನಗಳಿಂದ ಅರಿಯಬಹುದು. ವಿಜಯನಗರದ ಪ್ರೌಢ ಪ್ರತಾಪದೇವರಾಯನ ಕಾಲದಲ್ಲಿ ರಚಿತವಾದ 'ಹಂಪೆಯ ಶಾಸನ'ದಲ್ಲಿ ಬರುವ ಒಂದು ಪದ್ಯ

ಸಾಮಾಜಿಕ ಜೀವನಕ್ಕೆ ಹಿನ್ನೆಲೆಯಾಗಿರಬೇಕಾದ ಉದಾತ್ತ ಸಂಸ್ಕೃತಿಯನ್ನು ಅರ್ಥವತ್ತಾಗಿ ಸೂಚಿಸುತ್ತದೆ. ಲಕ್ಷ್ಮೀಧರನು ಮಗುವಾಗಿದ್ದಾಗ ಅವನ ತಾಯಿ ಹಾಲೆರೆಯುತ್ತಾ ಅದರೊಂದಿಗೆ ಉದಾತ್ತ ವಿಚಾರದ ಸಂಸ್ಕೃತಿಯನ್ನು ರಕ್ತಗತವಾಗುವಂತೆ ಎರೆದಳು ಎಂಬುದನ್ನು ಶಾಸನದ ಕವಿ ಹೀಗೆ ಹೇಳಿದ್ದಾನೆ.

ಕೆಱೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರಮಂ ಮಾಡಿಸ
ಜ್ಞೆಱೆಯೊಳ್ಳಲ್ಕಿದನಾಥರಂ ಬಿಡಿಸು ಮಿತ್ರರ್ಗಾಂಬುಕೆಯ್ ನಂಬಿದ
ರ್ಗೆಱೆವೆಟ್ಟಾಗಿರು ಶಿಷ್ಟರ ಪೊರೆಯೆನುತ್ತಿಂತೆಲ್ಲಮಂ ಪಿಂದೆ ತಾ
ಯೆಂಱೆದಳ್ವಾಲೆಱೆವಂದು ತೊಟ್ಟು ಕಿವಿಯಳ್ ಲಕ್ಷ್ಮೀಧರಾಮಾತ್ಯನಾ॥

ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ದೇವಾಲಯಗಳನ್ನು ನಿರ್ಮಿಸು, ಬಂಧನಕ್ಕೆ ಸಿಕ್ಕ ಅನಾಥರನ್ನು ಬಿಡಿಸು, ಸ್ನೇಹಿತರಿಗೆ ಸಹಾಯ ಮಾಡು, ನಂಬಿದವರಿಗೆ ಆಶ್ರಯ ನೀಡು, ಸತ್ಪುರುಷರನ್ನು ರಕ್ಷಿಸು–ಎಂದು ಮುಂತಾಗಿ ಲಕ್ಷ್ಮೀಧರನ ಕಿವಿಯಲ್ಲಿ ಹೇಳುತ್ತಾ ಹಾಲನ್ನು ಹಾಕಿದಳಂತೆ ಅವನ ತಾಯಿ! ಎಂದಿದೆ.

"ಹಸಿದವರಿಗೆ ಅನ್ನದಾನ, ದುಃಖಪೀಡಿತರಿಗೆ ಅಭಯದಾನ ಲಭಿಸುವಂತಿರುವ ಸಮಾಜವೇ ಸುಸಂಸ್ಕೃತ ಸಮಾಜ ಮತ್ತು ಸುಭಿಕ್ಷ ಸಮಾಜ ಎನಿಸಿಕೊಳ್ಳುತ್ತದೆಂಬುದು ಶಾಸನಗಳ ದೃಷ್ಟಿ"[೭] ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಧರ್ಮಶಾಸ್ತ್ರಗಳಲ್ಲಿ ಮತ್ತು ಶಾಸನಗಳಲ್ಲಿ ತುಲಾಪುರುಷ ದಾನ, ಹಿರಣ್ಯ ಗರ್ಭದಾನ, ಗೋಸಹಸ್ರದಾನ ಎಂದು ಮೊದಲಾದ ಹದಿನಾರು ಬಗೆಯ ದಾನಗಳ ಕುರಿತು ಹೇಳಲಾಗಿದ್ದರೂ ಅನ್ನದಾನ–ವಿದ್ಯಾನಗಳು ಉಳಿದೆಲ್ಲ ದಾನಗಳಿಗಿಂತಲೂ ಶ್ರೇಷ್ಠವಾದವೆಂಬ ಭಾವನೆ ಮೊದಲಿನಿಂದಲೂ ನಮ್ಮಲ್ಲಿ ಬೆಳೆದು ಬಂದಿದೆ.

ಅನ್ನದಾನಕ್ಕಾಗಿ ಭೂಮಿಯನ್ನು ದಾನ ಕೊಟ್ಟ ಜಕ್ಕಿಯಬ್ಬೆಯ ಆದರ್ಶವನ್ನು ವರ್ಣಿಸುವ ಸೊರಟೂರಿನ ಶಾಸನವೊಂದರಲ್ಲಿ 'ದಾನದೊಳನ್ನದಾನಮೆಸಾರಂ' ಎಂದು ಅನ್ನದಾನದ ಮಹತ್ವವನ್ನು ಸಾರುತ್ತದೆ. ಇದು ಕರ್ನಾಟಕದ ದಾನಿಗಳ ಮುಂದೆ ಉಜ್ವಲವಾಗಿ ನಿಂತಿರುವುದಕ್ಕೆ ಶಾಸನಗಳೇ ಸಾಕ್ಷಿಯಾಗಿವೆ. ಮುಳುಗುಂದದ ಶಾಸನವೊಂದು ಅನ್ನದಾನಕ್ಕಾಗಿಯೇ

ಭೂಮಿಯನ್ನು ದಾನವಾಗಿ ನೀಡಿರುವುದನ್ನು ಸಾರುತ್ತದೆ. ಧ್ರುವೇಶ್ವರ ಪಂಡಿತ' ಎಂಬುವವರಿಗೆ ಶೆಟ್ಟರೂ ಊರಗಾವುಂಡರೂ ಕೊಟ್ಟ ಜಮೀನಿನ ದಾನವನ್ನು ಇದರಲ್ಲಿ ಉಲ್ಲೇಖಿಸಲಾಗಿದೆ. ನಗರೇಶ್ವರ ದೇವಾಲಯದ ಮಠಕ್ಕೆ ಸಂಬಂಧಿಸಿದಂತೆ ನಡೆಯುತ್ತಿದ್ದ ಸತ್ರದಲ್ಲಿ ಸನ್ಯಾಸಿಗಳಿಗೆ ಅನ್ನದಾನಕ್ಕಾಗಿ ಆ ದಾನವನ್ನು ಕೊಡಲಾಗಿದೆ ಎಂಬುದು ತಿಳಿದುಬರುತ್ತದೆ.

ವಿದ್ಯಾಭ್ಯಾಸಕ್ಕಾಗಿಯೂ ದಾನ ಕೊಟ್ಟ ಉದಾಹರಣೆಗಳೂ ಶಾಸನಗಳಲ್ಲಿ ದೊರೆಯುತ್ತವೆ. ಧಾರವಾಡ ಜಿಲ್ಲೆಯ ಹೆಬ್ಬಾಳಿನಲ್ಲಿ ಭುಜ್ಜಭೇಶ್ವರ ದೇವಾಲಯಕ್ಕೆ ಸಂಬಂಧಿಸಿದಂತೆ ಒಂದು ಮಠವಿತ್ತು. ಕ್ರಿ.ಶ. ೯೭೫ರ ಒಂದು ಶಾಸನದಲ್ಲಿ ೫೦ ಮತ್ತರ ಭೂಮಿಯನ್ನು ಅನುದಾನವಾಗಿ ಪಡೆದುದರ ಉಲ್ಲೇಖವಿದೆ. ಅಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಊಟ, ವಸತಿಗಳ ಸೌಕರ್ಯವಿತ್ತು ಎಂಬುದು ಈ ಶಾಸನದಿಂದ ತಿಳಿದುಬರುತ್ತದೆ. ಕೆಲವೊಂದು ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಮಾಡಿ ಅವುಗಳನ್ನು ಬ್ರಾಹ್ಮಣರಿಗೆ ದಾನವಾಗಿ ನೀಡುತ್ತಿದ್ದರು. ಅಂತಹ ಅಗ್ರಹಾರಗಳಲ್ಲಿ ವಿದ್ಯಾಭ್ಯಾಸಕ್ಕೆ ಎಲ್ಲ ಸೌಲಭ್ಯಗಳಿರುತ್ತಿದ್ದವು. ಕೆಲವು ಅಗ್ರಹಾರಗಳಂತೂ ಹೆಸರಾಂತ ವಿದ್ಯಾಕೇಂದ್ರಗಳಾಗಿದ್ದವು. ಮೂರನೆಯ ಕೃಷ್ಣನ ಕಾಲದಲ್ಲಿ ಸಾಲೋಟಗಿಯಲ್ಲಿ ವಿದ್ಯಾಸಂಸ್ಥೆಯೊಂದಿತ್ತು ಎಂಬುದು ಶಾಸನವು ತಿಳಿಸುತ್ತದೆ.

ವ್ಯಾಪಾರಕ್ಕೆ ಸಂಬಂಧಿಸಿದಂತೆ ಕೆಲವು ಶಾಸನಗಳೂ ದೊರೆಯುತ್ತವೆ. 'ಅಯ್ಯವಳೆಯವನ್ನೂರ್ರು' ಎಂಬ ಮಾತು ಶಾಸನಗಳಲ್ಲಿ ಬರುತ್ತದೆ. ಅಯ್ಯವಳಿ ಎಂದರೆ ಇಂದಿನ ಐಹೊಳೆ. ಅದು ಪ್ರಾಚೀನ ಕರ್ನಾಟಕದಲ್ಲಿ ದೊಡ್ಡ ವ್ಯಾಪಾರಿ ಕೇಂದ್ರವಾಗಿತ್ತು. ಸಿರಸಂಗಿ ಬಳ್ಳಿಗಂಟೆಯೂ ಸಹ ವರ್ತಕರ ಪ್ರಮುಖ ಕೇಂದ್ರವಾಗಿತ್ತು ಎಂಬುದನ್ನು ಶಾಸನಗಳಿಂದ ಅರಿಯಬಹುದು. ವ್ಯಾಪಾರದ ವ್ಯಾಪ್ತಿ, ತೆರಿಗೆ ಪ್ರಮಾಣ, ಅಳತೆ, ತೂಕ ಮೊದಲಾದ ವಿವರಣಗಳು ಶಾಸನಗಳಲ್ಲಿ ಕಂಡುಬರುತ್ತವೆ. ಇದರೊಂದಿಗೆ ವರ್ತಕರ ಧರ್ಮ, ಬುದ್ಧಿ, ಉದಾರಗುಣ ಮತ್ತು ದಾನದತ್ತಿಗಳನ್ನು ತಿಳಿಸುತ್ತ ವ್ಯಾಪಾರ ಸಂಸ್ಥೆಗಳು ಸಹ ಸಾಂಸ್ಕೃತಿಕ ಜೀವನಕ್ಕೆ ಪೋಷಕವಾಗಿದ್ದವು ಎಂಬುದನ್ನು ತಿಳಿಸುತ್ತದೆ.

ಕನ್ನಡ ನಾಡಿನ ಜನ ಸ್ವಭಾವತಃ ಶಾಂತಿಜೀವಿಗಳಾಗಿದ್ದರೆ ಹೊರತು ಹೇಡಿಗಳಾಗಿರಲಿಲ್ಲ. ಅಧರ್ಮ, ಅನ್ಯಾಯ, ದುಷ್ಟತನಗಳನ್ನು ಪ್ರತಿಭಟಿಸಿ ಹೋರಾಡುವ ಶೂರರಾಗಿದ್ದರು. ಅವರ

ವೀರಜೀವನಕ್ಕೆ ಸಾಕ್ಷಿಯಾಗಿ ಅನೇಕ ವೀರಗಲ್ಲುಗಳನ್ನು ಉಲ್ಲೇಖಿಸಬಹುದು. ಸುಖವೋ, ದುಃಖವೋ, ದಾನವೋ, ಧರ್ಮವೋ ನಾಲ್ಕಾರು ಜನ ಕೂಡಿ ಅದನ್ನು ಅನುಭವಿಸುತ್ತಿದ್ದರು. ಹಾಗೆಯೇ ನಿರ್ವಹಿಸುತ್ತಿದ್ದರು. ಕೆರೆಗಳನ್ನು, ಬಾವಿಗಳನ್ನು ಕಟ್ಟಿಸುವುದರಲ್ಲಿ ಮತ್ತು ಅದನ್ನು ಬಳಸುವುದರಲ್ಲಿ ಸಹಕಾರ ತತ್ವವೇ ಪ್ರಧಾನವಾಗಿತ್ತು. ಧಾರವಾಡ ಜಿಲ್ಲೆಯ ನರಗುಂದದಲ್ಲಿ ಸಾರ್ವಜನಿಕರಿಂದಲೇ ಒಂದು ಕೆರೆ ನಿರ್ಮಿತವಾದದ್ದನ್ನು ಅಲ್ಲಿನ ಶಾಸನ ತಿಳಿಸುತ್ತದೆ.

ಕರ್ನಾಟಕದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಿಯೂ ಸಹ, ಮಹಿಳೆಯರ ಸ್ಥಾನ ಉನ್ನತವಾಗಿತ್ತೆಂದು ಶಾಸನಗಳು ತಿಳಿಸುತ್ತವೆ. ಅವರು ರಾಜ್ಯದ ಅಧಿಕಾರಿಗಳಾಗಿ, ವಿದ್ಯಾವತಿಯರಾಗಿ, ದಾನಚಿಂತಾಮಣಿಗಳಾಗಿ, ಕಲಾವಿದೆಯರಾಗಿ ಕಂಗೊಳಿಸುತ್ತಿದ್ದಾರೆ. ಕ್ಷತ್ರಿಯ ಕನ್ಯೆಯರಂತೆಯೇ ಕೆಲವು ಕಡೆಗಳಲ್ಲಿ ಸಾಮಾನ್ಯ ಮಹಿಳೆಯರಿಗೂ ವೀರ ಶಿಕ್ಷಣ ದೊರೆಯುತ್ತಿದ್ದಂತೆ ಕಂಡುಬರುತ್ತದೆ. ಧಾರ್ಮಿಕ ಕ್ಷೇತ್ರದಲ್ಲಿಯೂ ಮಹಿಳೆಯರು ವಹಿಸಿದ ಪಾತ್ರ ಕಿರಿಯದೇನಲ್ಲ. ದೇವಸ್ಥಾನಗಳನ್ನು ನಿರ್ಮಿಸುವುದರಲ್ಲಿ ಅವುಗಳಿಗೆ ದಾನವನ್ನು ನೀಡುವುದರಲ್ಲಿ ಗಣನೀಯವಾದ ಸ್ಥಾನವನ್ನು ವಹಿಸಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ಶಾಸನಗಳನ್ನು ಹೆಚ್ಚು ವಿವರವಾಗಿ ಮತ್ತು ಅನೇಕ ದೃಷ್ಟಿಗಳಿಂದ ಅಭ್ಯಾಸ ಮಾಡಿದಂತೆಲ್ಲಾ ಸಾಮಾಜಿಕ ಜೀವನದ ವಿವಿಧ ಮುಖಗಳು ಇನ್ನೂ ಸ್ಪಷ್ಟವಾದ ರೂಪವನ್ನು ಪಡೆಯಲು ಸಹಾಯಕವಾಗುತ್ತದೆ. ಹಳ್ಳಿಗಳ ಆಡಳಿತ ನಿರ್ವಹಣೆಯ ಕ್ರಮ, ನಾಡು, ವಿಷಯ ಮುಂತಾದ ರಾಜಕೀಯ ವಿಭಾಗಗಳು ಮತ್ತು ಅವುಗಳ ಆಡಳಿತ, ಊರಗಾವುಂಡ, ನಾಡಪೇರ್ಗಡೆ, ಪಟ್ಟಣಸ್ವಾಮಿ... ಮೊದಲಾದ ಅಧಿಕಾರಿಗಳು ಮಹಾಜನಗಳ ಮೂಲಕ ಅಗ್ರಹಾರಗಳ ಆಡಳಿತ... ಇತ್ಯಾದಿ ವಿಷಯಗಳ ಪ್ರಸ್ತಾಪ ಶಾಸನಗಳಲ್ಲಿ ವಿಪುಲವಾಗಿ ಬರುತ್ತದೆ. ವ್ಯಾಪಾರಪದ್ಧತಿ, ಸುಂಕದ ಕ್ರಮ, ತೆರಿಗೆ ವಸೂಲಿಯ ರೀತಿ, ಕಂದಾಯ ಕ್ರಮ, ರಾಜನು ಕೊಡುತ್ತಿದ್ದ ದಾನದತ್ತಿಗಳು, ಉಂಬಳಿಗಳು, ಇನಾಮು, ಗ್ರಾಮಗಳು ಇವುಗಳ ಆರ್ಥಿಕ ವ್ಯವಸ್ಥೆ... ಮೊದಲಾದ ಅಂಶಗಳು ಪ್ರಾಸಂಗಿಕವಾಗಿ ಚಿತ್ರಿಸುತ್ತವೆ. ಇವಲ್ಲದೆ ಆಹಾರ ವಿಹಾರಗಳು, ಆಟ–ಪಾಟಗಳು, ಹಬ್ಬ–ಹರಿದಿನಗಳು, ಜಾತ್ರೆ–ಕೂಟಗಳು, ಶುಭಕಾರ್ಯ–ಶಿವಕಥೆಗಳು... ಮೊದಲಾದ ಅಂಶಗಳು ಕೂಡಾ ಶಾಸನಗಳಿಂದ ಪರಿಚಿತವಾಗುತ್ತವೆ.

## ೪. ಶಾಸನಗಳ ಸಾಹಿತ್ಯಿಕ ಮಹತ್ವ:

ಶಾಸನಗಳನ್ನು ವಿದ್ಯಾವಂತರು ಹಾಗೂ ಕವಿಗಳು ಬರೆದಿರುವುದರಿಂದ ಹೇರಳ ಸಾಹಿತ್ಯಿಕ ಅಂಶಗಳು ಶಾಸನಗಳಲ್ಲಿ ಕಂಡುಬರುತ್ತವೆ. ಕ್ರಿ.ಶ. ೫ನೇ ಶಮತಾನದ ತಾಳಗುಂದ ಶಾಸನ ಮತ್ತು ಐಹೊಳೆಯ ರವಿಕೀರ್ತಿಯ ಶಾಸನಗಳು ತುಂಬಾ ಪ್ರೌಢವಾಗಿದ್ದು, ಸಂಸ್ಕೃತದ ಅನೇಕ ವೃತ್ತಗಳನ್ನು ಒಳಗೊಂಡಿವೆ. ಶಾಸನ ಕವಿಗಳು ಚಂಪೂಕಾವ್ಯವನ್ನು ಆದರ್ಶವಾಗಿಟ್ಟುಕೊಂಡಿದ್ದರು! ಇದಕ್ಕೆ ಸಾಕ್ಷಿಯೆಂಬಂತೆ ಕವಿ ರನ್ನ, ಜನ್ನ, ಶಾಂತಿನಾಥ, ನಾಗಚಂದ್ರ... ಮೊದಲಾದ ಕವಿಗಳು ಶಾಸನಗಳನ್ನು ರಚಿಸಿರುವದು ತಿಳಿಯುತ್ತದೆ. ಹೀಗಾಗಿ ಶಾಸನಗಳು ಶುದ್ಧ ಸಾಹಿತ್ಯ ಕೃತಿಗಳಂತೆಯೇ ಸಾಹಿತ್ಯಕಾಂಶದಿಂದ ಕೂಡಿವೆ.

ಕರ್ನಾಟಕದ ಎಷ್ಟೋ ಶಾಸನಗಳು ಪದ್ಯಮಯವಾಗಿವೆ. ಕರ್ನಾಟಕದ ರವಿಕೀರ್ತಿಯಂತಹ ಪ್ರಸಿದ್ಧ ಸಂಸ್ಕೃತ ಕವಿಯ ಕಾವ್ಯ ಈಗ ಕೇವಲ ಶಾಸನದಲ್ಲಿ ಮಾತ್ರ ಉಳಿದುಕೊಂಡಿದೆ. ನರ್ಮದೆಯ ದಡದ ಮೇಲಿರುವ 'ಮಾಂಧಾತಾ' ಎಂಬಲ್ಲಿ ಅಮರೇಶ್ವರ ದೇವಾಲಯದ ಮುಂದೆ ಇರುವ ಕಲ್ಲುಗಳ ಮೇಲೆ ಪುಷ್ಪದಂತನ ಮಹಿಮೆಯ ಸ್ತೋತ್ರವನ್ನು ಕೆತ್ತಲಾಗಿದೆ. ದೇವಗಡದ ಒಂದು ಶಿಲಾಫಲಕದ ಮೇಲೆ ೧೮ ಭಾಷೆಗಳನ್ನು ಅವುಗಳ ಲಿಪಿಗಳ ಮಾದರಿಗಳನ್ನು ಕೆತ್ತಲಾಗಿದೆ. ಮದರಾಸಿನ ಪುದುಕೋಟೆಗೆ ಸಮೀಪದಲ್ಲಿರುವ ಕುಡುಮಿಯಾಮಲ್ಲೆಯ ಎಂಬ ಬೆಟ್ಟದ ಮೇಲಿನ 'ಕುಡುಮಿಯಾಮಲೆಯ ಶಾಸನ'ವು "ಪ್ರಪಂಚದಲ್ಲಿ ಸ್ವರ ಪ್ರಸ್ತಾಪವಿರುವ ಸಂಗೀತದ ಏಕೈಕ ಪ್ರಸ್ತರ ಶಾಸನ"ವಾಗಿದೆ. ೭ನೇ ಶತಮಾನದ ಸಂಗೀತ ಪದ್ಧತಿಯ ಮೇಲೆ ಇದು ಬೆಳಕನ್ನು ಚೆಲ್ಲುತ್ತದೆ. ಈ ಶಾಸನವು ಸಂಸ್ಕೃತ ಭಾಷೆಯನ್ನು ಒಳಗೊಂಡಿದ್ದು, ಕೊನೆಯಲ್ಲಿ ಒಂದು ಸಾಲು ತಮಿಳಿನಲ್ಲಿದೆ.

ಕನ್ನಡ ಭಾಷೆಯಲ್ಲಿ ಸ್ವತಂತ್ರ ಕೃತಿಗಳನ್ನು ಕೆತ್ತಿರುವುದಕ್ಕೆ ಉದಾಹರಣೆಗಳು ತೀರ ಕಡಿಮೆ. ಶಾಸನಗಳಲ್ಲಿ ಸ್ವತಂತ್ರವಾಗಿ ರಚನೆಯಾಗಿರುವ ಏಕೈಕ ಕೃತಿಯೆಂದರೆ ಬೊಪ್ಪಣ ಪಂಡಿತನ 'ಗೊಮ್ಮಟಸ್ತುತಿ' ಶ್ರವಣಬೆಳಗೊಳದ ದೊಡ್ಡ ಬೆಟ್ಟದ ಮೇಲಿನ ಗೊಮ್ಮಟೇಶ್ವರ ಸ್ವಾಮಿಯ ದ್ವಾರಪಾಲಕರ ಬಾಗಿಲ ಎಡಗಡೆ ನಿಲ್ಲಿಸಿರುವ ಕಲ್ಲಿನ ಮೇಲೆ ಕೊರೆಯಲಾಗಿರುವ ಈ ಶಾಸನವು "ಶ್ರೀ ಗೊಮ್ಮಟ ಜನನಂ ನರನಾಗಮರದಿತಿಜ ಖಚರಪತಿ ಪೂಜಿತಂ

ಯೋಗಾಗ್ನಿ ಹತಸ್ಮರನಂ ಯೋಗಿಧ್ಯೇಯನನಮೇಯನಂ ಸ್ತುತಿಯಿಸುವೆಂ" ಎಂದು ಆರಂಭವಾಗುತ್ತದೆ. ಬಾಹುಬಲಿಯ ತ್ಯಾಗವನ್ನು, ಅವನ ತಪಸ್ಸನ್ನು, ಗೊಮ್ಮಟ ವಿಗ್ರಹದ ಸೌಂದರ್ಯವನ್ನು ಕವಿ ಕೊಂಡಾಡಿದ್ದಾನೆ.

ಶಾಸನಗಳಲ್ಲಿ ಚಂಪೂ ಸಾಹಿತ್ಯ ಪ್ರಕಾರವಷ್ಟೇ ಅಲ್ಲದೇ ಛಂದಸ್ಸು ಅಂದರೆ ಕಂದ, ವೃತ್ತ, ತ್ರಿಪದಿ, ರಗಳೆ, ಏಳೆ, ಅಕ್ಕರೆ.... ಇತ್ಯಾದಿಗಳೂ ಕಂಡುಬರುತ್ತವೆ. ಕ್ರಿ.ಶ. ೯೪೨ರ ಶ್ರವಣಬೆಳಗೊಳದ ಶಾಸನದಲ್ಲಿ ಅಕ್ಷರವನ್ನು ಕಾಣಬಹುದು. ಬಾದಾಮಿ, ಕೋಗಳಿ ಶಾಸನದಲ್ಲಿಯೂ ತ್ರಿಪದಿಯನ್ನು ಕಾಣಬಹುದು. ಶಾಸನಗಳಲ್ಲಿ ಸಾಹಿತ್ಯಾಂಶವಿದ್ದರೂ ಅದು ಶುದ್ಧ ಸಾಹಿತ್ಯದೊಡನೆ ಸ್ಪರ್ಧಿಸಲಾರದು. ಆದರೂ ಕೆಲವು ಶಾಸನಗಳನ್ನು ಓದಿದಾಗ ಒಳ್ಳೆಯ ಕಾವ್ಯವನ್ನು ಓದಿದ ಅನುಭವವಾಗುತ್ತದೆ.

**೫. ಶಾಸನಗಳ ಭಾಷಿಕ ಮಹತ್ವ:**

"ಕರ್ನಾಟಕದ ಶಾಸನಗಳಿಗೆ ಕನ್ನಡ ಭಾಷೆಯ ಪ್ರಾರಂಭದ ಕಾಲದಲ್ಲಿ ಪ್ರಾಕೃತವು ಮಹತ್ವದ ಪರಿಣಾಮ ಬೀರಿದೆ ಎಂಬ ಅಂಶವು ಕರ್ನಾಟಕದ ಆರಂಭದ ಶಾಸನಗಳಿಂದ ವೇದ್ಯವಾಗುತ್ತದೆ" ಎಂಬ ಡಾ. ನಾಯಕರ ಹುಲುಗಪ್ಪರವರ (೨೦೧೧, ಪು. ೨೫) ಅಭಿಮತವು ಸತ್ಯವಾಗಿದೆ. ಇಲ್ಲಿ ನಮಗೆ ದೊರೆಯುವ ಮೊದಲ ಶಾಸನಗಳೆಂದರೆ ಅಶೋಕನವು. ಭಾರತೀಯ ಶಾಸನ ಪ್ರಪಂಚಕ್ಕೆ ಅಶೋಕನ ಶಾಸನಗಳು ಉಗಮಸ್ಥಾನವಾಗಿರುವಂತೆ ಕರ್ನಾಟಕ ಶಾಸನವಾಹಿನಿಗೂ ಅವು ಮೂಲವಾಗಿವೆ. ಇವುಗಳ ಭಾಷೆ ಪ್ರಾಕೃತ ಕ್ರಿ.ಶ.ಪೂ. ೩ನೇ ಶತಮಾನದಿಂದ ಕ್ರಿ.ಶ. ೪ನೇ ಶತಮಾನದವರೆಗೆ ಸುಮಾರು ೭೦೦ ವರ್ಷಗಳ ಅವಧಿಯಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಪ್ರಾಕೃತ ಶಾಸನಗಳು ಸಿಕ್ಕಿವೆ. ಮಳವಳ್ಳಿ ಶಾಸನಗಳ ಭಾಷೆಯನ್ನು ಬಿ.ಎಲ್. ರೈಸ್‌ರವರು ಮಹಾರಾಷ್ಟ್ರ ಪ್ರಾಕೃತವೆಂದು ಕರೆದಿದ್ದಾರೆ. ಅಶೋಕನ ಪ್ರಾಕೃತ ಶಾಸನದಲ್ಲಿರುವ 'ಇಸಿಲ' ಎಂಬ ಪದ ಕನ್ನಡದ್ದೆಂದು ಡಿ.ಎಲ್. ನರಸಿಂಹಚಾರ್‌ರವರು ಹೇಳಿದ್ದಾರೆ. ಕಲಬುರಗಿ ಜಿಲ್ಲೆಯ ಸನ್ನತಿಯಲ್ಲಿ ಸುಮಾರು ೩೦ ರಷ್ಟು ಪ್ರಾಕೃತ ಬಿಡಿ ಬರಹಗಳು ದೊರಕಿದ್ದು, ಅವುಗಳ ಕಾಲ ಸುಮಾರು ಕ್ರಿ.ಶ. ೩ನೇ ಶತಮಾನ.

ಕ್ರಿ.ಶ. ೪ನೇ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಪ್ರಾಕೃತ ಶಾಸನಯುಗ ಮುಕ್ತಾಯಗೊಂಡು, ಸಂಸ್ಕೃತ ಕನ್ನಡದ ಶಾಸನಯುಗ ಪ್ರಾರಂಭವಾಗುತ್ತದೆ. ಗಂಗರು, ಕದಂಬರು ಹಾಕಿಕೊಟ್ಟ ತಾಮ್ರಪಟಗಳು ಈ ದಿಸೆಯಲ್ಲಿ ಮಹತ್ವಪೂರ್ಣವಾಗಿವೆ. ಈ ಶತಮಾನದ ಸಂಸ್ಕೃತ ಶಾಸನಗಳಲ್ಲಿ ಕಂಡುಬರುವ ಬಹಳಷ್ಟು ಸ್ಥಾನವಾಚಕ ಪದಗಳು ಕನ್ನಡ ಮೂಲದವಾಗಿವೆ. ಉದಾಹರಣೆಗೆ ಕಙುನೀರಲಿ, ಮೀದುಣ್ಣವಳ್ಳಿ, ಕಾಚಾಪ್ಪಳ್ಳಿ, ವಳಿವೇರ... ಮುಂತಾದವನ್ನು ಗುರುತಿಸಬಹುದು.

೬ನೇ ಶತಮಾನದ ಸಂಸ್ಕೃತ ಶಾಸನಗಳಲ್ಲಿ ಕನ್ನಡ ಅಂಶಗಳು ಇನ್ನೂ ಹೆಚ್ಚಾಗಿವೆ. ಕ್ರಮೇಣವಾಗಿ ಕನ್ನಡ ಶಾಸನಗಳ ಮಖ್ಯೆ ಹೆಚ್ಚುವುದಾದರೂ ಈ ಹೆಚ್ಚಳವು ಪ್ರಾಕೃತ ಶಾಸನಗಳನ್ನು ತಡೆದಂತೆ ಸಂಸ್ಕೃತ ಶಾಸನಗಳನ್ನು ತಡೆಹಿಡಿಯಲಿಲ್ಲ, ಹಲವಾರು ಸಂಸ್ಕೃತ ಶಾಸನಗಳ ಅಂತ್ಯದಲ್ಲಿ ಕನ್ನಡ ಬರಹವಿರುವುದು ೬ನೇ ಶತಮಾನದಿಂದ ಕಂಡುಬರುತ್ತವೆ. ಭೋಗಿವರ್ಮನ ತಗರೆಯ ಶಾಸನದ ಕೊನೆಯ ಐದು ಸಾಲುಗಳ ಬರಹ ಕನ್ನಡವಾಗಿದೆ. ಕನ್ನಡ ಶಾಸನಾರಂಭದಲ್ಲಿ ಸ್ವಸ್ತಿ, ವಚನ ಅಥವಾ ದೇವತಾಸ್ತುತಿ ಅನಂತರ ಬರುವ ಸಂಸ್ಕೃತ ದೀರ್ಘ ಸಮಾಸದ ಬಿರುದಾವಳಿ ಹಾಗೂ ಅಂತ್ಯದಲ್ಲಿ ಪುರಾಣಾದಿಗಳ ಎತ್ತಿದ ಸಂಸ್ಕೃತ ಫಲಶ್ರುತಿ ಇಷ್ಟು ಶತಮಾನಗಳವರೆಗೆ ಶಾಸನಿಕ ಕನ್ನಡ ವೈಶಿಷ್ಟ್ಯಗಳು ಎನಿಸಿಕೊಂಡಿವೆ.

೫ನೇ ಶತಮಾನದಿಂದ ಸಂಸ್ಕೃತ ಕನ್ನಡಗಳು ಕೈ ಕೈ ಹಿಡಿದು ಬರುವದಾದರೂ ೫–೬ನೇ ಶತಮಾನದಲ್ಲಿ ಸಂಸ್ಕೃತದ ಹೆಜ್ಜೆಯೇ ಮುಂದಿತ್ತು. ೭ನೇ ಶತಮಾನದಿಂದ ಕನ್ನಡವು ಉತ್ಸಾಹದಿಂದ ಮುಂದುವರಿಯುವುದು. ಹಲ್ಮಿಡಿ ಮತ್ತು ತಮ್ಮಟಕಲ್ಲು ಶಾಸನಗಳು ಕನ್ನಡದಲ್ಲಿಯೆ ೬ನೇ ಶತಮಾನದಲ್ಲಿನ ಮಂಗಳೇಶನ ಬಾದಾಮಿ ಶಾಸನ, ಸಿರಗುಂದ ಶಾಸನ, ಭೋಗಿವರ್ಮನ ತಗರೆಯ ಶಾಸನ ಇವು ಅಚ್ಚಗನ್ನಡದ ಬರಹಗಳಾಗಿದ್ದು, ಕನ್ನಡ ಭಾಷೆಯ ಅಂದಿನ ಸ್ವರೂಪದ ಮೇಲೆ ಬೆಳಕು ಚೆಲ್ಲುತ್ತವೆ. ೭ನೇ ಶತಮಾನದಲ್ಲಿ ಹಲವಾರು ಗದ್ಯ ಶಾಸನಗಳ ಜೊತೆಗೆ ಪದ್ಯ ಶಾಸನಗಳೂ ಲಭಿಸಿವೆ. 'ಮ'ಕಾರವನ್ನು ಅಂತ್ಯದಲ್ಲಿ ತಪ್ಪಾಗಿ ಪ್ರಯೋಗಿಸಿದ್ದು, ಸ್ವರಾಂತಗಳಾದ ಪದಗಳು ದೊರೆಯದಿರುವುದು, ಪದ್ಯದ ಭಾಷೆ ಆಡುನುಡಿಯಿಂದ ದೂರ ಸರಿದಿರುತ್ತದೆ ಎಂಬುದಕ್ಕೆ ಸಾಕ್ಷಿಯಾಗಿದೆ. ಆದಿಯಲ್ಲಿಯೆ ಮಧ್ಯ

ಸ್ವರಗಳು ಉಚ್ಚವಾಗುವುದು, ದೀರ್ಘಸ್ವರಕ್ಕೆ ಪರದ ಸಜಾತಿಯ ದ್ವಿತ್ವಗಳು ನಷ್ಟವಾಗುವುದು ಸಂಧಿಯಾದಾಗ ಎರಡು ಸ್ವರಗಳ ನಡುವೆ ಸಿದ್ಧಿಸುತ್ತಿದ್ದ ಅಮೋಘ ದ್ವಿತ್ವಗಳು ಸಿದ್ಧಿಸದೇ ಇರುವುದು ಮ್>ವ್ ಪರಿವರ್ತನೆಯಾಗುವುದು.... ಮುಂತಾದವನ್ನು ಇಲ್ಲಿ ಹೆಸರಿಸಬಹುದು.

೧೦ನೇ ಶತಮಾನದ ಶಾಸನಗಳಲ್ಲಿ ಅಖ್ಯಾತ ಪ್ರತ್ಯಯಗಳಲ್ಲಿ 'ಓ' ಸ್ವರ, ವಿಭಕ್ತಿ ಪ್ರತ್ಯಯಗಳಲ್ಲಿಯೂ ಅಖ್ಯಾತ ಪ್ರತ್ಯಗಳಲ್ಲಿಯೂ ಅಲ್ಲಲ್ಲಿ ದೀರ್ಘಸ್ವರ... ಮುಂತಾದವು ಪ್ರಯೋಗದಲ್ಲಿರುವುದು ಕಂಡುಬರುತ್ತದೆ. ಒಂದು ಶಾಸನದಲ್ಲಿ 'ಉಳ್' ಪ್ರತ್ಯಯ ಕೂಡ ಕಂಡುಬಂದಿದೆ. ಸಾಹಿತ್ಯಿಕ ಭಾಷೆಗಿಂತ ಶಾಸನ ಭಾಷೆ ಜನರಾಡುವ ನುಡಿಯನ್ನು ಹೆಚ್ಚು ಪ್ರಮಾಣಿಕವಾಗಿ ಪ್ರತಿನಿಧಿಸುತ್ತದೆ. 'ಇ', 'ಎ' ಸ್ವರಾಂತವಾದ ಧಾತುಗಳಲ್ಲಿ ಭೂತಕಾಲ ಸೂಚಕ ಪ್ರತ್ಯಯವಾಗಿ 'ತ್ತ' ಎಂಬುದು ಮೈಸೂರು ಮತ್ತು ಕೋಲಾರ ಜಿಲ್ಲೆಯ ಶಾಸನಗಳಲ್ಲಿ ತೋರಿಬಂದಿದೆ.

ಹೀಗೆ ಶಾಸನಗಳಿಂದ ಭಾಷೆಯ ಪ್ರಾರಂಭಿಕ ಹಂತದಿಂದ ಬೆಳವಣಿಗೆಯಲ್ಲಾದ ಬದಲಾವಣೆಗಳನ್ನು ಗುರುತಿಸಬಹುದು.

**೬. ಶಾಸನಗಳ ಸಾಂಸ್ಕೃತಿಕ ಮಹತ್ವ:**

ಒಂದು ನಾಡು ಎಂದರೆ ಕೇವಲ ಅದನ್ನಾಳಿದ ರಾಜರಷ್ಟೇ ಅಲ್ಲ, ಅಲ್ಲಿ ಬದುಕಿ ಬಾಳಿದ ಜನರಿಂದ ಕೂಡದ ಸಾಮಾಜಿಕ ವ್ಯವಸ್ಥೆ. ಒಂದು ರಾಷ್ಟ್ರದ ಸತ್ಯವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಆ ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆಗಳು, ಮೌಲ್ಯಗಳು-ಇತ್ಯಾದಿಗಳ ವಿವರಣೆ, ವಿಶ್ಲೇಷಣೆಯೆ ಆ ದೇಶದ ಇತಿಹಾಸವಾಗುತ್ತದೆ. ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನವೆಂದು ಕರೆಯುವರು.

ಶಾಸನದಲ್ಲಿ ದಾನವನ್ನು ಸ್ವೀಕರಿಸುವ ವ್ಯಕ್ತಿಯ ಮತ್ತು ದಾನದ ವಿವರಗಳನ್ನು ಹೇಳುವ ಭಾಗ ಸಾಂಸ್ಕೃತಿಕವಾಗಿ ಮುಖ್ಯವಾಗುತ್ತದೆ. ದಾನವನ್ನು ಸ್ವೀಕರಿಸವವನು ವ್ಯಕ್ತಿಯಾಗಿದ್ದರೆ ಅವನ ಪರಾಕ್ರಮದ ಅಥವಾ ಪಾಂಡಿತ್ಯದ ವಿವರವಿರುತ್ತದೆ. ಇದರಿಂದ ಅಂದಿನ ಕಾಲದ ವೀರರ ಆದರ್ಶ ಅಥವಾ ವಿದ್ವಾಂಸರ ಅಧ್ಯಯನದ ವಿಷಯಗಳು ತಿಳಿಯುತ್ತವೆ. ದೇವಾಲಯಗಳಿಗೆ

ದಾನ ಕೊಟ್ಟಿದ್ದರೆ ಆ ದೇವಾಲಯಗಳಲ್ಲಿ ನಡೆಯುವ ವಿಶೇಷ ಪೂಜೆಯ ವಿವರಿಸುತ್ತದೆ. ಅಗ್ರಹಾರಗಳಿಗೆ ಕೊಟ್ಟ ದಾನವಾಗಿದ್ದರೆ ಅಗ್ರಹಾರದ ಮಹಾಜನಗಳ ವರ್ಣನೆ, ಅವರ ಅಧ್ಯಯನ ವಿಚಾರಗಳು ಬರುತ್ತವೆ.

ದಾನವನ್ನು ಅರಸನಾದವನು ಮಾತ್ರವಲ್ಲ, ಸಮಾಜದ ಎಲ್ಲ ವರ್ಗದ, ಎಲ್ಲ ಜಾತಿಯ ಜನರೂ ನೀಡಿದ್ದಾರೆ. ಅಲ್ಲಿ ಅವರವರ ಜಾತಿಗಳ ವಿಶಿಷ್ಟವಾದ ಆಚರಣೆಗಳು ತಿಳಿದುಬರುತ್ತವೆ. ಅದರೊಂದಿಗೆ ಸಾಂಘಿಕ ಬದುಕಿನ ಅವರ ಚಿತ್ರಣವೂ ಗೋಚರಿಸುತ್ತದೆ. ಹಲವಾರು ಕಾಯಕಗಳಿಗೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳೂ, ನಾನಾ ರೀತಿಯ ಸುಂಕದ ಹೆಸರುಗಳು ನಮಗೆ ಶಾಸನಗಳಿಂದ ತಿಳಿದುಬರುತ್ತವೆ.

ಕೀಳ್ ಮುತ್ತೂಗೂರಿನ ಶಾಸನವು ಏಕಾಂಗಿ ವೀರನಾಗಿ ಹುಲಿಕೊಂದ ಏರಿಯಾ ಮೇಲಿನ ಜಾಗವನ್ನು ನಿರ್ದೇಶಿಸುತ್ತದೆ. ಕೋಟೂರಿನ ಒಂದು ಶಾಸನ ಶೈವ ಸನ್ಯಾಸಿಯೊಬ್ಬ ಅಗ್ನಿ ಪ್ರವೇಶ ಮಾಡಿದುದನ್ನು ತಿಳಿಸುತ್ತದೆ. ಬೆಳತೂರು ಶಾಸನ ದೇಕಬ್ಬೆ ಎಂಬ ಸಾಧ್ವಿ ತನ್ನ ಗಂಡ ಮಡಿದುದನ್ನು ಕೇಳಿ ಸಹಗಮನ ಮಾಡಿದುದನ್ನು ಹೇಳುತ್ತದೆ. ಪ್ರಾಚೀನ ಕಾಲದಲ್ಲಿ ಸ್ತ್ರೀಯಾದವಳು ಸಹಗಮನ ಮಾಡುವುದನ್ನು ಆದರ್ಶವೆಂದು ಭಾವಿಸಲಾಗುತ್ತಿತ್ತು. ಹಲವಾರು ಶಾಸನಗಳು ಸ್ತ್ರೀಯರು ಯಾರ ಬಲತ್ಕಾರವೂ ಇಲ್ಲದೇ ಸಹಗಮನ ಮಾಡಿದುದನ್ನು ಸೂಚಿಸುತ್ತದೆ. ಒಂದು ಶಾಸನ ಅಪುತ್ರಕನಾಗಿ ಮಡಿದವನೊಬ್ಬನ ಸಂಪತ್ತನ್ನು ಆ ಗ್ರಾಮದ ದೇವಾಲಯಕ್ಕೆ ಸೇರಿಸಿಕೊಂಡಂತೆ ಹೇಳುತ್ತದೆ. ಒಟ್ಟಿನಲ್ಲಿ ಶಾಸನಗಳ ಅಧ್ಯಯನದಿಂದ ಅಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿತ್ರಣವನ್ನು ಪುನಃ ರಚಿಸಬಹುದು. ಶಾಸನಗಳು ಪೂರ್ವಕಾಲದ ಕರುನಾಡಿನ ಜನತೆಯ ಸಾಮಾಜಿಕ ಜೀವನದ ವಿವಿಧ ಮುಖಗಳನ್ನು, ಮಜಲುಗಳನ್ನು ಪರಿಚಯಿಸುತ್ತದೆ. ಅದರೊಂದಿಗೆ ಅಲ್ಲಿಯ ರಾಜಕೀಯ ಮತ್ತು ಆರ್ಥಿಕ ಸ್ಥಿತಿಗತಿಯ ಮೇಲೆ ಬೆಳಕು ಚೆಲ್ಲುತ್ತದೆ. ಶಾಸನಗಳನ್ನು ಬೇರೆ ಬೇರೆ ನೆಲೆಗಳಲ್ಲಿ ಅಧ್ಯಯನಕ್ಕೆ ಒಳಪಡಿಸಿದಂತೆ ಅವುಗಳ ಮೂಲಕ ವಿಶಿಷ್ಟವಾದ ಮಾಹಿತಿಗಳನ್ನು ಬಿಚ್ಚಿಡುವುದರ ಮೂಲಕ ಅವುಗಳ ಮಹತ್ವವನ್ನು ಹೆಚ್ಚಿಸಿಕೊಂಡಿದೆ.

**ಅಡಿಟಿಪ್ಪಣಿಗಳು:**

೧. ಕನ್ನಡ ಶಾಸನಗಳ ಅಧ್ಯಯನ, ಪು. ೮೦.

೨. ಶಾಸನಾನುಸಂಧಾನ, ಪು. ೨೬, ೨೭, ೨೮.

೩. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೮, ೨೯.

೪. ಶಾಸನಾನುಸಂಧಾನ, ಪು. ೩೧, ೩೨.

೫. ಶಾಸನಗಳ ಪ್ರಕಾರ ಮತ್ತು ಮಹತ್ವ, ಪು. ೧೯.

೬. ಕನ್ನಡ ಶಾಸನಗಳ ಅಧ್ಯಯನ, ಪು. ೯೬.

೭. ಶಾಸನಗಳ ಪ್ರಕಾರ ಮತ್ತು ಮಹತ್ವ, ಪು. ೨೧.

# ಅಧ್ಯಾಯ–೩
# ಧಾರ್ಮಿಕ ಮೌಲ್ಯಗಳು

'ಧರ್ಮ' ಎಂಬ ಶಬ್ದಕ್ಕೆ ವ್ಯಾಪಕವಾದ ಗಹನವಾದ ಮೌಲ್ಯದಿಂದ ಕೂಡಿದ ಅರ್ಥವಿದೆ. ಸಂಸ್ಕೃತದಲ್ಲಿ ಧರ್ಮ ಎಂದರೆ ಧರಿಸು, ಪೋಷಿಸು, ಸ್ವಭಾವ, ಆಚಾರ, ದಾನ, ಕರ್ತವ್ಯವೆಂಬ ಅರ್ಥ ಇವೆ. ವ್ಯಕ್ತಿಯನ್ನು ಮತ್ತು ಸಮಾಜವನ್ನು ಒಳ್ಳೆಯ ಸ್ಥಿತಿಯಲ್ಲಿ ಎತ್ತಿಹಿಡಿಯುವ ನೈತಿಕ ಪಥಕ್ಕೆ ಕೊಂಡೊಯ್ಯುವ ಶಕ್ತಿಗೆ ಧರ್ಮ ಎನ್ನುವರು. "ಮಾನವೀಯ ಮೌಲ್ಯಗಳನ್ನು ಜಾಗೃತಗೊಳಿಸಿ ನಮ್ಮನ್ನು ಮಾನವತೆಯ ಘನತೆಗೆ ಯಾವುದು ಒಯ್ಯುತ್ತದೆಯೋ, ಆತ್ಮವನ್ನು ದೀಪ್ತಗೊಳಿಸಿ ಮಾನವೀಯ ವಿಕಾಸಕ್ಕೆ ಯಾವುದು ಕಾರಣವಾಗುತ್ತದೆಯೋ, ಸರ್ವ ಸಮಾನತೆ, ಸರ್ವ ಶ್ರೇಷ್ಠತೆಯನ್ನು ಪ್ರತಿಪಾದಿಸಿ ಸರ್ವರ ಒಳಿತನ್ನು ಸಾಧಿಸುವುದಕ್ಕೆ ಯಾವುದು ಸೋಪಾನವಾಗುತ್ತದೆಯೋ, ಮಾನವ ಮಾನವರನ್ನು ಒಂದುಗೂಡಿಸಿ ಯಾವುದು ಲೋಕ ಕಲ್ಯಾಣವನ್ನು ಬಯಸುತ್ತದೆಯೋ, ಅದನ್ನೇ ಧರ್ಮ ಎಂದು ಸಾರ್ವತ್ರಿಕವಾಗಿ ಸ್ವೀಕರಿಸಬಹುದು"[೧] ಎಂದು ಹೇಳಿರುವ ಹೇಳಿಕೆಯನ್ನು ಒಪ್ಪಿಕೊಳ್ಳಬಹುದು. ದೇವರ ಮೇಲಿನ ನಂಬಿಕೆಯಿಂದ ನಾನಾ ಮತಧರ್ಮಗಳ ಅನುಯಾಯಿಗಳು ಬೇರೆ ಬೇರೆ ಮತಧರ್ಮಗಳನ್ನು ಸ್ಥಾಪಿಸಿದರು. ಯಹೂದಿ, ಕ್ರೈಸ್ತ, ಇಸ್ಲಾಂ, ವೈದಿಕ ಮತಗಳು ದೇವರನ್ನು ನಂಬುತ್ತವೆ. ಜೈನ, ಬೌದ್ಧಮತಗಳು ದೇವರು ಇಲ್ಲವೆಂದು ಹೇಳುತ್ತವೆ. ಇಂಥಹ ಹಲವಾರು ವಿಚಾರಗಳನ್ನು ಒಳಗೊಂಡಿರುವ ಶಾಸನಗಳಿವೆ. ಒಂದು ರೀತಿಯಲ್ಲಿ ಧರ್ಮಗಳೇ ಶಾಸನಗಳ ರಚನೆಗೂ ಕಾರಣವಾಗಿವೆ!.

ಅಶೋಕನ ಶಾಸನಗಳು ಈ ವರ್ಗದಲ್ಲಿ ಅಗ್ರಸ್ಥಾನ ಪಡೆಯುತ್ತವೆ. ಭರತಖಂಡದಾದ್ಯಂತ ವಿವಿಧ ಮುಖ್ಯ ಸ್ಥಳಗಳಲ್ಲಿ ಹರಡಿಕೊಂಡಿರುವ ಅಶೋಕನ ಸುಪ್ರಸಿದ್ಧ ಪ್ರಸ್ತರ ಮತ್ತು ಸ್ತಂಭ ಶಾಸಗಳು ಧರ್ಮನೀತಿಗಳ ಪ್ರಸಾರಕ್ಕಾಗಿಯೇ ರಚನೆಗೊಂಡಿವೆ. ತಮ್ಮನ್ನು ಅವು 'ಧರ್ಮಲಿಪಿ'ಗಂಳೆಂದೇ ಕರೆದುಕೊಂಡಿವೆ. ಚಿತ್ರದುರ್ಗ ಜಿಲ್ಲೆಯ ಸಿದ್ದಾಪುರ, ಜಟಿಂಗರಾಮೇಶ್ವರ, ಬ್ರಹ್ಮಗಿರಿ, ಉತ್ತರ ಕರ್ನಾಟಕದ ಮಸ್ಕಿ ಮತ್ತು ಕೊಪ್ಪಳಗಳಲ್ಲಿ ಸಿಕ್ಕಿರುವ ಅಶೋಕನ ಕ್ರಿ.ಪೂ. ಮೂರನೆ ಶತಮಾನದ ಶಾಸನಗಳು ಕರ್ನಾಟಕದಲ್ಲಿ ಬೌದ್ಧಧರ್ಮದ ಪ್ರಾಚೀನತೆಯ ಕುರುಹುಗಳಾಗಿವೆ. ಕ್ರಿಸ್ತಶತಕದ ಆರಂಭದ ಶತಮಾನಗಳಿಗೆ ಸೇರುವ ಗುಲಬರ್ಗಾ ಜಿಲ್ಲೆಯ ಸನ್ನತಿಯ ಸುಮಾರು

ಮೂವತ್ತಕ್ಕೂ ಮೀರಿದ ಚಿಕ್ಕಮುಟ್ಟ ಪ್ರಾಕೃತ ಶಾಸನಗಳು ಬೌದ್ಧಧರ್ಮಕ್ಕೆ ಸಂಬಂಧಿಸಿವೆ. ಸನ್ನತಿ ಒಂದು ಬೌದ್ಧ ಕೇಂದ್ರವೆಂಬ ಸಂಗತಿಯನ್ನು ಎಲ್ಲರ ಗಮನಕ್ಕೆ ಮೊದಲು ತಂದವರು ಎಸ್. ನಾಗರಾಜು. ೧೯೬೨ರ ಸುಮಾರಿನಲ್ಲಿ "ಕ್ರಿ.ಶ. ೪ನೇ ಶತಮಾನದ ತಾಮ್ರಪಟವೊಂದ 'ಓಂ ನಮಃ ಶಿವಾಯ' ಎಂದು ಆರಂಭವಾಗಿ, ಮಧ್ಯದಲ್ಲಿ ರಾಜ ನನ್ನ 'ಪ್ರಾಣಿಗಳಿಗೆ ದಯೆ ತೋರುವುದರಲ್ಲಿ ಬೋಧಿತತ್ವವನ್ನು ಹೋಲುವನು"[೨] ಎಂದು ಹೊಗಳಿದೆ.

ಸಿಲೋನಿನ ಸನ್ಯಾಸಿಗಳು ಬನವಾಸಿ ಪ್ರಾಂತದಲ್ಲಿ ಬೌದ್ಧಧರ್ಮವನ್ನು ಪ್ರಚಾರ ಮಾಡಿದರೆಂದು ನಾಗಾರ್ಜುನಕೊಂಡದ (ಕ್ರಿ.ಶ. ೩ನೇ ಶತಮಾನ) ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಕೊಪ್ಪಳದಲ್ಲಿ ಅಶೋಕನ ಎರಡು ಶಾಸನಗಳು ಲಭಿಸಿವೆ. ೧೦ನೇ ಶತಮಾನದ ಸುಮಾರಿನಲ್ಲಿ ಮಂಗಳೂರಿನ ಕದ್ರಿಯು ಸುಪ್ರಸಿದ್ಧ ಬೌದ್ಧಿಕ ಕೇಂದ್ರವಾಗಿದ್ದಿತು. ಅಲ್ಲಿನ ಅವಲೋಕಿತೇಶ್ವರನ ಕಂಚಿನ ಮೂರ್ತಿಯ ಮೇಲೆ ಕ್ರಿ.ಶ. ೯೬೮ರ ಒಂದು ಶಾಸನವಿದೆ. ಈ ಶಾಸನದಿಂದ ಅಲ್ಲಿ ಒಂದು 'ವಿಹಾರ' ಇದ್ದಿತೆಂಬ ವಿಷಯ ಗೊತ್ತಾಗುತ್ತದೆ. ಗದಗ ತಾಲ್ಲೂಕಿನ ಡಂಬಳ ಶಾಸನವು 'ನಮೋ ಬುದ್ಧಾಯ' ಎಂದು ಆರಂಭವಾಗುತ್ತದೆ. ಕ್ರಿ.ಶ. ೧೧೦೪ರ ಶಾಸನವೊಂದರಲ್ಲಿ ಮುಳುಗುಂದದ ವೀರನಾರಾಯಣಸ್ವಾಮಿಯ ಸ್ಥಾನವನ್ನು ಆಳುತ್ತಿದ್ದ ಸನ್ಯಾಸಿಯೊಬ್ಬನನ್ನು 'ಬೌದ್ಧಮದೇಭ ಪಂಚಾನನ' ಎಂದು ಕರೆದಿರುವುದು ಉಲ್ಲೇಖನೀಯ. ಈ ಮಾತುಗಳಿಂದ ಬೌದ್ಧಧರ್ಮ ಇತರ ಧರ್ಮಗಳು ತೀರಾ ಕಡೆಗಣಿಸಬಹುದಾಗಿದ್ದ ಧರ್ಮವಾಗಿರಲಿಲ್ಲ ಎಂಬುದು ತಿಳಿಯುತ್ತದೆ. ತೀರದಾಳದಲ್ಲಿ ಶಂಕರ ಜಿನರಿಗೆ ದೇವಾಲಯಗಳಿದ್ದಂತೆ ಬುದ್ಧನಿಗೂ ಇದ್ದಿತೆಂದು ತಿಳಿದುಬರುತ್ತದೆ. ತುಮಕೂರ ಜಿಲ್ಲೆಯ ಕೈದಾಳದ ಶಾಸನದ ಪ್ರಾರ್ಥನಾಪದ್ಯದಲ್ಲಿ ಶಿವ, ಬ್ರಹ್ಮ, ಸುಗತ (ಬುದ್ಧ), ವಿಷ್ಣು, ಜಿನ ಇವೆಲ್ಲ ಪರಮಾತ್ಮನಿಗೆ ಬೇರೆ ಬೇರೆ ಹೆಸರುಗಳು ಎಂದು ಹೇಳಿದೆ. ಬಿಜಾಪುರ ಜಿಲ್ಲೆಯ ಶಾಸನವೊಂದರಲ್ಲಿ ಮಹಾಮಂಡಲೇಶ್ವರ ವಿರುಪರಸನು ಬೌದ್ಧ ಮೊದಲಾದ ಅನ್ಯಮತೀಯರನ್ನು ನಾಶಪಡಿಸಿ ಶೈವರ ಪ್ರಶಂಸೆಗೆ ಪಾತ್ರನಾದನೆಂದು ಹೇಳಿದೆ. ಕ್ರಿ.ಶ. ೧೧೯೬ರಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಚಿಕ್ಕಂಡಿಯಲ್ಲಿ ಬೌದ್ಧಾಲಯವೂ

ಬೌದ್ಧರೂ ಇದ್ದರೆಂದು ಒಂದು ಶಾಸನ ತಿಳಿಸುತ್ತದೆ. ಹೀಗೆ ಬೌದ್ಧಧರ್ಮದ ಅವಶೇಷಗಳು ಕ್ರಿ.ಪೂ. ೩ನೇ ಶತಮಾನದಿಂದ ಕ್ರಿ.ಶ. ೧೬ನೇ ಶತಮಾನದವರೆಗೆ ಕರ್ನಾಟಕದಲ್ಲಿ ದೊರಕುತ್ತವೆ.

ಕನ್ನಡ ನಾಡಿನಲ್ಲಿ ಪ್ರಚಲಿತವಾಗಿದ್ದ ಬೌದ್ಧ ಧರ್ಮದ ಸ್ವರೂಪವನ್ನು ತಿಳಿಯಲು ನಮಗೆ ಕೆಲವು ಸ್ಪಷ್ಟ ಸೂಚನೆಗಳು ಶಾಸನಗಳಲ್ಲಿ ದೊರಕುತ್ತವೆ.

ಧಾರ್ಮಿಕ ವಿಚಾರಗಳ ಪ್ರಸ್ತಾವನೆಯಲ್ಲಿ ಅಶೋಕನ ಶಾಸನಗಳು ಉಲ್ಲೇಖನೀಯ. ಅವನ ಸುಪ್ರಸಿದ್ಧ ಪ್ರಸ್ತರ ಶಾಸನಗಳು ಮತ್ತು ಸ್ತಂಭಶಾಸನಗಳು ಉತ್ತರ ಭಾರತದಲ್ಲಿ ಪೇಷಾವರ ಜಿಲ್ಲೆಯ ಯೂಸುಫ್‌ಜೈ ಪ್ರದೇಶದ ಪಾಹ್ ಬಾಸ್‌ಗಡಿಯಿಂದ ಹಿಡಿದು ದಕ್ಷಿಣದಲ್ಲಿ ಮೈಸೂರಿನ ಸಿದ್ದಾಪುರದ ತನಕ, ಪೂರ್ವದಲ್ಲಿ ಕಟಕ್ ಜಿಲ್ಲೆಯ ಧೌಲಿಯಿಂದ ಮತ್ತು ಗಂಜಾಂ ಜಿಲ್ಲೆಯ ಔಗಡದಿಂದ ಹಿಡಿದು, ಪಶ್ಚಿಮ ಕಾಥೇವಾಡದ ಜುನಾಗಢವರೆಗೆ ಅಶೋಕನ ಸ್ವಂತ ರಾಜ್ಯಗಳ ಮತ್ತು ಅವನ ಪ್ರಭಾವಕ್ಕೆ ಹೆಚ್ಚು ಕಡಿಮೆ ಒಳಗಾಗಿದ್ದ ಇತರ ಪ್ರದೇಶಗಳ ವಿವಿಧ ಮುಖ್ಯ ಸ್ಥಳಗಳಲ್ಲಿ ಚದುರಿಹೋಗಿವೆ. "ಧರ್ಮದಿಂದ, ರಾಜರ್ಷಿಗಳ ಕರ್ತವ್ಯಕ್ಕನುಗುಣವಾಗಿ ದಯೆಯಿಂದ ಮತ್ತು ತಾನು ಮೊದಲು ಆಶ್ರಯಿಸಿದ್ದ ಬ್ರಾಹ್ಮಣ ಮತಕ್ಕೆ ವಿಭಿನ್ನವಾದ ಇತರ ಮತಗಳ ಬಗೆಗೆ ಸಹಾನುಭೂತಿಯಿಂದ ರಾಜ್ಯವಾಳಬೇಕೆಂಬ ಹಾಗೂ ಆ ಧ್ಯೇಯ ಸಾಧನೆಗಾಗಿ ತಾನು ಕೈಗೊಂಡಿರುವ ಕೆಲವು ಕ್ರಮಗಳನ್ನು ಪ್ರಜೆಗಳಿಗೆ ಪರಿಚಯಿಸಿ, ಅವರು ಹೇಗೆ ಸಹಕರಿಸಬಹುದೆಂಬುದನ್ನು ವಿವರಿಸಬೇಕೆಂಬ ಅಶೋಕನ ದೃಢನಿರ್ಧಾರವನ್ನು ಘೋಷಿಸುವುದು ಈ ಶಾಸನಗಳ ಉದ್ದೇಶ"[೩] ಎಂಬುದು ತಿಳಿದುಬರುತ್ತದೆ.

ಅಶೋಕನು ಬೌದ್ಧಧರ್ಮಕ್ಕೆ ಪರಿವರ್ತಿತನಾಗಿ ಬೌದ್ಧ ಸಂಘಕ್ಕೆ ಸಾಂಪ್ರದಾಯಿಕವಾಗಿ ಸೇರಿಕೊಂಡಾಗ ಮತ್ತು ಸನ್ಯಾಸ ವ್ರತವನ್ನು ತೊಟ್ಟು ರಾಜ್ಯ ತ್ಯಾಗ ಮಾಡಿ, ಮಗಧನ (ಬಿಹಾರ) ಪ್ರಾಚೀನ ನಗರ ಗಿರಿಪ್ರಜದ ಸುತ್ತಣ ಗಿರಿಗಳಲ್ಲಿ ಒಂದಾದ ಸುವರ್ಣಗಿರಿ (ಸೋನ್‌ಗಿರ್)ಯಲ್ಲಿ ಬದುಕಿನ ಉಳಿದ ದಿನಗಳನ್ನು ಕಳೆಯುತ್ತಿದ್ದಾಗ ರೂಪಿತವಾಗಿ ಹೊರಡಿಸಲ್ಪಟ್ಟ ಮತ್ತು ಉತ್ತರ ಭಾರತದಲ್ಲೂ, ಮೈಸೂರಿನಲ್ಲೂ ವಿವಿಧ ಪಾಠಗಳಲ್ಲಿರುವ ಅಶೋಕ ಶಾಸನವನ್ನು ಇವಕ್ಕೆ ನಾವು ಸೇರಿಸಬೇಕು. ಬೌದ್ಧಧರ್ಮವೇ ನಿಜವಾದ ಧರ್ಮವೆಂದೂ ಗೃಹಸ್ಥ ಜೀವನವನ್ನು ತೊರೆದು ಅನಿಕೇತನನಾದ 'ಪರಿವ್ರಾಜಕ' ಬುದ್ಧ ಮಹಾಚಾರ್ಯನೆಂದೂ ಉದ್ಘೋಷಿಸುವುದಕ್ಕಾಗಿ ಈ

ಶಾಸನವನ್ನು ಹೊರಡಿಸಿದ್ದನೆಂಬುದು ಸಂಶೋಧನೆಯಿಂದ ತಿಳಿದುಬರುತ್ತದೆ. ಬುದ್ಧನ ಅವಸಾನವಾದ ೨೫೬ ವರ್ಷಗಳ ತರುವಾಯ, ಅಶೋಕನ ಪಟ್ಟಾಭಿಷೇಕವಾದ ೩೮ ವರ್ಷಗಳ ಬಳಿಕ, ಅವನ ರಾಜ್ಯತ್ಯಾಗದ ವಾರ್ಷಿಕೋತ್ಸವದ ಸಂದರ್ಭದಲ್ಲಿ ಅದು ರೂಪುಗೊಂಡಿತೆಂಬುದರಲ್ಲಿ ಅದರ ಚಾರಿತ್ರಿಕ ಮೌಲ್ಯವಿದೆ. ಕ್ರಿ.ಪೂ. ೪೮೨ರಲ್ಲಿ ಬುದ್ಧನ ಅವಸಾನವೆಂದೂ, ಕ್ರಿ.ಪೂ. ೩೨೦ರಲ್ಲಿ ಚಂದ್ರಗುಪ್ತನಿಂದ ಮೌರ್ಯ ಸಾಮ್ರಾಜ್ಯ ಸ್ಥಾಪನೆಯೆಂದೂ, ಕ್ರಿ.ಪೂ. ೨೬೪ರಲ್ಲಿ ಅಶೋಕನ ಪಟ್ಟಾಭಿಷೇಕವೆಂದೂ ತಿಳಿದುಬರುತ್ತದೆ. ಅಶೋಕನ ಕಾಲದಲ್ಲಿ ಬೌದ್ಧಧರ್ಮವನ್ನು ಗಡಿನಾಡುಗಳಲ್ಲಿ ಸ್ಥಾಪಿಸಲೋಸುಗ ಮಹಾಪುರೋಹಿತ ಮೊಗ್ಗಲಿಮಿತ್ತ ತಿಸ್ಸನಿಂದ ಕಳುಹಿಸಲ್ಪಟ್ಟ ಸಂಘಗಳ ಬಗೆಗೆ ದೀಪವಂಶದಲ್ಲಿರುವ ವಿವರಗಳನ್ನು ಈ ಶಾಸನವು ಸ್ಥಿರಗೊಳಿಸುತ್ತದೆ.

ಅಶೋಕನ ರುಮ್ಮಿಂದೈಸ್ತಂಭ ಶಾಸನ ಬುದ್ಧನ ಜನ್ಮಸ್ಥಾನವಾದ 'ಲುಂಬಿನಿವನ'ವನ್ನು ಗುರುತಿಸುತ್ತದೆ. 'ಶಾಕ್ಯಮುನಿ' ಬುದ್ಧ ಅಲ್ಲಿ ಹುಟ್ಟಿದ್ದರಿಂದ, ದೊರೆ ಆ ತಾಣದ ಸುತ್ತ ಕಲ್ಲಿನ ಪ್ರಾಕಾರವನ್ನು ಮರೆಗೋಡೆಯನ್ನು ಕಟ್ಟಿಸಿ ಒಂದು ಶಿಲಾಸ್ತಂಭವನ್ನು ಸ್ಥಾಪಿಸಿ ಅದರ ಮೇಲೆಯೆ ಲುಬಿನಿ ಗ್ರಾಮವನ್ನು ಕೆಲವು ತೆರಿಗೆಗಳಿಂದ ಮುಕ್ತಗೊಳಿಸಿದನೆಂದು ಶಾಸನ ಹೇಳುತ್ತದೆ.

ದಕ್ಷಿಣ ಭಾರತದ ಜೈನ ಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ. ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮ ಒಂದು ಪ್ರಬಲವಾದ ಧರ್ಮವಾಗಿತ್ತು. ಜೈನಧರ್ಮವು ಬೌದ್ಧಧರ್ಮದ ಒಂದು ಪ್ರಭೇದವೆಂದೂ, ಅದಕ್ಕೆ ಸ್ವತಂತ್ರ ಅಭ್ಯಾಸದ ಅಗತ್ಯವಿಲ್ಲವೆಂದೂ ಕೆಲವರು ಭಾವಿಸಿದ್ದುಂಟು. ಆದರೆ ಅನಂತರ ನಡೆದ ಸಂಶೋಧನೆಗಳಿಂದ ಅದೇ ಒಂದು ಪ್ರತ್ಯೇಕವಾದ ಧರ್ಮವೆಂದೂ ಬೌದ್ಧ ಧರ್ಮಕ್ಕಿಂತ ಸ್ವಲ್ಪ ಪ್ರಾಚೀನವೆಂದೂ ಸ್ಥಿರಪಟ್ಟಿದೆ. ಮೌರ್ಯವಂಶದ ಚಂದ್ರಗುಪ್ತನಿಗೆ (ಕ್ರಿ.ಪೂ. ೩೨೩–೨೯೮) ರಾಜ್ಯ ಕೊಡಿಸುವ ಪ್ರಯತ್ನದಲ್ಲಿ ಚಾಣಕ್ಯನು ಜೈನರನ್ನು ಸಹಾಯಕ್ಕೆ ತೆಗೆದುಕೊಂಡ ವಿಷಯ ಮುದ್ರಾರಾಕ್ಷಸ ನಾಟಕದಲ್ಲಿ (ಕ್ರಿ.ಶ. ೫೦೦) ಬಂದಿದೆ. ಕ್ರಿ.ಶ. ಸುಮಾರು ೬೦೦ರ ಶ್ರವಣಬೆಳಗೊಳದ ಶಾಸನವು ಭದ್ರಬಾಹು ದಕ್ಷಿಣಕ್ಕೆ ಬಂದು ಶ್ರವಣಬೆಳಗೊಳದಲ್ಲಿ ನೆಲೆಸಿದ ವಿಷಯವನ್ನು ತಿಳಿಸುತ್ತದೆ. ಇನ್ನು ಅನೇಕ ಶಾಸನಗಳು ಶ್ರವಣಬೆಳಗೊಳಕ್ಕೂ ಭದ್ರಬಾಹು ಚಂದ್ರಗುಪ್ತರಿಗೂ ಸಂಬಂಧ ಕಲ್ಪಿಸುತ್ತವೆ.

ಶ್ವೇತಾಂಬರ ಸಂಪ್ರದಾಯವು ಉತ್ತರ ಭಾರತದಲ್ಲಿಯೂ, ದಿಗಂಬರ ಸಂಪ್ರದಾಯವು ದಕ್ಷಿಣ ಭಾರತದಲ್ಲಿಯೂ ಪ್ರಚಲಿತವಾಗಿದೆ. ಪ್ರಾಚೀನ ಕರ್ನಾಟಕದಲ್ಲಿಯೂ ದಿಗಂಬರ ಸಂಪ್ರದಾಯವೇ ಪ್ರಧಾನವಾಗಿತ್ತು. ಆದರೂ ಅಲ್ಲಿ-ಇಲ್ಲಿ ಶ್ವೇತಾಂಬರರು ಇದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ೫ನೇ ಶತಮಾನದ ಕದಂಬರ ತಾಮ್ರ ಪಟಗಳಲ್ಲಿ ಮೃಗೇಶವರ್ಮನು ಶ್ವೇತಾಂಬರ ಮಹಾಶ್ರಮಣ ಸಂಘದ ಉಪಭೋಗ್ಯಕ್ಕೆ ಮತ್ತು ದಿಗಂಬರ ಸನ್ಯಾಸಿ ಮಹಾಶ್ರವಣ ಸಂಘದ ಉಪಭೋಗ್ಯಕ್ಕೆ ದತ್ತಿ ಬಿಟ್ಟಿರುವುದು ತಿಳಿದುಬರುತ್ತದೆ. ಆಂಧ್ರದಲ್ಲಿಯೂ ಶ್ವೇತಾಂಬರರಿದ್ದರು ಎಂಬುದಕ್ಕೆ ಶಾಸನಗಳಲ್ಲಿ ಪ್ರಮಾಣ ದೊರಕುತ್ತದೆ.

ಕದಂಬರು, ಗಂಗರು, ರಾಷ್ಟ್ರಕೂಟರು, ಚಾಳುಕ್ಯರು, ಹೊಯ್ಸಳರು-ಇವರ ಪ್ರೋತ್ಸಾಹದಿಂದ ಜೈನಧರ್ಮ ಹನ್ನೆರಡನೆ ಶತಮಾನದವರೆಗೆ ಬೆಳೆದು ಬೆಳಗಿತು. ಗಂಗರ ರಾಷ್ಟ್ರೀಯ ಧರ್ಮವೇ ಜೈನಧರ್ಮವಾಗಿತ್ತು! ಕ್ರಿ.ಶ. ೯೮೦ರ ಸೌಂದತ್ತಿಯ ಶಾಸನವೊಂದರಲ್ಲಿ ಬಸದಿಯೊಂದನ್ನು 'ರಟ್ಟರ ಪಟ್ಟಜಿನಾಲಯ' ಎಂದು ಕರೆದು ರಾಷ್ಟ್ರಕೂಟರಿಂದ ಜಿನಧರ್ಮವು ಪಡೆದ ಪ್ರೋತ್ಸಾಹದ ವಿವರಗಳಿವೆ. ಜೈನ ಸನ್ಯಾಸಿಗಳು ಮಳೆಗಾಲದ ನಾಲ್ಕು ತಿಂಗಳು ಹೊರತುಪಡಿಸಿ ಉಳಿದ ಕಾಲದಲ್ಲೆಲ್ಲಾ ವಿಹರಿಸುತ್ತಿರಬೇಕು ಎಂಬ ನಿಯಮವಿದ್ದರೂ, ಕ್ರಮೇಣ ಆ ನಿಯಮ ಸಡಿಲಗೊಂಡು ಮುನಿಗಳು ಬಸದಿಗಳಲ್ಲಿ ವಾಸಿಸಲಾರಂಭಿಸಿದರು. ಜೈನ ದೇವಾಲಯಗಳನ್ನು ಬಸದಿಗಳೆಂದು ಕರೆಯುವುದಕ್ಕೆ ಇದೇ ಕಾರಣವಿರಬಹುದು.

ಸನ್ಯಸನ ವಿಧಿಯಿಂದ ಮಡಿದವರ ಸ್ಮಾರಕವಾಗಿ-ವೀರರಿಗೆ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದಂತೆ-ಕೆಲವು ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಅವುಗಳನ್ನು ನಿಸಿದಿಗಲ್ಲು'ಗಳೆಂದು ಕರೆಯುತ್ತಾರೆ. ಇವುಗಳು ಬಸದಿಗಳ ಮುಂದಿನ ಪ್ರತ್ಯೇಕ ಶಿಲಾಫಲಕಗಳಲ್ಲಿ ಬಸದಿಯ ಕಂಬಗಳ ಮೇಲೆ, ಊರ ಹೊರಗಿನ ಹೊಲಗಳಲ್ಲಿ ನೆಟ್ಟ ಕಲ್ಲುಗಳಲ್ಲಿ, ಬಂಡೆಗಳ ಮೇಲೆ ಕಾಣಿಸಿಕೊಳ್ಳುತ್ತವೆ. ಇವುಗಳಲ್ಲಿ ಸನ್ಯಸನದ ವಿಷಯ, ಅದರ ಜೊತೆಗೆ ಸನ್ಯಸನವನ್ನು ಸ್ವೀಕರಿಸಿದ ವ್ಯಕ್ತಿಯ ಚಿತ್ರವೂ ಇರುತ್ತದೆ. ನಿಸಿದಿಗಲ್ಲುಗಳ ಮೇಲೆ ಸಾಮಾನ್ಯವಾಗಿ ಮುಕ್ಕೊಡೆಯಿರುವ ಜಿನನ, ಗುರುವಿನ ಮುಂದೆ ಸನ್ಯಸನ ವ್ರತಧಾರಿಯಾಗಿರುವ ವ್ಯಕ್ತಿಯ ಚಿತ್ರಗಳಿರುತ್ತವೆ. ಈ ನಿಸಿದಿಗಳು ತೀರ್ಥಕ್ಷೇತ್ರಗಳಂತೆ ಪರಮ ಪವಿತ್ರ ಪ್ರದೇಶಗಳಾಗಿದ್ದವು.

ಭಾಗವತ ಧರ್ಮವು ದಕ್ಷಿಣ ಭಾರತವನ್ನು ಕ್ರಿ.ಶ. ಕ್ಕಿಂತ ಪೂರ್ವದಲ್ಲಿಯೇ ಪ್ರವೇಶಿಸಿದ್ದಿತೆಂದು ನಾನಘಾಟ್ ಶಾಸನದಿಂದ ತಿಳಿದುಬರುತ್ತದೆ. ಶಾಸನಗಳಲ್ಲಿ ಭಾಗವತ; 'ವೈಷ್ಣವ' ಎಂಬ ಉಕ್ತಿಗಳು ದೊರೆಯುತ್ತವೆ. ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು (ಸು. ೫೫೦) ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.

ಜಯತಿ ಶ್ರೀ ಪರಿಷ್ವಂಗ ಶ್ಯಾಙ್ಗ್ಯ (ಮ್ಯಾನ್ಯತಿ) ರಚ್ಯುತಃ
ದಾನವಾಕ್ಷ್ಣೋರ್ಯುಗಾಂತಾಗ್ನಿಃ (ಶಿಷ್ಠಾನಾನ್ತು) ಸುದರ್ಶನಃ।

ಅತ್ತಿಮಬ್ಬೆಯ ಲಕ್ಕುಂಡಿ ಶಾಸನದಲ್ಲಿ ಲಕ್ಕುಂಡಿಯ ಮಹಾಜನರನ್ನು 'ವೈಷ್ನವಗೀತಿ ಮನೋಹರರ್' ಎಂದು ಕರೆದಿದೆ. ವಿಷ್ಣುವಿನ ಅನುಯಾಯಿಗಳ ಧರ್ಮವನ್ನು ಒಂದು ಶಾಸನವು 'ವೈಷ್ಣವಧರ್ಮ'ವೆಂದು ಕರೆದು, ಅವರು ಶಿವಾಲಯವೊಂದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವರೆಂದು ಹೇಳುತ್ತದೆ. ಬೇಲೂರಿನ ಶಾಸನದಲ್ಲಿ ಶ್ರೀವೈಷ್ಣವರ ಹೆಸರುಗಳಿವೆ.

ಶ್ರೀ ವಿಷ್ಣುವರ್ಧನನ್ನು ಒಂದು ಶಾಸನವು ವಿಷ್ಣುವಿನ ೧೧ನೇ ಅವತಾರವೆಂದು (ಏಕಾದಶಾವತಾರನ್) ವರ್ಣಿಸುತ್ತದೆ. "ವಿಷ್ಣುವಿನ ಹತ್ತು ಅವತಾರಗಳಲ್ಲಿ ಪ್ರಾಚೀನ ಕನ್ನಡಿಗರ ಮನಸ್ಸನ್ನು ವಿಶೇಷವಾಗಿ ಸೆಳೆದದ್ದು ಬಹುಶಃ ವರಾಹಾವತಾರ"[೬] ಹೇಳಿಕೆಯು ಇಲ್ಲಿ ಉಲ್ಲೇಖನೀಯವಾಗಿದೆ. ಅನೇಕ ವೈಷ್ಣವ ಶಾಸನಗಳ ಆರಂಭದಲ್ಲಿ ವರಾಹನ ಪ್ರಾರ್ಥನೆಯ ಪದ್ಯಗಳು ಕಂಡುಬರುತ್ತವೆ.

ಇಪ್ಪತ್ತೊಂದನೆಯ ಶತಮಾನದಲ್ಲಿರುವ ನಾವು ಶಾಸನಗಳ ಸಹಾಯದಿಂದ ಪ್ರಾಚೀನ ಕರುನಾಡಿನ ದೇವಾಲಯಗಳ ಕುರಿತು ತಿಳಿದುಕೊಳ್ಳಬಹುದು. ಕ್ರಿಸ್ತಶತದ ಆರಂಭದ ದಿನಗಳಲ್ಲಿ ನಿರ್ಮಿಸಿದ ದೇವಸ್ಥಾನಗಳು ಕರ್ನಾಟಕದಲ್ಲಿ ಉಳಿದಿಲ್ಲವಾದರೂ ಆ ಕಾಲಕ್ಕೆ ಮಂದಿರಗಳಿದ್ದವು ಎಂಬುದೂ, ಅವುಗಳಿಗೆ ಅರಸರು ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರೆಂದೂ ಶಾಸನಗಳು ತಿಳಿಸುತ್ತವೆ. ಸುಮಾರು ಕ್ರಿ.ಶ. ೧೫೦ರ ಕದಂಬರ ಪ್ರಾಕೃತ ಶಾಸನದಲ್ಲಿ ಶಾತವಾನದ ರಾಜನೊಬ್ಬನು 'ಮಟ್ಟಪಟ್ಟದೇವ'ರಿಗೆ ದತ್ತಿಯನ್ನು ಬಿಟ್ಟುಕೊಟ್ಟ ವಿಷಯವಿದೆ. ಆ ದೇವಸ್ಥಾನವು ಮಹಾಮುನಿಗಳ ವಾಸ್ಥಾನವೂ ಆಗಿದ್ದಿತೆಂದು ಆ ಶಾಸನವು ತಿಳಿಸುತ್ತದೆ. ಕ್ರಿ.ಶ. ೪೫೦ರ

ತಾಳಗುಂದದ ಶಾಸನದಿಂದ ತಾಳಗುಂದದಲ್ಲಿ ಮಹಾದೇವನ ದೇವಸ್ಥಾನವಿದ್ದ ಸಂಗತಿಯು ತಿಳಿಯುತ್ತದೆ.

ಪ್ರಾಚೀನ ಕರ್ನಾಟಕದ ದೇವಾಲಯಗಳು ಅಂದಿನ ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕಗಳು. ಈ ನಿಷ್ಠೆ ಮತ್ತು ಭಕ್ತಿಗಳು ನೆಲೆಗೊಂಡಿದ್ದ ಹಲವರ ಹೆಸರುಗಳು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತವೆ. ವ್ಯಕ್ತಿಗಳಿಗೆ ಹೆತ್ತವರು ಇಟ್ಟ ಹೆಸರು ಯಾವುದೇ ಆಗಿರಲಿ, ಆ ವ್ಯಕ್ತಿ ತನ್ನ ಹೆಸರಿಗೆ 'ಈಶ್ವರ' ಎಂಬ ಪದವನ್ನೇ 'ಭಟ್ಟಾರಕ' ಎಂಬ ಪದವನ್ನೇ ಸೇರಿಸಿ ಆ ಹೆಸರಿನ ದೇವರನ್ನು ಪ್ರತಿಷ್ಠಿಸುವ ಸಂಗತಿಯು ಹಲವು ಶಾಸನಗಳಲ್ಲಿದೆ. ಅದಕ್ಕೆ ಕಾರಣ, ಅಂತಹ ದೇವಸ್ಥಾನವನ್ನು ಕಟ್ಟಿಸಿದವನ ಹೆಸರು ದೇವರಿಗೆ ಬರುವುದೆಂದು, ಕಟ್ಟಿಸಿದವನು ಶಿವನೇ ಆಗಿಬಿಡುತ್ತಾನೆ ಎಂದು ಆ ಕಾಲದ ಜನರು ನಂಬಿದ್ದರು. ಕುಂಬಾರ ಜಾತಿಯ ಬಮ್ಮಣ ಎಂಬಾತನು ತಲೆಯನ್ನು ತೊಳೆಯದ, ಅನ್ನವುಣ್ಣದ 'ವೀರವ್ರತ'ವನ್ನು ಕೈಗೊಂಡು ಕುಂಭೇಶ್ವರ ದೇವರನ್ನು ಪ್ರತಿಷ್ಠಾಪನೆ ಮಾಡಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.

ದತ್ತಿಗಳನ್ನು ಬಿಟ್ಟುಕೊಡುವಾಗಲೇ ಅವು ಇಂತಿಂತಹ ಅಂಶಗಳಿಗೆ ವಿನಿಯೋಗಬೇಕು ಎಂಬುದನ್ನು ಶಾಸನಗಳಲ್ಲಿ ಸೂಚಿಸುತ್ತಿದ್ದರು. ಪ್ರಭು ಮಾರಸಿಂಘ ಎಂಬಾತನು ಸಿದ್ದೇಶ್ವರ ಎಂಬ ದೇವರಿಗೆ ಕೊಟ್ಟ ದತ್ತಿಯಲ್ಲಿ ವಿವರಗಳು ಇರುತ್ತಿದ್ದವು. ಕೆಲವು ದತ್ತಿಯ ಶಾಸನಗಳಲ್ಲಿ 'ಪೊನ್ನಂ ಕೊಟ್ಟ ಮಣ್ಣಂ ಕೊಂಡು' ಎಂಬ ಉಕ್ತಿಯು ಕಂಡುಬರುತ್ತದೆ. ಇದೊಂದು ನಾಣ್ಣುಡಿಯಾಗಿದ್ದು, ದಾನವಾಗಿ ಕೊಡಲು ತನ್ನಲ್ಲಿ ಸ್ವಂತ ಭೂಮಿಯಿಲ್ಲದ ವ್ಯಕ್ತಿ, ಯಾವುದೋ ಭೂಮಿಯಲ್ಲಿ ಸ್ವಲ್ಪ ಭಾಗವನ್ನು ಹಣ ಕೊಟ್ಟು ಕೊಂಡದ್ದನ್ನು ಈ ನಾಣ್ಣುಡಿಯು ಹೇಳುತ್ತದೆ. ಭೂದಾನವು ಒಂದು ರೀತಿಯಲ್ಲಿ ಸ್ಥಿರದಾನವಾಗದೆ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದ ಕ್ರಮಕ್ಕೆ ಅತ್ಯುತ್ತಮ ನಿದರ್ಶನ ಬಳ್ಳಿಗಾವೆಯ ಸೋಮೇಶ್ವರ ದೇವಸ್ಥಾನದ ಶಾಸನ. ಒಂದು ದೇವಸ್ಥಾನವು ನಿರ್ಮಾಣವಾದಾಗ, ಉಳಿದ ಜನರು ತಮ್ಮ ಕೈಯಲ್ಲಿ ದೇವಸ್ಥಾನವನ್ನು ಕಟ್ಟಿಸುವ ಶಕ್ತಿಯಿಲ್ಲದಿದ್ದರೂ, ಆ ಅವಕಾಶವನ್ನು ಉಪಯೋಗಿಸಿಕೊಂಡು ದೇವಸ್ಥಾನಕ್ಕೆ ಸಣ್ಣ ದತ್ತಿಗಳನ್ನು ಕೊಟ್ಟು ತಮ್ಮ ಭಕ್ತಿಯನ್ನು ಸಲ್ಲಿಸುತ್ತಿದ್ದುದರ ಸ್ಪಷ್ಟ ಪರಿಚಯವು ಅಲ್ಲಿ ದೊರೆಯುತ್ತದೆ.

ಶಾಸನವೊಂದರಲ್ಲಿ ದಾನವನ್ನು ಅರಸರು, ಅಧಿಕಾರಿಗಳು ಮತ್ತು ಆರು ಜನ ಗಾವುಂಡರು ರಕ್ಷಿಸುವರು ಎಂದಿದೆ.

ದೇವದಾಸಿಯವರು ಎಂದರೆ ಭಗವಂತನ ದಾಸಿಯರು. ದೇವರ ಸೇವೆಗೆ ಮೀಸಲಾದವರು ಎಂದರ್ಥ. ದೇವಸ್ಥಾನಗಳಲ್ಲಿ ಗೀತನೃತ್ಯಗಳ ಮೂಲಕ ಭಗವಂತನ ಸೇವೆಯನ್ನು ಮಾಡಿಕೊಂಡು ಬದುಕುತ್ತಿದ್ದರು. ಭಾರತದ ತಮಿಳುನಾಡಿನಂತಹ, ಕೆಲವು ಕಡೆಗಳಲ್ಲಿ ಕರ್ನಾಟಕದಲ್ಲಿ ಇಂದಿಗೂ ಈ ಸಂಪ್ರದಾಯ ಸ್ವಲ್ಪಮಟ್ಟಿಗೆ ಉಳಿದುಕೊಂಡು ಬಂದಿದೆ. ಕರ್ನಾಟಕದ ಶಾಸನಗಳಲ್ಲಿ ಅಂಗಭೋಗ ಮತ್ತು ರಂಗಭೋಗ ಎಂಬ ಮಾತುಗಳು ಬಂದಿರುವುದನ್ನು ಕಾಣುತ್ತೇವೆ. ವಿಗ್ರಹದ ದೇಹಕ್ಕೆ ಸಲ್ಲುವ ಭೋಗ, ಎಂದರೆ ಸ್ನಾನ, ಗಂಧ ಲೇಪನ, ಧೂಪ, ದೀಪ, ಪುಷ್ಪ... ಇತ್ಯಾದಿಗಳು. ಅಂಗಭೋಗಗಳು ಗರ್ಭಗುಡಿಯ ಮುಂದಿನ ರಂಗದ ಮೇಲೆ ಅಂದರೆ ದೇವರ ಮೂರ್ತಿಯ ಮುಂದೆ ಸುಂದರಿಯರಿಂದ ನಡೆಯುವ ಗೀತೆ, ನೃತ್ಯಗಳೇ ರಂಗಭೋಗಗಳು. ದೇವದಾಸಿಯರು ರಂಗಭೋಗದ ಉಪಕರಣಗಳು, ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಶಾಸನದಲ್ಲಿ 'ದೇಗುಲದ ಸೂಳೆ'ಯೊಬ್ಬಳು ದಾನ ಕೊಟ್ಟ ವಿಷಯವನು ಬಂದಿದೆ. ಅಂದರೆ, "ಲೋಕಮಹಾದೇವಿಯರ ದೇಗುಲದ ಸೂಳೆ ಗೋಯಿಂದಪೊಡ್ಡಿಯ ಮಗಳು ಬಾದಿ(ಶಿ) ಪೊಡ್ಡಿಯೆಂಬೊಳ್ ಉತ್ತಮ ಗೋಸಾಸಮಿಯ್ದೊಳ್..." ಎಂದು ಉಲ್ಲೇಖಿಸಲಾಗಿದೆ. ಸು. ೮೦೦ರ ಶಾಸನದಲ್ಲಿ ವಿಜಯೇಶ್ವರ ದೇವಸ್ಥಾನದ ಸೂಳೆ ಚಲಬ್ಬೆಯ ಹೆಸರಿದೆ. ಕ್ರಿ.ಶ. ೯೭೪ರ ಶಾಸನದಲ್ಲಿ ದೇವರಿಗೆ ಇಬ್ಬರು ಕನ್ಯೆಯರನ್ನೂ ಹನ್ನೆರಡು ಹಸುಗಳನ್ನೂ ದಾನವಾಗಿ ಕೊಟ್ಟಂತೆ ಹೇಳಿದೆ. ಕರ್ನಾಟಕದಲ್ಲಿ ಮಹಾದೇವ ಚಮೂಪತಿಯು ಇಟ್ಟಗಿಯಲ್ಲಿ ತಾನು ಕಟ್ಟಿಸಿದ ಮಹಾದೇವ ದೇವಾಲಯಕ್ಕಾಗಿ ರತಿ ರಂಬೆಯರನ್ನು ಹೋಲುವ 'ಕಾಮಿನಿಯರನಾಯ್ದು ಪುರವರ್ಗದ ಸೂಳೆ'ಯರನ್ನಾಗಿ ಮಾಡಿದಂತೆ ಶಾಸನವೊಂದು ತಿಳಿಸುತ್ತದೆ. ಆ ದೇವದಾಸಿಯರು ದೇವಸ್ಥಾನದ ಅಕ್ಕಪಕ್ಕಗಳಲ್ಲೇ ವಾಸಿಸುತ್ತಿದ್ದಂತೆ ಶಾಸನವೊಂದು ತಿಳಿಸುತ್ತದೆ.

ದೇವದಾಸಿಯರೆಲ್ಲರೂ ವೇಶ್ಯೆಯರೇ ಆಗಿದ್ದರೂ ವೇಶ್ಯೆಯರೆಲ್ಲರೂ ದೇವದಾಸಿಯರಲ್ಲ. ದೇವಸ್ಥಾನದ ದತ್ತಿಗಳಲ್ಲಿ 'ಸೂಳೆ' ಎಂಬ ಮಾತು ಬಂದರೆ ಅದು ದೇವದಾಸಿಯನ್ನು

ಸೂಚಿಸುತ್ತದೆ. ಬೇರೆಯ ಕಡೆಗೆ ಬಂದಾಗ ಅದು ವೇಶ್ಯೆಯನ್ನು ಸೂಚಿಸುತ್ತದೆ. ದೇವದಾಸಿಯರ ವಿಷಯದಲ್ಲೂ, ವೇಶ್ಯೆಯರ ವಿಷಯದಲ್ಲೂ ಶಾಸನಗಳಲ್ಲಿ ಸಾಕಷ್ಟು ಗೌರವಭಾವನೆಯೇ ಇದೆ.

ಪ್ರಾಚೀನ ಕರ್ನಾಟಕದಲ್ಲಿ ವ್ಯಕ್ತಿಗಳು ತಮ್ಮ ಪ್ರಾಣವನ್ನು ತಾವೇ ತೆಗೆದುಕೊಳ್ಳುವ ಕೆಲವು ಪದ್ಧತಿಗಳಿದ್ದವು. ಅವುಗಳನ್ನು 'ಆತ್ಮಬಲಿ' ಎಂದು ಕರೆಯಲಾಗುತ್ತದೆ. ಈ ಆತ್ಮಬಲಿಗಳಲ್ಲಿ ಕೆಲವು ಪೂರ್ಣವಾಗಿ ಧಾರ್ಮಿಕವಾದವು. ಕರ್ನಾಟಕದ ಶಾಸನಗಳಲ್ಲಿ ಇಂತಹ ಧಾರ್ಮಿಕ ದೇಹತ್ಯಾಗಗಳ ಹಲವು ನಿದರ್ಶನಗಳಿವೆ. ಜಯನಾಗನ್ ಎನ್ನುವವನು ಮಕರ ಮಾಸದ ದಿನದಲ್ಲಿ ಬೆಂಕಿಯ ಕೊಂಡವನ್ನು ಹೊಕ್ಕ ವಿಷಯವು ಶಾಸನವೊಂದರಲ್ಲಿದೆ. ಬೀರಯ್ಯ ಎನ್ನುವವನು ಕ್ರಿ.ಶ. ೧೧೩೩ ರಲ್ಲಿ ದೇವರಿಗೆ ಹರಕೆ ಹೊತ್ತು ಅಗ್ನಿ ಪ್ರವೇಶ ಮಾಡಿ ಶಿವಲೋಕ ಪ್ರಾಪ್ತನಾದ ವಿಷಯವು ಶಾಸನವೊಂದರಲ್ಲಿದೆ. ಸು. ೯೧೧ರ ಶಾಸನವೊಂದರಲ್ಲಿ ಆಕಟೆ ಎನ್ನುವವನು ಅರಸನಿಗೆ ಮಗನಾಗಲಿ ಎಂದು ಒಬ್ಬ ದೇವತೆಗೆ ತನ್ನ ತಲೆಯನ್ನು ಹರಸಿಕೊಂಡು, ಅರಸನಿಗೆ ಮಗನಾದಾಗ ದೇವತೆಗೆ ತನ್ನ ತಲೆಯನ್ನು ಕೊಟ್ಟು ಸ್ವರ್ಗಸ್ಥನಾದ ವಿಷಯವು ಬಂದಿದೆ.

ಧಾರ್ಮಿಕ ದೇಹತ್ಯಾಗಗಳು ಜೈನರಲ್ಲಿ ವಿಶೇಷವಾಗಿದ್ದವು. ಅವು ಜೈನಧರ್ಮದ ವೈಶಿಷ್ಟ್ಯವೂ ಹೌದು. ಅವುಗಳನ್ನು ಸಮಾಧಿಮರಣಗಳೆಂದೂ, ಸಲ್ಲೇಖನ ವ್ರತಗಳೆಂದೂ ಕರೆಯುತ್ತಾರೆ. ಸಮಾಧಿ ಮರಣ ಹೊಂದಿದವರ ನೂರಾರು ಹೆಸರುಗಳು ಶ್ರವಣಬೆಳಗೊಳದ ಶಾಸನಗಳಲ್ಲಿ ಕಂಡುಬರುತ್ತವೆ. ಸಲ್ಲೇಖನ ವ್ರತವನ್ನು ಕೈಗೊಳ್ಳುವುದರ ಉದ್ದೇಶವೂ, ಹಿಂದೂಗಳ ಧಾರ್ಮಿಕ ದೇಹತ್ಯಾಗವನ್ನು ಮಾಡುವ ಉದ್ದೇಶವೂ ಒಂದೇ.

ಧಾರ್ಮಿಕ ದೇಹತ್ಯಾಗವು ಜೈನರಲ್ಲಿದ್ದಷ್ಟು ಜೈನೇತರರಲ್ಲಿ ವಿಶೇಷವಾಗಿ ಕಂಡುಬರುವುದಿಲ್ಲ. ಜೈನೇತರರಲ್ಲಿ ಇಂತಹ ದೇಹತ್ಯಾಗಿಗಳನ್ನು ಮಾಡಿದವರ ಶಾಸನಗಳು ಎಲ್ಲೋ ಕೆಲವು ಮಾತ್ರ. ಬದುಕು ನಶ್ವರವೆಂದು ಪ್ರಬಲವಾಗಿ ಪ್ರತಿಪಾದಿಸಿದ ಜೈನರಲ್ಲಿ ಧಾರ್ಮಿಕ ದೇಹತ್ಯಾಗವು ಹೆಚ್ಚು. ಇಂತಹ ದೇಹತ್ಯಾಗದಿಂದ ಮುಂದಿನ ಜನ್ಮದಲ್ಲಿ ಸದ್ಗತಿಯೂ,

ಮೋಕ್ಷವೂ, ಶಾಶ್ವತವಾದ ಸುಖವೂ ಪದವಿಯೂ ದೊರೆಯುತ್ತದೆ ಎನ್ನುವ ಭಾವನೆಯೇ ಇಂತಹ ದೇಹತ್ಯಾಗಗಳ ಹಿನ್ನೆಲೆಯಿರುವುದು.

"ಪ್ರಾಚೀನ ಜನಾಂಗಗಳು ಈ ಲೋಕದಂತಹ ಇನ್ನೊಂದು ಲೋಕವಿದೆಯೆಂದು ಬಹು ದೃಢವಾಗಿ ನಂಬಿದ್ದವು. ವ್ಯಕ್ತಿ ಮಡಿದಾಗ ಅವನು ಆ ಪರಲೋಕಕ್ಕೆ ಹೋಗುವನೆಂದೂ, ಅಲ್ಲಿಯ ಅವನ ಭೋಗಕ್ಕೆ ಇಲ್ಲಿಂದ ಅವನಿಗಿಷ್ಟವಾದ ವಸ್ತುಗಳನ್ನು 'ಕಳುಹಿಸ'ಬೇಕೆಂದೂ ಭಾವಿಸಿದ್ದರು. ಬಹುಶಃ ಸಹಗಮನ ಪದ್ಧತಿಗೆ ಇದೇ ಮೂಲವಿರಬಹುದು"[೫] ಪತಿಯ ಚಿತೆಯ ಜೊತೆಯಲ್ಲಿ ಅವನ ವಿಧವೆಯನ್ನು ಸುಡುವ ಪದ್ಧತಿಯು ಪ್ರಾಚೀನ ಭಾರತದಲ್ಲಿ ಮಾತ್ರವಲ್ಲದೆ ಗ್ರೀಕ್, ಜರ್ಮನ್ ಮುಂತಾದ ಯೂರೋಪ್ ಮತ್ತು ಪಶ್ಚಿಮ ಏಷ್ಯಾ ಜನಾಂಗಗಳಲ್ಲಿಯೂ ಇದ್ದಿತು ಎಂಬುದು ತಿಳಿದು ಬರುತ್ತದೆ. ಚೀನಾದಲ್ಲಿ ವಿಧವೆಯು ಯಾವತ್ತೂ ಮರುಮದುವೆಯಾಗಬಾರದು ಅದೂ ಮಹಾಪಾಪವೆಂದು ನಂಬಿದ್ದರು. ಸಹಗಮನದ ಮೊದಲನೆಯ ಐತಿಹಾಸಿಕ ನಿದರ್ಶನವೆಂದರೆ, ಕ್ರಿ.ಪೂ. ೩೧೬ ರಲ್ಲಿ ಗ್ರೀಕರೊಡನೆ ಹೋರಾಡಿ ಮಡಿದ ಕೆತ್ಯೊಸನ ಕಿರಿಯ ಹೆಂಡತಿಯ ಸಹಗಮನ ಕ್ರಿ.ಶ. ೪ನೇ ಶತಮಾನದಿಂದ ಸಹಗಮನ ಪದ್ಧತಿಯು ಧಾರ್ಮಿಕವಾಗಿ ಹೆಚ್ಚು ಪ್ರಚಾರಕ್ಕೆ ಬಂದಿತು. "ಗಂಡನ ಸಾವಿನ ನಂತರ ಹೆಂಡತಿಯೂ ಅಗ್ನಿ ಪ್ರವೇಶವನ್ನು ಮಾಡಿದರೆ, ಅವಳೂ ಅವಳ ಗಂಡನೂ ಪಾಪಗಳಿಂದ ಮುಕ್ತರಾಗುವುದಲ್ಲದೆ, ಮೂರುವರೆ ಕೋಟಿ ವರ್ಷ ಸ್ವರ್ಗದಲ್ಲಿ ಸುಖವಾಗಿರುತ್ತಾರೆ"[೬] ಎಂದು ಜನ ಬಲವಾಗಿ ನಂಬಿದ್ದರು.

ಕ್ರಿ.ಶ. ಸುಮಾರು ೪೦೦ರ ಸೊರಬ ತಾಲ್ಲೂಕಿನ ಶಾಸನವು ಕರ್ನಾಟಕದಲ್ಲಿ ಸಹಗಮನದ ಅತ್ಯಂತ ಪ್ರಾಚೀನ ಉಲ್ಲೇಖವಾಗಿದೆ. ಕದಂಬ ವಂಶದ ರಾಣಿಯೊಬ್ಬರು ರವಿವರ್ಮನೊಡನೆ ಚಿತೆಗೆ ಆಹುತಿಯಾದುದನ್ನು ತಿಳಿಸುತ್ತದೆ. ಕರ್ನಾಟಕದಲ್ಲಿ ಸಹಗಮನದ ಸ್ಪಷ್ಟ ಐತಿಹಾಸಿಕ ನಿದರ್ಶನವು ಕ್ರಿ.ಶ. ೯೭೨ರ ಶಾಸನವೊಂದರಲ್ಲಿ ಕಂಡುಬರುತ್ತದೆ. ಬಿದಿಯಣ್ಣ ಎನ್ನುವವನು ಮಡಿದಾಗ ಅವನ ಹೆಂಡತಿಯಾಗಿದ್ದ ಜಕ್ಕಬ್ಬೆಯೂ ಪ್ರಾಣವನ್ನು ತ್ಯಜಿಸುತ್ತಾರೆ. ಅವಳ ತಂಗಿ ಝೂಬೆಯು ಕಲ್ಲನ್ನು ನಿಲ್ಲಿಸುತ್ತಾಳೆ ಎಂದು ಉಲ್ಲೇಖಿಸಲಾಗಿದೆ. ಕ್ರಿ.ಶ. ೧೦೫೧ರ ಶಾಸನದಲ್ಲಿ ಬೋಗಾರ ಕರಡಿಯ ಸೆಟ್ಟಿ ಎಂಬುವನು ಮಡಿದಾಗ ಅವನ ಮದವಳಿಗೆ ನಾಗಮ್ಮ

ಎಂಬುವಳು 'ಸಹಗಮನ' ಮಾಡಿದ ವಿಷಯವೂ ಅವಳಿಗಾಗಿ ನಿರ್ಮಿಸಿದ ಮಹಾಸತಿಕಲ್ಲಿನ ವಿಷಯವೂ ಅಲ್ಲಿ ಬಂದಿದೆ. ಹೆಗ್ಗಡೆದೇವನಕೋಟೆ ತಾಲ್ಲೂಕಿನ ಬೆಳತೂರು ಶಾಸನದಲ್ಲಿ 'ಅನುಗಮನ' ಪದ್ಧತಿಯ ಕುರಿತು ಉಲ್ಲೇಖಿಸಲಾಗಿದೆ. ಗಂಡನು ಎಲ್ಲೋ ದೂರದ ಪ್ರದೇಶದಲ್ಲಿ ಮಡಿದದ್ದನ್ನು ಕೇಳಿ ಅವನ ಸ್ಮಾರಕವಾಗಿ ಅವನಿಗೆ ಸೇರಿದ ಯಾವುದಾದರೂ ವಸ್ತುವನ್ನು ಹಿಡಿದುಕೊಂಡು ಪ್ರಾಣವನ್ನು ಬಿಡುವ ಕ್ರಮಕ್ಕೆ 'ಅನುಗಮನ' ಅಥವಾ 'ಅನುಮರಣ' ಎಂದು ಕರೆಯಲಾಗುತ್ತಿತ್ತು. ಈ ಶಾಸನವು ದೇಕಬ್ಬೆಯ ಅಗ್ನಿಪ್ರವೇಶ ಕುರಿತು ವಿವರಿಸುತ್ತದೆ. ಅವಳು ತನ್ನ ಗಂಡ ನವಲೆನಾಡಿನ ಏಚನ ಕೊಲೆಯಾಗಿರುವುದನ್ನು ತಿಳಿದು, ಸಹಗಮನ ಮಾಡಲು ನಿರ್ಧರಿಸುತ್ತಾಳೆ. ಅವಳ ತಂದೆ–ತಾಯ್ಗಳು, ಬಂಧುಗಳು ಎಲ್ಲರೂ ಸೇರಿ ಸಹಗಮನವನ್ನು ಮಾಡಬೇಡವೆಂದು ಬೇಡಿಕೊಳ್ಳುತ್ತಾರೆ. ಆದರೆ ದೇಕಬ್ಬೆಯು ಅವರೆಲ್ಲರ ಮಾತುಗಳನ್ನು ನಿರ್ಲಕ್ಷಿಸಿ, ಅಗ್ನಿಯನ್ನು ಪ್ರವೇಶಿಸುತ್ತಾಳೆ. ಕನ್ನಡದಲ್ಲಿ ಇಷ್ಟು ವಿಸ್ತಾರವಾಗಿ ಸಹಗಮನವನ್ನು ವರ್ಣಿಸಿರುವ ಶಾಸನ ಮತ್ತೊಂದಿಲ್ಲ.

'ಆರನೇ ಶತಮಾನದಿಂದ ಹನ್ನೆರಡನೇ ಶತಮಾನದ ಮಧ್ಯಭಾಗದವರೆಗೆ ಸಹಗಮನದ ಸುಮಾರು ಹತ್ತು ನಿದರ್ಶನಗಳು ದೊರಕುತ್ತವೆ"[೭]. ಕರ್ನಾಟಕದಲ್ಲಿ ವೀರ ಯುಗದೊಡನೆ (೯–೧೦ನೇ ಶತಮಾನ) ಪ್ರಬಲಗೊಂಡ ಸಹಗಮನ ಪದ್ಧತಿಯು ಹೊಯ್ಸಳ, ವಿಜಯನಗರ ಸಾಮ್ರಾಜ್ಯಗಳ ಕಾಲದಲ್ಲಿ ತನ್ನ ತುದಿಯನ್ನು ಮುಟ್ಟಿತು ಎಂಬುದನ್ನು ಸಂಶೋಧಕರು ಗುರುತಿಸಿದ್ದಾರೆ. ಓರ್ವ ಅರಸನು ಮಡಿದ ತಕ್ಷಣ ಅಥವಾ ಅವನು ಕೊನೆಯುಸಿರೆಳೆಯುವ ಸೂಚನೆಯಲ್ಲಿ ಲಭಿಸಿದರೂ ಸಾಕು, ಸಾಯಲು ಸಿದ್ಧರಾಗುತ್ತಿದ್ದ ರಾಣಿಯರ ವಿಷಯವನ್ನು ಜನ್ನನ 'ಅನಂತನಾಥ ಪುರಾಣ'ದಲ್ಲಿ ಕಾಣುತ್ತೇವೆ.

ಸಹಗಮನವನ್ನು ಮಾಡಿ 'ಮಹಾಸತಿ'ಯರಾದವರ ಸ್ಮಾರಕವಾಗಿ ನಿಲ್ಲಿಸಿದ ಕಲ್ಲುಗಳೇ 'ಮಾಸ್ತಿಗಲ್ಲು'ಗಳು ಸಾಮಾನ್ಯವಾಗಿ ಮಾಸ್ತಿಕಲ್ಲುಗಳ ಮೇಲೆ ಎತ್ತಿದ ತೋಳಿನ ಸ್ತ್ರೀಯ ಚಿತ್ರಣವಿರುತ್ತದೆ. ಕೆಲವು ಮಾಸ್ತಿಕಲ್ಲುಗಳ ಮೇಲೆ ಎತ್ತಿದ ತೋಳಿನ ಸ್ತ್ರೀಯ ಚಿತ್ರಣವಿರುತ್ತದೆ. ಕೆಲವು ಮಾಸ್ತಿಕಲ್ಲುಗಳ ಮೇಲೆ ಗಂಡನ ಮತ್ತು ಅವನ ಹೆಂಡತಿಯ ಅಥವಾ ಹೆಂಡತಿಯರ ಚಿತ್ರಗಳೂ ಇರುತ್ತಿದ್ದವು. ಇಂದಿಗೂ ಕೆಲವೆಡೆಯಲ್ಲಿ ಮಹಾಸತಿಯರನ್ನು ದೇವತೆಗಳೆಂದು

ಪೂಜಿಸುತ್ತಾರೆ. ಇನ್ನು ಕೆಲವು ಕಡೆಗಳಲ್ಲಿ ಅವರಿಗಾಗಿ ದೇವಸ್ಥಾನಗಳನ್ನೇ ಕಟ್ಟಿರುವುದನ್ನು ಕಾಣುತ್ತೇವೆ. "ತಮಿಳುನಾಡಿನಲ್ಲಿ ಮತ್ತು ಸಿಂಹಳದಲ್ಲಿ ಕನ್ನಗಿ, ಆಂಧ್ರದಲ್ಲಿ ಪೆರಂತಲಮ್ಮ ಎಂಬ ಮಹಾಸತಿಯರು ಈಗಲೂ ಪೂಜ್ಯರಾಗಿದ್ದಾರೆ"[೮] ಎಂಬ ಅಭಿಪ್ರಾಯಗಳು ವ್ಯಕ್ತವಾಗಿವೆ.

ಚಾಲುಕ್ಯ ವಿಜಯಾದಿತ್ಯ ಸತ್ಯಾಶ್ರಯ ಕಾಲದ ಬಾದಾಮಿಯ ಶಾಸನ ಬ್ರಹ್ಮ, ವಿಷ್ಣು, ಮಹೇಶ್ವರ ಈ ತ್ರಿಮೂರ್ತಿಗಳನ್ನು ಏಕಕಾಲದಲ್ಲಿ ಸ್ಥಾಪಿಸಿದುದನ್ನು ಹೇಳುತ್ತದೆ. ರಾಷ್ಟ್ರಕೂಟರ ಶಾಸನಗಳಲ್ಲಿ ಶಿವ ಮತ್ತು ವಿಷ್ಣುರವರನ್ನು ಕುರಿತ ಸ್ತುತಿರೂಪದ ಶ್ಲೋಕಗಳಿವೆ. ಅವರ ನಾಣ್ಯಗಳ ಮೇಲೆ ವಿಷ್ಣುವಿನ ವಾಹನ ಗರುಡ, ಧ್ಯಾನಸ್ಥನಾದ ಶಿವ ಇರುವುದು ಧರ್ಮ ಸಹಿಷ್ಣುತೆಯನ್ನು ಸೂಚಿಸುತ್ತದೆ. ಹೊಯ್ಸಳರ ಎರಡನೆಯ ನರಸಿಂಹನ ದಂಡನಾಯಕ ಪೋಲಾಳ್ವನು ಹರಿಹರ ಮೂರ್ತಿಯನ್ನು ಪ್ರತಿಷ್ಠಾಪಸಿದನೆಂದು ದಾವಣಗೆರೆಯ ಶಾಸನವೊಂದರಿಂದ ತಿಳಿದುಬರುತ್ತದೆ. ಅತ್ತಿಮಬ್ಬೆಯು ಪೊನ್ನ ವಿರಚಿತ 'ಶಾಂತಿಪುರಾಣ'ದ ೧೦೦೦ ಪ್ರತಿಗಳನ್ನು ಮಾಡಿಸಿ ಹಂಚಿದಲ್ಲದೆ, ೧೫೦೦ ಬಸದಿಗಳನ್ನು ಕಟ್ಟಿಸಿದಳು ಎಂಬುದು 'ಲಕ್ಕುಂಡಿ ಶಾಸನದಿಂದ ತಿಳಿದುಬರುತ್ತದೆ. ಅತ್ತಿಮಬ್ಬೆಗೆ ಜೈನಧರ್ಮದ ಬಗೆಗಿರುವ ಪ್ರೀತಿ, ಕಾಳಜಿಯನ್ನು ಈ ಶಾಸನವು ಪ್ರಚುರಪಡಿಸುತ್ತದೆ.

ದೇವಾಲಯಗಳು ಜನಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತಿದ್ದು, ಜನರನ್ನು ಮುನ್ನಡೆಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು. ಅನೇಕ ದೇವಾಲಯಗಳು ವಿದ್ಯಾಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತಾ, ಜನಜೀವನವನ್ನು ರೂಢಿಸುವ ಶಕ್ತಿಕೇಂದ್ರಗಳಾಗಿದ್ದವು. ದೇವಾಲಯಗಳಿಗೆ ದಾನವಾಗಿ ಬಂದ ಹಣ ಈ ಸತ್ಕಾರ್ಯಗಳಿಗೆ ವಿನಿಯೋಗವಾಗುತ್ತಿತ್ತು. ದಾನವನ್ನು ಬಡಬಗ್ಗರಿಗೆ ನೀಡುವುದು, ಅನ್ನ ಛತ್ರಗಳನ್ನು ನಡೆಸುವುದು, ಧರ್ಮದ ಬಹಳ ಮುಖ್ಯ ಕಾರ್ಯವಾಗಿತ್ತು.

"ದಾನದೊಳನ್ನಮೆ ಸಾರಂ
ದೀನಾನಾರ್ಥರ್ಗ್ಗೆ ತುಪ್ಪಿದಾನಮೆನುತ್ತುಂ
ತಾನೆಱೆದು ಜಕ್ಕಿಯಬ್ಬೆಯ
ಶೋನಿಧಿ ಸತ್ರಕ್ಕೆ ಭೂಮಿದಾನಮನಿತ್ತಳ್"[೯]

ದಾನದಲ್ಲೆಲ್ಲಾ ಅನ್ನದಾನವೇ ಶ್ರೇಷ್ಠವೆಂಬ ಮಾತು ಶಾಸನಗಳಲ್ಲಿ ಕಂಡುಬರುತ್ತದೆ. ದೇವಾಲಯಗಳ ನಿರ್ಮಾಣ ಉದಾತ್ತವಾದ ಸಂಸ್ಕೃತಿಯ ಸಾಧನೆಗೆ ಹಿನ್ನೆಲೆಯಾಗಿತ್ತು. ಜೀವನದಲ್ಲಿ ಒಂದಾದರೂ ದೇವಾಲಯವನ್ನು ಕಟ್ಟಿಸಬೇಕೆಂಬುದು ಇಲ್ಲವೇ ಕಟ್ಟಿಸಿದ ದೇವಾಲಯಗಳಿಗೆ ದಾನವನ್ನು ಕೊಡಬೇಕೆಂಬುದು ಅಂದಿನ ಜನರ ಧಾರ್ಮಿಕ ಭಾವನೆಯಾಗಿತ್ತು.

ಜಿನವಲ್ಲಭನ ಗಂಗಾಧರಂ ಶಾಸನವು ಆಂಧ್ರಪ್ರದೇಶದ ಕರೀಂ ನಗರ ಜಿಲ್ಲೆಯ ಅದೇ ತಾಲ್ಲೂಕಿನ ಕುರಿಕ್ಯಾಲ ಎಂಬ ಗ್ರಾಮದ ಉತ್ತರಕ್ಕೆ ಸುಮಾರು ಐದು ಫರ್ಲಾಂಗು ದೂರದಲ್ಲಿರುವ 'ಬೊಮ್ಮಲಮ್ಮಗುಟ್ಟ' ಎಂದು ಕರೆಯಲ್ಪಡುವ ಬೆಟ್ಟದ ಮೇಲಿನ ಒಂದು ದೊಡ್ಡದಾದ ಬಂಡೆಗಲ್ಲಿನ ಕೆಳಭಾಗದಲ್ಲಿ ಕೊರೆಯಲ್ಪಟ್ಟಿದೆ. ಈ ಶಾಸನದ ಕಾಲ ಸು. ಕ್ರಿ.ಶ. ೯೫೦. ಈ ಶಾಸನದಲ್ಲಿ ಒಟ್ಟು ಹನ್ನೊಂದು ಪಂಕ್ತಿಗಳಿವೆ. ಅಕ್ಷರಗಳು ಕನ್ನಡ ಲಿಪಿಯಲ್ಲಿವೆ. ಜೊತೆಯಲ್ಲಿಯೇ ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಬರೆಯಲ್ಪಟ್ಟಿವೆ. ಪ್ರಾರಂಭದಲ್ಲಿ 'ಓಂ ನಮಃ ಸಿದ್ದೇಭ್ಯೆಃ' ಎಂಬ ಸಂಸ್ಕೃತ ವಾಕ್ಯದ ನಂತರ ದೀರ್ಘವಾದ ಒಂದು ಕನ್ನಡ ವಾಕ್ಯವು ಗದ್ಯದಲ್ಲಿದೆ. ತರುವಾಯ ಮೂರು ಸಂಸ್ಕೃತ ಪದ್ಯಗಳು, ಆರು ಕನ್ನಡ ಪದ್ಯಗಳು ಹಾಗೂ ಮೂರು ತೆಲುಗು ಪದ್ಯಗಳಿವೆ. ನಂತರ ಕೊನೆಗೊಂದು ಕನ್ನಡ ವಾಕ್ಯವು ಗದ್ಯದಲ್ಲಿದೆ.

'ಓಂ ನಮಃ ಸಿದ್ದೇಭ್ಯಃ' ಎಂದರೆ 'ಸಿದ್ಧರಿಗೆ ನಮಸ್ಕಾರಗಳು'. ಜಿನವಲ್ಲಭನು ಜೈನಧರ್ಮದ ಉನ್ನತಿಗಾಗಿ ಮಾಡಿದ ಕಾರ್ಯಗಳನ್ನು ವಿವರಿಸಿರುವುದರಿಂದ ಮತ್ತು ಇದನ್ನು ಜೈನ ಶಾಸನವೆಂದು ಉಲ್ಲೇಖಿಸಿರುವುದರಿಂದ ಇಲ್ಲಿ ಉಕ್ತವಾದ ಸಿದ್ಧರು ಜಿನಮತಕ್ಕೆ ಸಂಬಂಧಿಸಿದ ಸಿದ್ಧರೆಂದು ಅರ್ಥವಾಗುತ್ತದೆ.

ಪ್ರಾಚೀನ ಕರುನಾಡಿನ ವರ್ತಕರು ವ್ಯಾಪಾರದಿಂದ ಗಳಿಸಿದ ಹಣವನ್ನು ಧಾರ್ಮಿಕ ಕಾರ್ಯಗಳಿಗೂ ವಿನಿಯೋಗಿಸುತ್ತಿದ್ದರು. ಭೌತಿಕಜೀವನವೇ ಶ್ರೇಷ್ಠವೆಂದು ಬಗೆಯದೆ ಧಾರ್ಮಿಕ ಬದುಕನ್ನು ಸಾಗಿಸುತ್ತಿದ್ದರು. ಅಂಗಡಿಯ ಮಲ್ಲಿಸೆಟ್ಟಿ, ಗೋರ್ಕಾಮಸೆಟ್ಟಿ, ಗಂಗಿಸೆಟ್ಟಿಯವರು ಕಿರು ಸಂಪಗಾವಿಯಲ್ಲಿ ಬಸದಿ ಕಟ್ಟಿಸಿದ ವಿಷಯ ಬಸ್ತಿಹಳ್ಳಿ, ಗೋಲಹಳ್ಳಿ ಶಾಸನಗಳಲ್ಲಿದೆ. ದೇವಾಲಯಗಳ ಮುಂದೆ ದೀಪಮಾಲೆ ಕಂಬ ನಿಲ್ಲಿಸುವ ಪರಂಪರೆ ಕರ್ನಾಟಕದಲ್ಲಿ

ಪ್ರಚಲಿತದಲ್ಲಿತ್ತು. ಬಮ್ಮಣಸೆಟ್ಟಿಯ ಮಗ ಮಾಚಿಕೊಳಸೆಟ್ಟಿ, ದೇವಿಸೆಟ್ಟಿ, ಬರಚಿಸೆಟ್ಟಿಯ ಮಗ ನಾಗಣ್ಣ, ದೇವಿಸೆಟ್ಟಿಯ ಮಗ ಮಲ್ಲಿಸೆಟ್ಟಿಯರು ದೇವಾಲಯಗಳ ಮುಂದೆ ದೀಪಮಾಲೆ ಕಂಬ ನಿರ್ಮಿಸಿದುದನ್ನು ಶಾಸನಗಳು ಉಲ್ಲೇಖಿಸುತ್ತವೆ.

ದೇವಾಲಯ ಕಟ್ಟಿಸುವಷ್ಟೇ ಪುಣ್ಯ ಕಾರ್ಯ ಶಿಥಿಲವಾದ ಗುಡಿಗಳನ್ನು ಜೀರ್ಣೋದ್ಧಾರ ಮಾಡುವುದು. ಇಂಥ ಪುಣ್ಯ ಕಾರ್ಯಗಳಲ್ಲಿ ವರ್ತಕರು ಭಾಗವಹಿಸಿದ್ದಾರೆ. ಮುರಿದಂಡ, ವಡ್ಡವ್ಯವಹಾರಿ, ನಾನಾದೇಶಿ ವರ್ತಕರು-ಸೋಮೇಶ್ವರ ದೇವಾಲಯದ ಮನರ್ಭರಣ, ಮನರ್ನಾಮಕರಣ, ಕಾರ್ಯ ಮಾಡಿದ ವಿಷಯ ಬಳ್ಳಿಗಾವೆ ಶಾಸನದಲ್ಲಿದೆ. ಉದಂಡಸೆಟ್ಟಿಯ ಮಗ ವೀರಸೆಟ್ಟಿ ತಮ್ಮ ಕುಲಸ್ವಾಮಿ ಹುಲಿಕುಂಟೆಯ ವೀರಭದ್ರ ದೇವಾಲಯದ ಜೀರ್ಣೋದ್ಧಾರ ಮಾಡಿಸಿದ ಸಂಗತಿ ಬಳ್ಳಿಗಾವೆ, ಹುಲಿಕುಂಟೆ ಶಾಸನಗಳಿಂದ ತಿಳಿದುಬರುತ್ತದೆ.

ತಮ್ಮ ಹಾಗೂ ಅರಸರ ಶ್ರೇಯೋಭಿವೃದ್ಧಿಗಾಗಿ ವರ್ತಕರು, ವಿಗ್ರಹ, ಲಿಂಗಪ್ರತಿಷ್ಠಾಪನೆಯಂಥ ಕಾರ್ಯಗಳನ್ನು ನಡೆಸಿಕೊಂಡು ಬಂದುದು ಶಾಸನಗಳಿಂದ ಗೊತ್ತಾಗುತ್ತದೆ.

ಕ್ರಿ.ಶ. ೭೦೦ರ ಶ್ರವಣಬೆಳಗೊಳ ಶಾಸನವು ಕಳಂತೂರ ಮುನಿಯ ಸಮಾಧಿ ಮರಣದ ವರ್ಣನೆಯನ್ನು ಒಳಗೊಂಡಿದೆ. ಆತನು ಸಮಾಧಿ ಹೊಂದುವ ಮೊದಲು ಕೈಗೊಂಡ ತಪಸ್ಸಿನ ಭೀಕರತೆಯನ್ನು ಶಾರ್ದುಲವಿಕ್ರಿಡಿತ ವೃತ್ತದಲ್ಲಿ ಚೆನ್ನಾಗಿ ನಿರೂಪಿಸಲಾಗಿದೆ. ಕ್ರಿ.ಶ. ೧೧೭೮ರ ಸಿರಿವಾಳ ಶಾಸನವು ಯಾದಗಿರಿ ಜಿಲ್ಲೆಯ ಸುರಪುರ ತಾಲ್ಲೂಕಿನ ಸಿರವಾಳ ಗ್ರಾಮದಲ್ಲಿದೆ. ವೀರಶೈವ ಪಂಚಾರ್ಯರಲ್ಲಿ ಒಬ್ಬನೆಂದು ಹೇಳಲಾಗುವ ರೇವಣಸಿದ್ಧ ಮತ್ತು ಈ ಶಾಸನೋಕ್ತ ರೇವಣಸಿದ್ಧ ಒಬ್ಬನೇ ಎಂದು ವಿದ್ವಾಂಸರ ಊಹೆ. ಇಲ್ಲಿಯ ಪವಾಡಗಳು ರೇವಣಸಿದ್ಧನ ದಿವ್ಯವ್ಯಕ್ತಿತ್ವಕ್ಕೆ ನಿದರ್ಶನವೆನಿಸಿವೆ.

**ಧಾರ್ಮಿಕ ದತ್ತಿಗಳ ದಾಖಲೆಗಳು:**

ದೇವತೆಗಳಿಗೆ, ದೇಗುಲಗಳ ಮತ್ತು ದಾನಶೀಲ ಸಂಸ್ಥೆಗಳ ಪರವಾಗಿ ಅರ್ಚಕರಿಗೆ ಮತ್ತು ಧಾರ್ಮಿಕ ಸಂಘಗಳಿಗೆ ನೀಡಿದ ದಾನಗಳನ್ನು, ದತ್ತಿಗಳನ್ನು ಕಾಣುತ್ತೇವೆ. ಅಶೋಕನ ಮತ್ತು ಅವನ ಮೊಮ್ಮಗನೆಂದು ಪುರಾಣಗಳಲ್ಲಿ ಉಕ್ತನಾದ ದಶರಥನೆಂಬ ರಾಜನ ಶಾಸನಗಳು-

ಬರಾಬರ್ ಹಾಗೂ ನಾಗಾರ್ಜುನ ಬೆಟ್ಟಗಳ ಮೇಲಿನ ಗುಹೆಗಳಲ್ಲಿ ದೊರಕಿವೆ. ಕ್ಷಹರಾತ ರಾಜ ನಹಪಾನನ ಅಳಿಯ ಉಷವದಾತನ ಕ್ರಿ.ಶ. ೧೨೦ರ ನಾಸಿಕ ಶಾಸನ ಆ ಗುಹೆಯನ್ನು ಬೌದ್ಧಭಿಕ್ಷು ಸಂಘವೊಂದಕ್ಕೆ ಧನ ಮತ್ತು ತೆಂಗಿನ ತೋಟದೊಡನೆ ಸಮರ್ಪಿಸಿದ್ದನ್ನು ದಾಖಲಿಸುತ್ತದೆ. ಸ್ಕಂದಗುಪ್ತನ ಭಿತರಿ ಸ್ತಂಭ ಶಾಸನ ಮತ್ತು ಒಂದನೆಯ ಪರಮೇಶ್ವರವರ್ಮನ ಕೊರಮ್ ದಾನ ಶಾಸನವು ವಿಷ್ಣು, ಶಿವ ದೇವತೆಗಳಿಗೆ ಗ್ರಾಮಗಳ ಅರ್ಪಣೆಯನ್ನು ದಾಖಲಿಸುತ್ತದೆ. ಕ್ರಿ.ಶ. ೪೬೬ರ ಸ್ಕಂದಗುಪ್ತನ ಕಾಲದ ಇಂದೂರ ಶಾಸನ ಸೂರ್ಯ ದೇವಾಲಯವೊಂದಕ್ಕೆ ದೀಪದೆಣ್ಣೆಗಾಗಿ ದತ್ತಿ ನೀಡಿದ್ದನ್ನು ದಾಖಲಿಸುತ್ತದೆ. ಬನವಾಸಿಯ ಪ್ರಾಚೀನ ಕದಂಬರ ಕೆಲವು ಶಾಸನಗಳು ಜಿನೇಂದ್ರನಿಗೂ ಆ ದೇವತೆಯ ಪೂಜಾ ನಿರ್ವಹಣೆಗಾಗಿ ಅನೇಕ ಜೈನಪಂಥಗಳ ಸದಸ್ಯರಿಗೂ ಭೂಮಿಯನ್ನು, ಗ್ರಾಮಗಳನ್ನು ನೀಡಿರುವುದನ್ನು ಸಾರುತ್ತವೆ.

ಪೂರ್ವ ಚಾಳುಕ್ಯ ದೊರೆ ಎರಡನೆಯ ಅಮ್ಮನ ಕಲುಚುಂಬರರ ಶಾಸನ ಒಂದು ಗ್ರಾಮವನ್ನು ಜೈನ ಗುರುವೊಬ್ಬನಿಗೆ ಜನದೇವಾಲಯದ ಭೋಜನ ಮಂದಿರದ ನಿರ್ವಹಣೆಗಾಗಿ ನೀಡಿರುವುದನ್ನು ತಿಳಿಸುತ್ತದೆ. ಕ್ರಿ.ಶ. ೯೪೯–೫೦ರ ಆತಕೂರು ಶಾಸನ ಯಾವುದೊ ಭೂಮಿಯೊಂದನ್ನು ಶಿವಾಲಯವೊಂದಕ್ಕೆ ದಾನ ಮಾಡಿದ್ದನ್ನು ವಿವರಿಸುತ್ತದೆ. ಏಕಾಂತದ ರಾಮಯ್ಯನಿಗೆ ತಾನು ಕಟ್ಟಿಸಿದ ದೇವಾಲಯದ ಉದ್ದೇಶಗಳಿಗಾಗಿ ಕೊಟ್ಟ ಗ್ರಾಮಗಳ ಹೆಸರುಗಳನ್ನು 'ಅಬ್ಬಲೂರು ಶಾಸನ'ವು ತಿಳಿಸುತ್ತದೆ. ಹನ್ನೆರಡನೆಯ ಶತಮಾನದಲ್ಲಿ ಶೈವಧರ್ಮ ನವಚೈತನ್ಯದಿಂದ ಸ್ಥಳೀಯವಾಗಿ ಬೆಳೆಯುವುದಕ್ಕೆ ಕಾರಣವಾದ ಚಳವಳಿಯ ನಿಜವಾದ ಮೂಲ ಪುರುಷನನ್ನು ಈ ಶಾಸನ ತಿಳಿಸಿಕೊಡುತ್ತದೆ.

**ಅಡಿಟಿಪ್ಪಣಿಗಳು:**

೧. ಬಾದಾಮಿ ಚಾಲುಕ್ಯರ ಶಾಸನ ಸಾಹಿತ್ಯ, ಪು. ೪೦.
೨. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೨೫.
೩. ಶಾಸನಶಾಸ್ತ್ರ ಪೀಠಿಕೆ, ಪು. ೮೫.
೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೮೭.
೫. ಅದೇ, ಪು. ೩೯೧.
೬. ಅದೇ, ಪು. ೩೫೨.
೭. ಶಾಸನಗಳ ಪ್ರಕಾರ ಮತ್ತು ಅವುಗಳ ಮಹತ್ವ, ಪು. ೧೯, ೨೦.

# ಅಧ್ಯಾಯ–೪
# ಸಾಮಾಜಿಕ ಮೌಲ್ಯಗಳು

ಮನುಷ್ಯ ಸಂಘಜೀವಿ. ಸಮಾಜದೊಂದಿಗೆ ಜೀವಿಸಲು ಪ್ರಯತ್ನಿಸುತ್ತಾನೆ. ಅವನ ಪ್ರತಿಯೊಂದು ಕಾರ್ಯವು ಇತಿಹಾಸ, ಕಾವ್ಯದಲ್ಲಿ ಪ್ರತಿಫಲನವಾಗುತ್ತಿರುತ್ತದೆ. ಆ ನೆಲೆಯಲ್ಲಿ ಶಾಸನಗಳಿಗೂ ಮನುಷ್ಯನ ಬದುಕಿಗೂ ಸಂಬಂಧಿವಿದೆ. ಸಮಾಜಕ್ಕೂ ಶಾಸನಗಳಿಗೂ ಸಂಬಂಧವಿದೆ. ರಾಜರು, ಸಾಮಂತರು, ಪಾಳೆಗಾರರು ಹಾಗೂ ಅಧಿಕಾರಿಗಳ ಜೀವನ ಚಿತ್ರಣಕ್ಕೆ ಸಂಬಂಧಿಸಿದ ಕೆಲವು ಸಮಗ್ರ ಬರಹಗಳು, ಬಿಡಿ ಬರಹಗಳು ಕಂಡುಬರುತ್ತವೆ. ಸಮಾಜದಲ್ಲಿ ಜೀವಿಸುವ ಜನರ ನಡವಳಿಕೆಗಳು, ಅವರ ಆಚರಣೆ, ಸಂಸ್ಕೃತಿಗೆ ಸಂಬಂಧಿಸಿದ ವಿಷಯಗಳನ್ನು ಶಾಸನಗಳಿಂದ ತಿಳಿಯಬಹುದು. ವಿಜಯನಗರದ ಪ್ರೌಢಪ್ರತಾಪದೇವರಾಯನ ಕಾಲದಲ್ಲಿ ರಚನೆಯಾದ ಸುಮಾರು ಕ್ರಿ.ಶ. ೧೪೧೧ರ ಹಂಪೆಯ ಶಾಸನದಲ್ಲಿ ಬರುವ ಒಂದು ಪದ್ಯ ಅಂದಿನ ಸಾಮಾಜಿಕ ಜೀವನಕ್ಕೆ ಹಿನ್ನೆಲೆಯಾಗಿರಬಹುದಾದ ಉದಾತ್ತ ಸಂಸ್ಕೃತಿಯನ್ನು ಅರ್ಥವತ್ತಾಗಿ ಸೂಚಿಸುತ್ತದೆ. ಪ್ರೌಢಪ್ರತಾಪದೇವರಾಯನ ಮಂತ್ರಿ ಲಕ್ಷ್ಮೀಧರಾಮತ್ಯನು ಮಹಾಗಣಪತಿಯನ್ನು ಸ್ಥಾಪಿಸಿ ಅದಕ್ಕೆ ದತ್ತಿಗಳನ್ನು ಬಿಟ್ಟ ಸಂಗತಿ ಈ ಶಾಸನದಲ್ಲಿ ಬಂದಿದೆ.

ಶಾಸನಗಳಲ್ಲಿ ಕಂಡುಬರುವ ಕನ್ನಡ ನಾಡಿನ ವರ್ಣನೆ ಸ್ವರ್ಗಸದೃಶ್ಯವಾದ ಸುಖದ ಕಲ್ಪನೆಯನ್ನು ತಂದುಕೊಡುತ್ತದೆ.

"ಬೆಳಗೆಯ್ಯಿಂ ಪೊಂಗಣಿಯಿಂ
ಫಲತರುವಂದೊಳ್ಪಯಂಗಳಿಂ ಕುಸುಮರಜಾ
ನಿಳನಿಂ ಪಗರೆಯ ಪರಿಯಿಂ
ತಳರದ ಸಿರಿ ಬಲ್ಲಕುಂದೆ ನಾಳ್ಕೆಸೆದಿಕ್ಕ್ಯುಣ"[೧]

ಧನಧಾನ್ಯದ ಸೊಮ್ಮಿನ ಸೊಂಪಿನಿಂದ ಜನ ಸಮೃದ್ಧಿಗಾಗಿ ಬಾಳುತ್ತಿರುವುದರ ಚಿತ್ರಣ ಶಾಸನಗಳಲ್ಲಿ ದೊರೆಯುತ್ತದೆ. ಇನ್ನು ಜನಸಾಮಾನ್ಯರ ವಿಷಯದಲ್ಲಿ ಭಾವುಕತೆ ಹೆಚ್ಚಾಗಿ ಕಂಡುಬರುತ್ತದೆ. ಧರ್ಮದ ಹೆಸರಿನಲ್ಲಿ ಹೇಳಿದುದನ್ನೆಲ್ಲ ನಂಬುವ ಸರಳ ಹಾಗೂ ತೋರಿಸುವುದಕ್ಕಾಗಿ ಘಟಸರ್ಪವನ್ನು ಹಿಡಿಯಬೇಕಾದುದು, ಕಾಶಿ ಮುಂತಾದ ಕ್ಷೇತ್ರಗಳಲ್ಲಿ ಜೀವನದ ಅಂತ್ಯವನ್ನು ತಂದುಕೊಳ್ಳುವುದರಿಂದ ಮೋಕ್ಷ ದೊರೆಯುವುದೆಂಬ ಭಾವನೆ, ತಮ್ಮ

ರಾಜನಿಗೆ ಮಕ್ಕಳಾದರೆ ತಾವು ತಲೆಯನ್ನು ಒಪ್ಪಿಸುತ್ತೇವೆಂದು ಆತನ ಆಪ್ತಜನರು ಹರಕೆ ಹೊತ್ತು ಅದನ್ನು ನೆರವೇರಿಸುತ್ತಿದ್ದರೆಂಬ ಹಲವು ಅಂಶಗಳನ್ನು ಶಾಸನಗಳಲ್ಲಿ ಕಾಣುತ್ತೇವೆ.

ಶಾಸನಗಳಲ್ಲಿ ವ್ಯಕ್ತವಾಗುವ ಸಾಮಾಜಿಕ ಜೀವನದಲ್ಲಿ ಕಾಣುವ ಮತ್ತೊಂದು ಪ್ರಮುಖವಾದ ಅಂಶವೆಂದರೆ ಸಹಕಾರ ಜೀವನ ಸುಖವೋ, ದುಃಖವೋ, ದಾನವೋ, ಧರ್ಮವೋ ನಾಲ್ಕಾರು ಜನ ಕೂಡಿ ಅದನ್ನು ಅನುಭವಿಸುತ್ತಿದ್ದರು, ಹಾಗೆಯೇ ನಿರ್ವಹಿಸುತ್ತಿದ್ದರು. ಕೆರೆ ಬಾವಿಗಳನ್ನು ಕಟ್ಟಿಸುವುದರಲ್ಲಿ ಮತ್ತು ಅದನ್ನು ಬಳಸುವುದರಲ್ಲಿ ಸಹಕಾರ ತತ್ವವೇ ಪ್ರಧಾನವಾಗಿತ್ತು. ಧಾರವಾಡ ಜಿಲ್ಲೆಯ ನರಗುಂದದಲ್ಲಿ ಸಾರ್ವಜನಿಕರಿಂದಲೇ ಒಂದು ಕೆರೆ ನಿರ್ಮಾಣವಾದುದನ್ನು ಅಲ್ಲಿನ ಶಾಸನ ತಿಳಿಸುತ್ತದೆ.

ಅಂದಿನ ಜನಸಾಮಾನ್ಯರು ತುಂಬಾ ಮುಗ್ಧರಾಗಿದ್ದರು. ದೇವರಲ್ಲಿ, ಗುರುಗಳಲ್ಲಿ ಭಕ್ತಿಗೌರವಗಳನ್ನು ಹೊಂದಿದಲ್ಲದೆ ಅಲೌಕಿಕ ಪವಾಡಗಳಲ್ಲಿ ಮಹಿಮೆಗಳಲ್ಲಿ ಒಂದು ಬಗೆಯ ಅಂಧಃಶ್ರದ್ಧೆ, ಮುಗ್ಧಕಲ್ಪನೆ ಮನೆಮಾಡಿಕೊಂಡಿತ್ತು. "ಧರ್ಮದ ಹೆಸರಿನಲ್ಲಿಯೇ ಬೆಳೆದ ಪರಂಪರಾಪ್ರಿಯವಾದ ಅಂಧಃಶ್ರದ್ಧೆಗಳು ಹಿಂದೂ ಧರ್ಮಕ್ಕೆ ಮುಳ್ಳು ಬೇಲಿಯಂತೆ ಹಬ್ಬಿದ್ದವು. ಅದರಿಂದ ಗುಣ-ದೋಷಗಳೆರಡೂ ಏಕಕಾಲದಲ್ಲಿ ಸಂಭವಿಸಿದವು"[೨]. ಅಂದಿನ ಕಾಲಘಟ್ಟದ ಸಾಮಾಜಿಕ ವ್ಯವಸ್ಥೆಯ ಕುರಿತು ಹೇಳಿರುವುದು ಇಂದೂ ಕೂಡ ಪ್ರಸ್ತುತವಾಗಿದೆ. ಲೌಕಿಕ ಸುಖ ಶಾಂತಿಗಾಗಿ ವಿಚಿತ್ರ ಹರಕೆಗಳನ್ನು ಹೊತ್ತುಕೊಳ್ಳುವುದು ವಿಚಿತ್ರ ನಂಬಿಕೆಗಳನ್ನು ಬೆಳೆಸಿಕೊಂಡಿರುವುದೂ ಕಂಡುಬರುತ್ತದೆ. ಧರ್ಮದ ಮೇಲಿನ ಅತಿಯಾದ ಶ್ರದ್ಧೆಯಿಂದ ಕಪಟಿಗಳ, ಸ್ವಾರ್ಥಿಗಳ ಕೈಗೊಂಬೆಗಳಾಗಿದ್ದರು. ಹಾವು-ಚೇಳುಗಳ ವಿಷವನ್ನು ಸುಟ್ಟ ಗಾಯಗಳನ್ನು ಅಲ್ಲಿನ ಸ್ವಯಂಭು ದೇವರು ನಿಮಿಷ ಮಾತ್ರದಲ್ಲಿ ಪರಿಹರಿಸುತ್ತಾನೆಂಬ ನಂಬಿಕೆಯನ್ನು ಹೊಂದಿದ್ದರು. ಹೊಟ್ಟೂರಿನ ಮಾರಗಾವುಂಡನು ಕಾಲಿಲ್ಲದವರಿಗೆ ಕಾಲನ್ನು ಕೊಡುವ ಶಕ್ತಿಯನ್ನು ಪಡೆದಿದ್ದನೆಂಬ ನಂಬಿಕೆ ಹೊಟ್ಟೂರಿನ ಒಂದು ಶಾಸನದಲ್ಲಿದೆ. ಮಹಿಳೆಯರು ತಮ್ಮ ಪಾತಿವ್ರತ್ಯದ ಪ್ರಭಾವವನ್ನು ತೋರಿಸುವುದಕ್ಕಾಗಿ ಘಟಸರ್ಪ ಹಿಡಿಯುತ್ತಿದ್ದರು. ಕಾಶಿ ಮುಂತಾದ ಕ್ಷೇತ್ರಗಳಲ್ಲಿ ಜೀವನದ ಅಂತ್ಯವನ್ನು ತಂದುಕೊಳ್ಳುವುದರಿಂದ ಮೋಕ್ಷ ದೊರೆಯುತ್ತದೆಂಬ ಭಾವನೆ ಹಲವರಲ್ಲಿತ್ತು.

ದೈವನಿಷ್ಠವಾಗಿ ನಡೆಸುವ ಆತ್ಮಾನುಸಂಧಾನದಿಂದ ಸದ್ಗತಿ ಸಾಧ್ಯವೆಂದು ಅಂದಿನ ಜನರ ಸಾಮಾಜಿಕ ಮೌಲ್ಯವಾಗಿತ್ತು. ದೇವರ ಹೆಸರಿನಲ್ಲಿ ಕೈಗೊಳ್ಳುವ ಆತ್ಮ ಬಲಿದಾನದಿಂದಲೂ ಸದ್ಗತಿ ಸಾಧ್ಯವೆಂದು ಅವರು ನಂಬಿದ್ದರು. ದೇವರ ಸಂಪ್ರೀತಿಗಾಗಿ ಅರ್ಪಿಸುತ್ತಿದ್ದ ಜೀವವನ್ನು ಪ್ರಿಯ ವ್ಯಕ್ತಿ ಸಂಪ್ರೀತಿಗಾಗಿಯೂ ಅರ್ಪಿಸುವಲ್ಲಿ, ಆತ್ಮ ಬಲಿದಾನ ಸಂಪ್ರದಾಯವು 'ಧಾರ್ಮಿಕ ಸಂದರ್ಭ'ದಿಂದ ಲೌಕಿಕ ಸಂದರ್ಭಕ್ಕೆ ತಿರುಗಿತು. ಈ ಲೌಕಿಕ ಆತ್ಮಬಲಿದಾನವು ಪತಿಗಾಗಿ ಪ್ರಿಯ ಸತಿಯ ಮರಣ, ವ್ಯಕ್ತಿಗಾಗಿ ಪ್ರಿಯ ವ್ಯಕ್ತಿಯ ಮರಣ ಇದು ಮುಂದೆ ಒಡೆಯ-ಸೇವಕ ಸಂಬಂಧದಲ್ಲೂ ಬೆಳೆಯಿತು. ನಮ್ಮ ನಾಡಿನ ಕಾವ್ಯ, ಶಾಸನಗಳನ್ನು ಐತಿಹಾಸಿಕವಾಗಿ ಅವಲೋಕಿಸಿದರೆ ಈ ಸಂಪ್ರದಾಯ ಕಿಳ್ಗುಂಟೆ-ವೇಳೆವಾಳಿ-ಲೆಂಕವಾಳಿ-ಗರುಡ ಎಂದು ಹೆಸರುಗಳನ್ನು ಬದಲಿಸುತ್ತ ಬಂದಿರುವುದನ್ನು ಗುರುತಿಸಬಹುದು. "ಕೀಳ್ಗುಂಟೆ ಎಂಬುದು ಹೂಳುವ ಸಂಪ್ರದಾಯವನ್ನು, ವೇಳೆವಾಳಿ ಎಂಬುದು ಸುಡುವ ಸಂಪ್ರದಾಯವನ್ನು ಪ್ರತಿನಿಧಿಸಲು ಹುಟ್ಟಿದ ಪದಗಳಾಗಿರಬಹುದು"[೩] ಎಂದು ವಿದ್ವಾಂಸರು ಅಭಿಪ್ರಾಆಯಪಟ್ಟಿರುವುದು ಸರಿಯಾಗಿದೆ.

'ಜೋಳವಾಳಿ' ಎಂಬುದು ವೈರಿಯೊಂದಿಗೆ ಹೋರಾಡಿ ಗೆದ್ದ ಇಲ್ಲ ಮಡಿದ ವ್ಯಕ್ತಿಯನ್ನು ಸೂಚಿಸುತ್ತದೆ. 'ವೇಳೆವಾಳಿ' ಎಂಬುದು ತಾನಾಗಿಯೇ ಜೀವತ್ಯಾಗ ಮಾಡಿಕೊಳ್ಳುವ ಇಲ್ಲವೆ ಮಾಡಿಸಿಕೊಳ್ಳುವ ವ್ಯಕ್ತಿಯನ್ನು ಸೂಚಿಸುತ್ತದೆ. 'ಜೋಳವಾಳಿ-ವೇಳೆವಾಳಿ' ಎಂಬ ಇವು ಒಂದು ಬಗೆಯ ಜೋಡುಪದಗಳು ಎಂಬಂತೆ ಕಲ್ಯಾಣ ಚಾಲುಕ್ಯರ ಕಾಲದವರೆಗೂ ಬಳಕೆಗೊಂಡಿವೆ. ಆತ್ಮ ಬಲಿದಾನದ ಸಂಪ್ರದಾಯದ ವ್ಯಕ್ತಿಗಳಿಗೆ ಹೊಯ್ಸಳರ ಕಾಲದಲ್ಲಿ 'ಗರುಡ' ಅಥವಾ ಗರುಡರು ಎಂದು ಕರೆಯುತ್ತಿದ್ದರು ಎಂಬುದಕ್ಕೆ ಹಲವಾರು ಚರ್ಚೆಗಳು, ವಾದಗಳು ನಡೆದಿವೆ.

**ಸಮಾಜದಲ್ಲಿ ಸ್ತ್ರೀಯರಿಗಿದ್ದ ಸ್ಥಾನ:**

ಪ್ರಕೃತಿಯ ಮಡಿಲಲ್ಲಿ ಸ್ತ್ರೀ-ಪುರುಷರು ಸಮವಾಗಿದ್ದರೂ, ಪುರುಷ ನಿರ್ಮಿತ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ವಿಭಿನ್ನವಾದ ಮೌಲ್ಯಗಳೂ ರೂಢಿಯಲ್ಲಿದ್ದವು. ವೈದಿಕ ಯುಗದಲ್ಲಿ ಸ್ತ್ರೀಯರಿಗೆ ಅತ್ಯಂತ ಗೌರವದ ಸ್ಥಾನವಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಲೋಪಾಮುದ್ರಾ, ವಿಶ್ವವಾರಾ, ಸಿಕತಾನಿವಾವರಿ,

ಘೋಷಾರವರನ್ನು ಇಲ್ಲಿ ಹೆಸರಿಸಬಹುದು. ಕ್ರಿ.ಶ.ದ ಆರಂಭದ ಹೊತ್ತಿಗೆ ಸ್ತ್ರೀ ಎನ್ನುವವಳು ವೇದಾಧ್ಯಯನಕ್ಕೆ ಮತ್ತು ಉಪನಯನಕ್ಕೆ ಅನರ್ಹಳಾಗಿ ಶೂದ್ರನಿಗೆ ಸಮನಾದಳು. ಇದಕ್ಕೆ ಪೂರಕವೆಂಬಂತೆ ಅನೇಕ ಶಾಸನಗಳು ಗಂಡು ಮಕ್ಕಳಿಗಾಗಿ ಹಂಬಲಿಸಿ ಹರಕೆಯೊತ್ತ ವಿಷಯವನ್ನು ವಿವರಿಸುತ್ತವೆಯೇ ಹೊರತು ಹೆಣ್ಣುಮಕ್ಕಳಿಗಾಗಿ ಹಂಬಲಿಸಿದ ವಿಷಯವು ಹೆಚ್ಚಿನ ಯಾವ ಶಾಸನದಲ್ಲಿಯೂ ಕಂಡುಬಂದಿಲ್ಲ. ಹಲವಾರು ಶಾಸನಗಳಲ್ಲಿ ಗಂಡುಮಗುವನ್ನು **'ಕುಲದೀಪಕ'** ಎಂದು ಕರೆಯಲಾಗಿದೆ. **"**ವಿಷ್ಣುವರ್ಧನನ ರಾಣಿ ಶಾಂತಲೆಯನ್ನು ಅವಳ ತಾಯ್ತಂದೆಗಳು ಧರ್ಮೇಶ್ವರ ಲಿಂಗದ ಕರುಣೆಯಿಂದ ಪಡೆದಂತೆ ಶಾಸನಗಳು ಹೇಳುತ್ತವೆ**"** ಎಂಬುದನ್ನು ಡಾ. ಎಂ. ಚಿದಾನಂದಮೂರ್ತಿಯವರು ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. (೨೦೧೬, ಪು.ಸಂ. ೪೫೬) ಬಹುಶಃ ಅವರು ಗಂಡು ಮಗುವಿಗಾಗಿ ಹರಕೆ ಹೊತ್ತಿರಬೇಕು. ಗಂಡಿಗೆ ಬದಲು ಹೆಣ್ಣು ಮಗಳು ಜನಿಸಿದುದರಿಂದ ಅವಳನ್ನೇ ಅತಿ ಪ್ರೀತಿಯಿಂದ ಗಂಡು ಮಗುವಿನಂತೆ ಸಾಕಿ ಸಲುಹಿದರು.

ಪ್ರಾಚೀನ ಕರ್ನಾಟಕದಲ್ಲಿ ಪ್ರಮುಖವಾಗಿ ಶಾಸನಗಳಲ್ಲಿ ಕಂಡುಬರುವ ಯಾವ ಮಹಿಳೆಯೂ ಶಾಸ್ತ್ರಗಳಲ್ಲಿ ಪಾರಂಗತಳಾಗಿರಲಿಲ್ಲ. ಇದಕ್ಕೊಂದು ಅಪವಾದವಿದೆ. ಸು. ೯೦೦ ರ ಶಾಸನವೊಂದರಲ್ಲಿ ಕಂಡುಬರುವ ಸಾಮಿನಿರ್ಮ್ಮಡಿ ಎಂಬ ಹೆಸರಿನ ಮಹಿಳೆ ಈ ಶಾಸನವು ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲ್ಲೂಕಿನ ಕಾರುಬೆಲೆ ಗ್ರಾಮದ ರಕ್ತಕೊಡುಗೆ ಇನಾಮತೀ ಹೊಲದಲ್ಲಿದೆ. ಈ ನಿದರ್ಶನವನ್ನು ಬಿಟ್ಟರೆ ಸ್ತ್ರೀಯರು ದೊಡ್ಡ ವಿದ್ವಾಂಸರಾಗಿದ್ದುದಕ್ಕೆ ಇನ್ನೆಲ್ಲಿಯೂ ಆಧಾರಗಳಿಲ್ಲ. ಸ್ತ್ರೀಯರು ಒಳ್ಳೆಯ ಗೃಹಿಣಿಯಾದರೆ ಸಾಕು ಎಂಬ ಭಾವನೆ ಆ ಕಾಲದಲ್ಲಿದ್ದಂತೆ ಕಾಣುತ್ತದೆ. ಅರಮನೆಗಳಲ್ಲಿ ಉನ್ನತ ಅಧಿಕಾರಿಗಳ ಮನೆಗಳಲ್ಲಿ ಹೆಣ್ಣು ಮಕ್ಕಳಿಗೆ ಬಾಲ್ಯದಲ್ಲಿ ತಕ್ಕಮಟ್ಟಿಗೆ ವಿದ್ಯಾಭ್ಯಾಸವನ್ನು ಮಾಡಿಸುತ್ತಿದ್ದರು. ನರ್ತನ, ಸಂಗೀತ... ಮುಂತಾದ ಕಲೆಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದ್ದರು. ಅದಕ್ಕೆ ಶಾಸನಗಳಲ್ಲಿ ಕೆಲವೊಂದು ನಿದರ್ಶನಗಳನ್ನು ಕಾಣಬಹುದು. ಮಹಾಸಾಮಂತ ಶೂದ್ರಕಾಂತನ ಹೆಂಡತಿಯಾದ ಜಕ್ಕಿ ಸುಂದರಿಯನ್ನು ಸಹಜ ಸರಸ್ವತಿ ಎಂದು ಶಾಸನವೊಂದರಲ್ಲಿ ಕರೆದಿದೆ. ಮಾಂಡಳಿಕ ಉದಯಾದಿತ್ಯನ ಮಡದಿ ಲಚ್ಚಲದೇವಿಯ ನರ್ತನವನ್ನು ಶಾಸನವೊಂದು ಬಣ್ಣಿಸುತ್ತದೆ.

ಪಿರಿಯ ಕೇತಲದೇವಿಯನ್ನು ಅಭಿನವ ಸರಸ್ವತಿಯೆಂದೂ, ಅನೇಕ ದೇಶ ಭಾಷಾ ಸಂಗೀತ ವಿದ್ಯಾಧರಿ ಎಂದೂ ಒಂದು ಶಾಸನವೂ ಹೊಗಳುತ್ತದೆ.

ಸ್ತ್ರೀಯರ ವಿದ್ಯಾಭ್ಯಾಸವು ಶಾಸ್ತ್ರವನ್ನು ಒಳಗೊಂಡಿದ್ದರೂ ಮುಖ್ಯವಾಗಿ ಕಲೆಗಳ ಕಡೆಗೆ ಒಲಿದಿತ್ತೆಂದೂ, ಸಾಮಾನ್ಯ ವರ್ಗದ ಸ್ತ್ರೀಯರು ಸಾಮಾನ್ಯವಾಗಿ ಅವಿದ್ಯಾವಂತರಾಗಿಯೇ ಉಳಿಯುತ್ತಿದ್ದರು ಎಂಬುದು ತಿಳಿದು ಬರುತ್ತದೆ.

ಹೆಣ್ಣುಮಕ್ಕಳಿಗೆ ಸಾಮಾನ್ಯವಾಗಿ ಎಷ್ಟನೆಯ ವಯಸ್ಸಿನಲ್ಲಿ ಮದುವೆ ಮಾಡುತ್ತಿದ್ದರು ಎಂಬುದನ್ನು ನಿಖರವಾಗಿ ಹೇಳಲು ಹೆಚ್ಚು ಶಾಸನಗಳ ಆಧಾರಗಳು ಲಭ್ಯವಾಗಿಲ್ಲ. ಆದರೆ ಬಾಲ್ಯವಿವಾಹಗಳು ಹೆಚ್ಚಾಗಿ ಕಂಡುಬರುತ್ತವೆ. ಸರಿಯಾದ ವರ ಸಿಗದಿದ್ದರೂ ಪರವಾಗಿಲ್ಲ, ಹುಡುಗಿಯು ಪ್ರಾಯಕ್ಕೆ ಬರುವ ಮೊದಲೇ ಸಿಕ್ಕಿದ ವರನಿಗೆ ಕೊಟ್ಟು ಮದುವೆ ಮಾಡುತ್ತಿದ್ದರು. ಮದುವೆಯಾಗಲಿರುವ ಹೆಣ್ಣಿನ ವಯಸ್ಸು ಗಂಡಿಗಿಂತ ಮೂರು ವರ್ಷ ಕಡಿಮೆಯಿರಬೇಕು ಎಂದು ಕಾಮಶಾಸ್ತ್ರವು ಹೇಳುತ್ತದೆ. ಇದು ಅಂದಿನ ಕಾಲದ ಸಾಮಾಜಿಕ ಮೌಲ್ಯವಾಗಿತ್ತು. ಕರ್ನಾಟಕದಲ್ಲಿ ಬಾಲ್ಯವಿವಾಹವಿದ್ದರೂ, ಅದು ಅತಿರೇಕಕ್ಕೆ ಹೋಗಿರಲಿಲ್ಲ.

ಇಂದಿನಂತೆಯೇ ಅಂದು ಕೂಡ ಅಂತರಜಾತೀಯ ವಿವಾಹಗಳು ಅಷ್ಟಾಗಿ ನಡೆಯುತ್ತಿರಲಿಲ್ಲ. ನಡೆದರೂ ಪ್ರೋತ್ಸಾಹವಿರಲಿಲ್ಲ. ಆಯಾ ಜಾತಿಗಳವರು ತಮ್ಮ ಜಾತಿಯ ತಮ್ಮ ವೃತ್ತಿಯ, ಬಹುಶಃ ತಮ್ಮ ಸಮಾನರ ಮನೆಗಳಲ್ಲಿ ಮದುವೆಯಾಗುತ್ತಿದ್ದರು. ಪ್ರಾಚೀನ ಕರ್ನಾಟಕದಲ್ಲಿ ಕನ್ಯಾ ಶುಲ್ಕ ಮತ್ತು ವರದಕ್ಷಿಣೆಗಳನ್ನು ಕೊಡುವ ಅಥವಾ ತೆಗೆದುಕೊಳ್ಳುವ ಪದ್ಧತಿಯಿತ್ತೇ ಎಂಬುದನ್ನು ತಿಳಿಯಲು ಶಾಸನಗಳ ಕೊರತೆಯಿದೆ. ಪ್ರಾಚೀನ ಕರ್ನಾಟಕದಲ್ಲಿ ಬಹುಪತ್ನಿತ್ವದ ಪದ್ಧತಿಯು ತುಂಬಾ ಪ್ರಬಲವಾಗಿತ್ತು. ರಾಜ–ಮಹಾರಾಜರಂತೂ ಯಾವಾಗಲೂ 'ಬಹುವಲ್ಲಭ'ರು. ರಾಜರಲ್ಲದೆ ಉಳಿದವರಲ್ಲಿಯೂ ಬಹುಪತ್ನಿತ್ವದ ಸಂಪ್ರದಾಯವಿದ್ದಿತು. ಆಯಾ ವರ್ಣದವರು ತಮ್ಮ ವರ್ಣದ ಒಬ್ಬ ಸ್ತ್ರೀಯನ್ನು ಮದುವೆ ಮಾಡಿಕೊಳ್ಳುತ್ತಿದ್ದರು. ಅವಳೇ ಅವನ ಧರ್ಮಪತ್ನಿ. ಅವನು ಬಯಸಿದರೆ ಕೆಳವರ್ಗಕ್ಕೆ ಸೇರಿದ ಸ್ತ್ರೀಯರನ್ನು ಮದುವೆ ಮಾಡಿಕೊಳ್ಳಬಹುದಾಗಿತ್ತು. ಹೀಗಾಗಿ ಬ್ರಾಹ್ಮಣನು ತನ್ನ ಧರ್ಮಪತ್ನಿಯಲ್ಲದೆ ಕೆಳಗಿನ ವರ್ಣಗಳಿಂದ ಮೂವರನ್ನು, ಕ್ಷತ್ರಿಯನು ಇಬ್ಬರನ್ನೂ, ವೈಶ್ಯನು ಒಬ್ಬಳನ್ನು ಮದುವೆಯಾಗಬಹುದಾಗಿತ್ತು. ಶೂದ್ರನು

ಮಾತ್ರ ಎರಡನೆಯ ಪತ್ನಿಯನ್ನು ಪಡೆಯುವಂತಿರಲಿಲ್ಲ. ಇದು ಆ ಕಾಲದ ಸಾಮಾಜಿಕ ಮೌಲ್ಯವಾಗಿತ್ತು.

"ಗೃಹ್ಯ ಸೂತ್ರಗಳ ಪ್ರಕಾರ ಮದುವೆ ಎನ್ನುವುದು ಗಂಡು ಮತ್ತು ಹೆಣ್ಣುಗಳು ಮಾಡಿಕೊಂಡ ಒಂದು ಕರಾರು ಅಲ್ಲ. ಅದು ಆತ್ಮ ಸಂಬಂಧಿಯಾದ ಒಂದು ಪವಿತ್ರ ಮಿಲನ"[೪] ಎಂದು ಭಾವಿಸಲಾಗಿತ್ತು. ಕರ್ನಾಟಕದ ಶಾಸನಗಳು ಆದರ್ಶ ದಾಂಪತ್ಯವನ್ನು ಎತ್ತಿ ಹಿಡಿಯುತ್ತದೆ. ಹೆಂಡತಿಯು ಗಂಡನ ವಿಷಯದಲ್ಲಿ ಏಕನಿಷ್ಠೆಯನ್ನು ತಾಳಬೇಕೆಂದು ಒತ್ತಿ ಹೇಳುವುದರ ಜೊತೆಗೆ ಗಂಡನೂ ಸಹ ತನ್ನ ಪತ್ನಿಯ ವಿಷಯದಲ್ಲಿ ಅಷ್ಟೇ ಪ್ರಮಾಣಿಕನಾಗಿರಬೇಕೆಂದು ಹೇಳುತ್ತವೆ. ಸ್ತ್ರೀಯಾದವಳು ಹುಟ್ಟಿದ ಕುಲ ಮತ್ತು ಕೊಟ್ಟ ಕುಲಗಳೆರಡರ ಮರ್ಯಾದೆಯನ್ನು ಕಾಪಾಡಬೇಕು ಎಂಬುದು ಆ ಕಾಲದ ಆದರ್ಶವಾಗಿದ್ದಿತು. ಸತಿಯು ಮಡಿದಾಗ ಪತಿಗೆ ಬಹು ದುಃಖವಾಗಿ, ಅವಳ ಸ್ಮಾರಕವಾಗಿ ಒಂದು ಕಲ್ಲನ್ನು ನಿಲ್ಲಿಸಿದ ಅಪೂರ್ವ ನಿದರ್ಶನ ಕೊಲ್ಲಾಪುರ ಜಿಲ್ಲೆಯ 'ಸಾಂಗ್ಲಿ'ಯ ಹಳ್ಳಿಯ ಒಂದು ಹೊಲದಲ್ಲಿ ಶಿಲ್ಪವಿರುವ ಒಂದು ಕಲ್ಲು ದೊರಕಿದೆ. ಅದರ ಮೇಲೆ ಚಿತೆಯ ಮೇಲೆ ಮಲಗಿರುವ ಒಬ್ಬ ಸ್ತ್ರೀಯ ಚಿತ್ರವಿದ್ದುದರಿಂದ ಅದು ಮಾಸ್ತಿಕಲ್ಲು ಎಂಬ ಭಾವನೆ ಬಂದು ಅದರ ಮೇಲೆ ಒಂದು ದೇವಾಲಯವೂ ಬೆಳೆಯಿತು.

ಗೃಹಿಣಿಯಾದವಳಿಗೆ 'ಮಹಾಸತಿ' ಎಂದು ಕರೆಯಿಸಿಕೊಳ್ಳುವುದರಲ್ಲಿ ಎಷ್ಟು ಹೆಮ್ಮೆಯೋ 'ಪುತ್ರವತಿ' ಎಂದು ಕರೆಯಿಸಿಕೊಳ್ಳುವುದರಲ್ಲಿಯೂ ಅಷ್ಟೇ ಹೆಮ್ಮೆ. ಅಂತೆಯೇ ತಾಯಿಯೇ ಮಗುವಿನ ಮೊದಲ ಉತ್ತಮ ಬೋಧಕಳೆಂದು ಕೆಲವು ಶಾಸನಗಳು ತಿಳಿಸುತ್ತವೆ.

ಭಾರತೀಯ 'ಮದುವೆ' ವ್ಯವಸ್ಥೆಯಲ್ಲಿ 'ವಿಧವೆ'ಯರ ಪಾಲು ಅಧಿಕವಾಗಿದೆ. ಗಂಡ ಮಡಿದಾಗ ಅವರು ತಮ್ಮ ಗಂಡಂದಿರೊಡನೆ 'ಸಹಗಮನ' ಮಾಡಬೇಕಾಗಿತ್ತು, ಇಲ್ಲವೇ ಉಳಿದ ತಮ್ಮ ಜೀವನವನ್ನು ಕಠಿಣ ವ್ರತಗಳಲ್ಲಿ ಕಳೆಯಬೇಕಾಗಿತ್ತು. ಇದು ಅಂದಿನ ಸಾಮಾಜಿಕ ಮೌಲ್ಯವಾಗಿತ್ತು. ವಿಧವೆಯರ ಪುನರ್ವಿವಾಹಕ್ಕಾಗಲಿ, ನಿಯೋಗಕ್ಕಾಗಲಿ ಅವಕಾಶವಿರಲಿಲ್ಲ ಎಂಬುದು ಶಾಸನಗಳಲ್ಲಿ ಮೂಡಿಬಂದ ಅಂದಿನ ಸ್ಥಿತಿಗತಿಯಿಂದ ತಿಳಿದುಬರುತ್ತದೆ.

ಜೈನಧರ್ಮದಲ್ಲಿ ಹಲವಾರು ಸ್ತ್ರೀಯರು ಸನ್ಯಾಸಿನಿಯರಾಗಿ ಸನ್ಯಸನ ವಿಧಿಯಿಂದ ಮರಣ ಹೊಂದಿರುವುದನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ. ಪ್ರಾಚೀನ ಕರ್ನಾಟಕದ ಸ್ತ್ರೀಯರಲ್ಲಿ ಜೈನಧರ್ಮದ ಅನುಯಾಯಿಗಳು ಹೆಚ್ಚು ಜಾಗೃತರಾಗಿದ್ದಂತೆ, ಧಾರ್ಮಿಕ ವಿಷಯಗಳಲ್ಲಿ ಇತರರಿಗಿಂತ ಹೆಚ್ಚಾಗಿ ಭಾಗವಹಿಸಿದಂತೆ ಕಾಣುತ್ತದೆ. ಅತ್ತಿಮಬ್ಬೆ, ಶಾಂತಲೆಯರಿಬ್ಬರೂ ಪ್ರಾಚೀನ ಕರ್ನಾಟಕದ ಹೆಮ್ಮೆಯಾಗಿದ್ದು, ಅವರು ಜೈನಧರ್ಮದ ಕೊಡುಗೆಗಳು. ಆದರೆ ಹಿಂದೂ ಧರ್ಮದಲ್ಲಿ ಮಾತ್ರ ಜೈನಧರ್ಮದಲ್ಲಿದ್ದಂತೆ ಹೆಚ್ಚು ಸಂಖ್ಯೆಯಲ್ಲಿ ಸನ್ಯಾಸಿನಿಯರು ಇರಲಿಲ್ಲವೆಂಬುದನ್ನು ಅಂದಿನ ಶಾಸನಗಳು ಪ್ರಚುರಪಡಿಸುತ್ತವೆ. ಲಕ್ಕುಂಡಿ ಶಾಸನವು ಅತ್ತಿಮಬ್ಬೆಯ ಜೀವನ ವೃತ್ತಾಂತವನ್ನು ಸಾರುತ್ತದೆ. ಅವರ ವ್ಯಕ್ತಿತ್ವ ಸ್ತ್ರೀಯರಿಗೆ ಸಾಮಾಜಿಕ ಮೌಲ್ಯವಾಗಿತ್ತು. ವೈಯಕ್ತಿಕವಾದ ತಪಸ್ಸು, ಕಠೋರ ನಿಯಮಾನುಸರಣೆ ಹಾಗೂ ಜೈನಧರ್ಮದಲ್ಲಿ ಅದ್ಭುತವಾದ ವಿಶ್ವಾಸವನ್ನು ಹೊಂದಿದ್ದಳು. ಜೈನಧರ್ಮದ ಏಳಿಗೆಗಾಗಿ ಅವಳು ತುಂಬಾ ಶ್ರಮಪಡುತ್ತಾಳೆ. ಹಲವಾರು ತ್ಯಾಗಗಳನ್ನು ಮಾಡಿದ್ದಾಳೆ. ಇದರೊಂದಿಗೆ ಕನ್ನಡ ಸಾಹಿತ್ಯಕ್ಕಾಗಿ ಅವಳು ಮಾಡಿರುವ ಸೇವೆ ಅನಿರ್ವಚನೀಯವಾದುದು. ಅವಳು ತಾನು ಜೀವಿಸಿದ್ದ ಕಾಲದಲ್ಲಿಯೇ ಒಬ್ಬ ಅದ್ಭುತ ವ್ಯಕ್ತಿಯಾಗಿದ್ದರು. ಅದಲ್ಲದೇ ೨೦೦–೩೦೦ ವರ್ಷಗಳವರೆಗೆ ಕರ್ನಾಟಕದ ಜನಜೀವನದ ಮೇಲೆ ತುಂಬ ಪ್ರಭಾವವನ್ನು ಬೀರಿದರು. ತಪಸ್ಸು, ಔದಾರ್ಯ, ಸತಿತ್ವಗಳಿಗೆ ಸಂಕೇತವಾಗಿ ಪರಿಣಮಿಸಿದರು.

ಇಷ್ಟು ಪ್ರಭಾವಶಾಲಿಯಾದ ಅತ್ತಿಮಬ್ಬೆಯ ಪ್ರಭಾವವು ಮುಂದಿನ ಪೀಳಿಗೆಯ ಮೇಲೆ ಬಿದ್ದಿರುವುದಕ್ಕೆ ಶಾಸನಾಧಾರಗಳೂ, ಕಾವ್ಯಾಧಾರಗಳೂ ಹೇರಳವಾಗಿವೆ. ಶಾಸನಗಳಲ್ಲಿ ಅತ್ತಿಮಬ್ಬೆಯನ್ನು 'ದಾನಚಿಂತಾಮಣಿ' ಎಂದು ಕೊಂಡಾಡಲಾಗಿದೆ. ಕ್ರಿ.ಶ. ೧೧೮೨ರ ಶಾಸನವೊಂದರಲ್ಲಿ ಅತ್ತಿಮಬ್ಬೆಯ ಹೆಸರಿಸಿ "ಗಿರಿಸುತೆಗೆ ಜಹ್ನುಕನ್ನೆಗೆ ಧರಣೀ ಸುತೆಗತ್ತಿ ಮೆಟ್ಟಿಗನುಪಮಗುಣದೊಳೊರೆಯೆನಲಿಂತೀ ಸಕಳೋರ್ವರೆಯೊಳ್ ಚಾಚವ್ವೆ ಶೀಲವತಿ ನೆಗಳ್ದಳ್"[೨] ಎಂಬ ಉಲ್ಲೇಖವಿದೆ. "ಪ್ರಾಚೀನ ಕರ್ನಾಟಕದ ಸಾಮಾಜಿಕ ಇತಿಹಾಸದಲ್ಲಿ ಕೆಲವು ಸನ್ಯಾಸಿ ವರ್ಗದ ವ್ಯಕ್ತಿಗಳನ್ನು ಬಿಟ್ಟರೆ ಮುಂದಿನ ಪೀಳಿಗೆಯ ಮೇಲೆ ಇಷ್ಟು ಪ್ರಭಾವ ಬೀರಿದ

ವ್ಯಕ್ತಿಗಳು ಜೈನರಲ್ಲಿ ಇಲ್ಲವೇ ಇಲ್ಲವೆನ್ನಬಹುದು"[೫] ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ನಮಗೆ ಅತ್ತಿಮಬ್ಬೆಯ ವ್ಯಕ್ತಿತ್ವದ ಪ್ರಖರತೆಯ ಅರಿವಾಗುತ್ತದೆ (೨೦೧೬, ೪೭೮).

ಕರ್ನಾಟಕದ ಉನ್ನತ ವರ್ಗದ ಸ್ತ್ರೀಯರು ದೇವಾಲಯಗಳನ್ನು ನಿರ್ಮಿಸಿ, ದತ್ತಿಯನ್ನು ನೀಡಿದ್ದಾರೆ. ವಿದ್ಯಾಭ್ಯಾಸಕ್ಕೆ ಧನಸಹಾಯವನ್ನು ಮಾಡಿದ್ದಾರೆ. ಬೇರೆ ಬೇರೆ ಪ್ರದೇಶಗಳಲ್ಲಿ ರಾಜ್ಯಭಾರವನ್ನು ಮಾಡಿದ್ದಾರೆ. ಯುದ್ಧಗಳಲ್ಲಿ 'ಕಲಿ'ತನವನ್ನು ಮೆರೆದಿದ್ದಾರೆ. ಆದರೆ ಕೆಳವರ್ಗದ ಸ್ತ್ರೀಯರ ವಿಷಯವಾಗಿ ನಮಗೆ ಹೆಚ್ಚಿನ ಅಂಶಗಳು ತಿಳಿದುಬಂದಿಲ್ಲ. ಯಾವ ಶಾಸನದಲ್ಲಿಯೂ ಸ್ತ್ರೀಯರನ್ನು ಅವಹೇಳನ ಮಾಡಿಲ್ಲ. ಅವರನ್ನು ದಾಸಿಯರಂತೆ ಕಡೆಗಣಿಸಿಲ್ಲ.

ದೇವದಾಸಿಯರನ್ನು, ವೇಶ್ಯಾವೃತ್ತಿಯನ್ನು ಅವಲಂಬಿಸಿದ್ದ ಸಾಮಾನ್ಯ ವೇಶ್ಯೆಯರನ್ನು ಕನ್ನಡ ಶಾಸನಗಳು ಗೌರವದಿಂದ ಕಂಡಿವೆ. ಇನ್ನು ಅನೇಕ ಪುರುಷರು ತಮ್ಮನ್ನು ತಾವು 'ವೇಶ್ಯಾಭುಜಂಗ'ರೆಂದೂ, 'ವಿಟಚಕ್ರವರ್ತಿ'ಗಳೆಂದೂ ಕರೆದುಕೊಳ್ಳುತ್ತಿದ್ದರು ಎಂಬುದಕ್ಕೆ ಹಲವಾರು ನಿದರ್ಶನಗಳು ಇತಿಹಾಸದಲ್ಲಿ ದೊರೆಯುತ್ತವೆ. ಬಹುಶಃ ಧರ್ಮಪತ್ನಿಯ ಜೊತೆಯಲ್ಲಿ ಒಬ್ಬ ವೇಶ್ಯೆಯೊಡನೆ ಸಂಪರ್ಕವಿಟ್ಟುಕೊಳ್ಳುವುದು ಅಂದಿನ ಜನರಿಗೆ ಅವಮಾನಕರವಾಗಿರಲಿಲ್ಲ, ಹೆಮ್ಮೆಯ ವಿಷಯವಾಗಿತ್ತು. ವೇಶ್ಯೆಯರ ಮಕ್ಕಳಿಗೆ ಸಮಾಜದಲ್ಲಿ ಸ್ಥಾನವಿತ್ತೆಂದು ಕಾಣಿಸುತ್ತದೆ. ವೇಶ್ಯಾವೃತ್ತಿಯನ್ನು ನಡೆಸಲು ಸರ್ಕಾರದ ಒಪ್ಪಿಗೆ ಪಡೆಯಬೇಕಾಗಿತ್ತು. ಅವರ ಮೇಲೆ ಸರ್ಕಾರದ ತೆರಿಗೆಯನ್ನು ಹಾಕಲಾಗುತ್ತಿತ್ತು.

ಕ್ರಿ.ಶ. ೧೧೫೦ ರವರೆಗೆ ಕನ್ನಡದಲ್ಲಿ ಯಾವ ಸ್ತ್ರೀಯೂ ಗ್ರಂಥ ರಚನೆ ಮಾಡಿರುವುದರ ಕುರಿತು ಸ್ಪಷ್ಟ ದಾಖಲೆಗಳು ಯಾವುವೂ ಇಲ್ಲ. 'ಕಂತಿ' ಎಂಬ ಕವಯಿತ್ರಿಯು ಹನ್ನೆರಡನೆಯ ಶತಮಾನದ ಆರಂಭದಲ್ಲಿದ್ದ ಅಭಿನವಪಂಪನೆಂದು ಖ್ಯಾತರಾಗಿದ್ದ ನಾಗಚಂದ್ರನ ಸಮಕಾಲಿನಗಳೆಂದು ಕೆಲವು ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆಯಾದರೂ ದಾಖಲೆಗಳ ಕೊರತೆಯಿರುವುದರಿಂದ ಅದು ಕೇವಲ ಕತೆ ಅನ್ನಿಸುತ್ತದೆ. ಸ್ತ್ರೀಯರಿಗೆ ದೊರಕುತ್ತಿದ್ದ ವಿದ್ಯಾಭ್ಯಾಸವನ್ನು ನೋಡಿದರೆ ಅವರು ಸಾಹಿತ್ಯವನ್ನು ಸೃಷ್ಟಿಸಿರುವುದು ತೀರ ಅಸಂಭವವೆನಿಸುತ್ತದೆ. ಹನ್ನೆರಡನೆಯ ಶತಮಾನದ ಮಧ್ಯದಲ್ಲಿ ದುಗ್ಗಳೆ, ಅಕ್ಕಮಹಾದೇವಿ

ಮುಂತಾದ ವಚನಕಾರ್ತಿಯರು ಬರುವವರೆಗೆ ಸ್ತ್ರೀಯರು ಹೆಚ್ಚಾಗಿ ಸಾಹಿತ್ಯ ಕೃಷಿಗೆ ಕೈ ಹಾಕಲಿಲ್ಲವೆಂದು ಕಾಣಿಸುತ್ತದೆ.

ಕರ್ನಾಟಕದ ಶಾಸನಗಳಲ್ಲಿ ಒಂದೆರಡು ಕಡೆ ವರ್ಣಗಳ ಹೆಸರು ಬಂದಿದೆ. ರಾಜನು ವರ್ಣಾಶ್ರಮ ಧರ್ಮವನ್ನು ಸಂರಕ್ಷಿಸುವುದು ಅವನ ಪವಿತ್ರ ಕರ್ತವ್ಯಗಳಲ್ಲಿ ಒಂದು ಎಂದು ಭಾವಿಸಲಾಗಿತ್ತು. ಋಗ್ವೇದದ ಅನೇಕ ಮಂತ್ರಗಳಲ್ಲಿ ಸಮಾಜವನ್ನು ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರರೆಂದು ವಿಭಾಗಿಸಿರುವುದು ಕಂಡುಬರುತ್ತದೆ. ಜಾತಿ ವ್ಯವಸ್ಥೆಯ ಮೂಲ ಬಹು ಪ್ರಾಚೀನವಾದುದು.

"ಶಿಕಾರಿಪುರದ ಈಚಿನ ಒಂದು ಶಾಸನದ ಪ್ರಕಾರ ಮುಕ್ಕಣ್ಣ ಕದಂಬನ ಕಾಲದಲ್ಲಿ ದಕ್ಷಿಣದಲ್ಲಿ ಬ್ರಾಹ್ಮಣರೇ ಇರಲಿಲ್ಲ. ಅವರಿಗಾಗಿ ಹುಡುಕಿ ಇಲ್ಲಿ ಯಾರೂ ಇಲ್ಲದುದನ್ನು ಕಂಡು ಮುಕ್ಕಣ್ಣ ಕದಂಬನು ಉತ್ತರಕ್ಕೆ ಹೋಗಿ ಅಹಿಚ್ಛತ್ರ ಅಗ್ರಹಾರದಿಂದ ಅನೇಕ ಬ್ರಾಹ್ಮಣ ಸಂಸಾರಗಳನ್ನು ಕರೆತಂದು ಶಿವಮೊಗ್ಗ ಜಿಲ್ಲೆಯ ಸ್ಥಾನ ಕುಂದೂರ್ ಅಥವಾ ತಾಳಗುಂದದಲ್ಲಿ ಅವರು ನೆಲೆಸುವಂತೆ ಮಾಡಿದನು" ಎಂದು ಡಾ. ಎಂ. ಚಿದಾನಂದಮೂರ್ತಿಯವರು ತಮ್ಮ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನ ಬರಹದಲ್ಲಿ (೨೦೧೬, ಪು. ೪೮೦) ದಾಖಲಿಸಿದ್ದಾರೆ. ಹನ್ನೊಂದನೆಯ ಶತಮಾನದಲ್ಲಿ ದಕ್ಷಿಣದ ದ್ರಾವಿಡ ದೇಶದಿಂದ ಮುನ್ನೂರ್ವರು ಬ್ರಾಹ್ಮಣರು ವಲಸೆ ಬಂದು ಕರ್ನಾಟಕದಲ್ಲಿ ನೆಲೆಸಿದ ವಿಷಯವು ಶಾಸನವೊಂದರಲ್ಲಿದೆ. ಪ್ರಾಚೀನ ಕರ್ನಾಟಕದಲ್ಲಿ ಬ್ರಾಹ್ಮಣರು ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಜಾತಿಗಳಲ್ಲೆಲ್ಲ ಬ್ರಾಹ್ಮಣ ಜಾತಿಯೇ ಉತ್ತಮವಾದುದು ಎಂಬುದು ಪಂಪನ ಹೇಳಿಕೆಯಾಗಿತ್ತು. ಹಲವಾರು ಶಾಸನಗಳಲ್ಲಿಯೂ ಇಂತಹ ಉಕ್ತಿಗಳು ಬಂದಿರುವುದನ್ನು ಕಾಣುತ್ತೇವೆ.

ಬ್ರಾಹ್ಮಣರು ರಾಜಕೀಯ ಕ್ಷೇತ್ರದಲ್ಲಿಯೂ ಬಹು ಮುಖ್ಯರಾಗಿದ್ದರು. ರಾಜರು ನೇಮಿಸಿಕೊಂಡಿದ್ದ ಹಲವು ಮಂತ್ರಿಗಳು ಬ್ರಾಹ್ಮಣರಾಗಿದ್ದರು. ರಾಜ್ಯದ ಅಭಿವೃದ್ಧಿಗೆ ಬಹುವಾಗಿ ಕಾರಣರಾಗಿದ್ದರು. ಬ್ರಾಹ್ಮಣರ ಮೇಧಾ ಶಕ್ತಿಯನ್ನು, ಶಾಸ್ತ್ರ ಪರಿಜ್ಞಾನವನ್ನು ರಾಜರು ಒಳ್ಳೆಯ ಆಡಳಿತಕ್ಕಾಗಿ ಬಳಸಿಕೊಂಡಿದ್ದರು. ಶಾಸನಗಳು ಬ್ರಾಹ್ಮಣರನ್ನು 'ಷಟ್ಕರ್ಮನಿರತರು' ಎಂದು ಬಣ್ಣಿಸಿವೆ. ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ-ಇವೇ ಆ

ಷಟ್ಕರ್ಮಗಳು. ಯಾಗಗಳಲ್ಲಿ ಪ್ರಾಣಿಗಳನ್ನು ಬಲಿಕೊಡುತ್ತಿದ್ದ ಸಂಪ್ರದಾಯದ ಸೂಚನೆಗಳು ಕೆಲವು ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಕಂಡುಬರುತ್ತವೆ. ಸು. ೮೦೦ರ ಶಾಸನವೊಂದರಲ್ಲಿ ಬೆಣ್ಣಮ್ಮ ಸೋಮಯಾಜಿಗಳು ಐನೂರ್ವರು ಬ್ರಾಹ್ಮಣರಿಗೆ ಕೊಟ್ಟ ದಾನದಲ್ಲಿ 'ಪಶುವಿಧಿ'ಯ ಹೆಸರಿದೆ. ಇಲ್ಲಿಯ ಪಶುವಿಧಿ ಎಂಬುದು ಬಲಿಯನ್ನು ಸೂಚಿಸುತ್ತದೆ. ಕ್ರಿ.ಶ. ೧೦೩೧ ರಲ್ಲಿ ಕನ್ನಡ ಪಂಚತಂತ್ರವನ್ನು ಬರೆದ ದುರ್ಗಸಿಂಹನು ಯಜ್ಞಗಳಲ್ಲಿ 'ಪ್ರಾಣಿಬಲಿ' ಕೊಡುವುದನ್ನು ಪ್ರಸ್ತಾಪಿಸಿದ್ದಾನೆ. ಬಸವಣ್ಣನವರು ತಮ್ಮ ವಚನವೊಂದರಲ್ಲಿ ಯಜ್ಞಕ್ಕಾಗಿ ಕೊಂಡೊಯ್ಯುತ್ತಿದ್ದ ಹೋತವನ್ನು ಕುರಿತು ಉಲ್ಲೇಖಿಸಿದ್ದಾರೆ. ಸು. ೪೫೦ರ ತಾಳಗುಂದ ಶಾಸನದಲ್ಲಿಯೂ ಪಶುಬಲಿಯ ಸೂಚನೆ ಕಂಡು ಬರುತ್ತದೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರತಿಷ್ಠೆಯನ್ನು ಪಡೆದು ಎಲ್ಲರಿಂದಲೂ ಗೌರವವನ್ನು ಸಂಪಾದಿಸಿದ್ದ ಬ್ರಾಹ್ಮಣರು ಜೈನಧರ್ಮ ಮತ್ತು ಜೈನಮುನಿಗಳಿಗೆ ಗೌರವವನ್ನು ತೋರಿಸಿದ್ದಾರೆ.

ಚಿತ್ರಕಲೆಯೇ ಎಲ್ಲ ಕಲೆಗೂ ಮೂಲಭೂತವಾದ ಕಲೆ. ಶಿಲ್ಪಿಗಳು ಸಾಮಾನ್ಯವಾಗಿ ತಮ್ಮ ಮೂಲಪುರುಷ 'ವಿಶ್ವಕರ್ಮ'ನೆಂದು ಹೇಳಿಕೊಳ್ಳುತ್ತಾರೆ. ಇವರ ಜಾತಿಯ ರಕ್ತದಲ್ಲೇ ಕಲೆಯ ಬೀಜಗಳು ಹುದುಗಿರುತ್ತವೆ! ಶಿಲ್ಪಿಗಳ ಕಲೆಯು ತಲೆಯಿಂದ ತಲೆಗೆ, ತಂದೆಯಿಂದ ಮಗನಿಗೆ ಹರಿದುಕೊಂಡು ಬರುತ್ತಿದ್ದಿತು. ಇವರ ಹೆಸರುಗಳು ಆಚಾರ್ಯ (ರಿ) ಓಟು (ಉಪಾಧ್ಯಾಯ) ಮುಂತಾಗಿ ಕೊನೆಗೊಳ್ಳುತ್ತವೆ. ಶಾಸನಗಳನ್ನು ಕೆತ್ತುತ್ತಿದ್ದ ಶಿಲ್ಪಿಗಳನ್ನು ಕೆಲವು ಶಾಸನಗಳಲ್ಲಿ 'ಕಲ್ಕುಟಿಕ'ರೆಂದೂ ಕರೆದಿರುವುದುಂಟು. ಕ್ರಿ.ಶ. ೧೧೧೬ರ ಒಂದು ಶಾಸನದಲ್ಲಿ ಶಿಲ್ಪಿಗಳು ತಮ್ಮದೇಯಾದ ಸಂಘಗಳನ್ನು ಸ್ಥಾಪಿಸಿಕೊಂಡಿರುವುದರ ಬಗ್ಗೆ ಉಲ್ಲೇಖವಿದೆ. "ಶಿಲ್ಪಿಗಳು ಇತರರ ಹಣದಿಂದ ದೇವಸ್ಥಾನವನ್ನು ಕಟ್ಟುವರೇ ಹೊರತು, ತಾವೇ ಹಣವನ್ನು ವ್ಯಯಿಸಿ ಕಟ್ಟುವವರಲ್ಲ ಎಂಬ ಕಳಂಕವನ್ನು ಹೋಗಲಾಡಿಸುವುದಕ್ಕಾಗಿ ಭಾವಣ, ರಾವಣ ಎಂಬ ಇಬ್ಬರು ಶಿಲ್ಪಿಕುಲದ ಸಹೋದರರು 'ಕುಸುಮೇಶ್ವರ' ದೇವಸ್ಥಾನವನ್ನು ಕಟ್ಟಿಸಿದರೆಂದು ಒಂದು ಶಾಸನವು ಹೇಳುತ್ತದೆ"[೮]. ಇದು ಆ ಕಾಲದ ಜನರು ತಮ್ಮ ಕುಲ, ವಂಶದ ಮೇಲಿನ ಕಳಂಕವನ್ನು ಯಾವ ಕಾರಣಕ್ಕೂ ಸಹಿಸಿಕೊಳ್ಳುವಂತಿರಲಿಲ್ಲ. ಕಳಂಕರಹಿತ ಜೀವನ ನಡೆಸುವುದು

ಅವರ ಹೆಬ್ಬಯಕೆಯಾಗಿತ್ತು. ಅವರ ಸಾಮಾಜಿಕ ಜೀವನಕ್ಕೆ ಇದು ಅತ್ಯುತತಮ ಉದಾಹರಣೆಯಾಗಿಯೂ ಅವರ ಸಾಮಾಜಿಕ ಮೌಲ್ಯವಾಗಿಯೂ ಕಂಡುಬರುತ್ತದೆ.

ರೈತರು ತಾವು ಬೆಳೆದುದರಲ್ಲಿ ಒಂದು ಭಾಗವನ್ನು ತಮ್ಮ ಉಪಕರಣಗಳನ್ನು ಸಿದ್ಧಪಡಿಸಿಕೊಟ್ಟ ಅಥವಾ ಸರಿಪಡಿಸಿಕೊಟ್ಟ ವೃತ್ತಿಕಾರರಿಗೆ ಕೊಡುತ್ತಿದ್ದರು. ಅದನ್ನು 'ಆಯ'ದ ಪದ್ಧತಿಯೆಂದು ಕರೆಯುತ್ತಾರೆ. ಈ ಪದ್ಧತಿಯು ಪ್ರಾಚೀನ ಕರ್ನಾಟಕದಲ್ಲಿದ್ದಿತೆಂಬುದಕ್ಕೆ ಒಂದು ಶಾಸನಾಧಾರವಿದೆ. ಕ್ರಿ.ಶ. ೧೦೩೫ರ ಒಂದು ಶಾಸನದಲ್ಲಿ ಅಕ್ಕಸಾಲಿಯ ಆಯದ ಹೆಸರಿದೆ ("ಅಕ್ಕಸಾಲಿಯಾಯೆ ಉಪ್ಪೊಳಗಾಗಿ ಧಾನ್ಯಂಗಳೊಳೆಲ್ಲಂ") ಎಂದಿದೆ. ಇಲ್ಲಿ ಅಕ್ಕಸಾಲಿಗ ಬಡಗಿಯ ಅಥವಾ ಕಮ್ಮಾರನ ಕೆಲಸಗಳನ್ನು ಮಾಡುತ್ತಿದ್ದಿರಬೇಕು. ಕಾರಣ, ಪ್ರತಿ ವರ್ಷ ಅಥವಾ ವರ್ಷದುದ್ದಕ್ಕೂ ಅಕ್ಕಸಾಲಿಗನ ಹತ್ತಿರ ಚಿನ್ನದ ಕೆಲಸವನ್ನು ಮಾಡಿಸಲಾಗದು; ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಬಡಗಿ, ಕಮ್ಮಾರರಿಗೆ ಆಯವನ್ನು ಕೊಟ್ಟಂತೆ ಅಕ್ಕಸಾಲಿಗಳಿಗೆ ಕೊಡುವುದಿಲ್ಲ.

ಊರಿನ ಹೊರಗೆ ವಾಸಿಸುತ್ತಿದ್ದವರು ಹರಿಜನರು. ಅವರು ಊರಿನ ಸತ್ತ ದನಗಳನ್ನು ಎತ್ತುವುದು, ಅದರಿಂದ ಜನರಿಗೆ ಚರ್ಮದ ವಸ್ತುಗಳನ್ನು ಮಾಡಿಕೊಡುತ್ತಿದ್ದರು. ಅವರನ್ನು 'ಸಮ್ಮಗಾಱ' ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಬಾದಾಮಿಯ ಮಹಾಜನರು ಆ ಊರಿನ ಚರ್ಮಕಾರನ ತೆರಿಗೆಗಳನ್ನು ತೆಗೆದುಹಾಕಿದಂತೆ ಒಂದು ಶಾಸನವು ಹೇಳುತ್ತದೆ.

ಭಾರತದಲ್ಲಿ ಧರ್ಮದ ಕಟ್ಟುಪಾಡುಗಳಿಗಿಂತಲೂ ಜಾತಿಯ ಕಟ್ಟುಪಾಡುಗಳೇ ಹೆಚ್ಚು ಬಿಗಿಯಾಗಿದ್ದವು. ಪ್ರತಿಯೊಬ್ಬರೂ ತಮ್ಮ ಜಾತಿಯ ನಿಯಮಗಳನ್ನು ಪರಿಪಾಲಿಸಲೇಬೇಕಾಗಿತ್ತು. ಇಲ್ಲದಿದ್ದರೆ ಇತರರ ಉದಾಸೀನಕ್ಕೆ ಗುರಿಯಾಗಬೇಕಾಗುತ್ತಿತ್ತು. ಅನೇಕ ಹಿಂದುಗಳ ಪ್ರಕಾರ ಜಾತಿಯ ನಿಯಮಗಳ ಪರಿಪಾಲನೆಯೇ ಅತ್ಯುತ್ತಮ ಧಾರ್ಮಿಕ ಜೀವನ ಎಂಬ ಭಾವನೆಯಿತ್ತು. ಜಾತಿಯ ಕಟ್ಟುಪಾಡುಗಳನ್ನು ಮುರಿಯುವುದೇ ಪಾಪವೆಂದು ನಂಬಿಸಲಾಗಿತ್ತು. ಇದನ್ನು ಕೆಲ ಶಾಸನಗಳಿಂದ ಮನದಟ್ಟು ಮಾಡಿಕೊಳ್ಳಬಹುದು. ಜಾತಿಯ ಅಥವಾ ಸಮಾಜದ ಭಯವು ವ್ಯಕ್ತಿಗೆ ಇದ್ದೇ ಇರುತ್ತಿತ್ತು. ಎಷ್ಟೋ ಸಾರಿ ದಾನ ಕಾರ್ಯದಲ್ಲಿ ಭಾಗವಹಿಸಲು ಇಷ್ಟವಿಲ್ಲದಿದ್ದರೂ ಸಮಾಜದ ಬಹಿಷ್ಕಾರಕ್ಕೆ ಹೆದರಿ ಒಪ್ಪಿಕೊಳ್ಳುತ್ತಿದ್ದರು. ಆಯಾ ಜಾತಿಗಳವರು ತಮ್ಮ ತಮ್ಮ

ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದದ್ದರಿಂದ ತಮ್ಮ ತಮ್ಮ ವೃತ್ತಿಗಳಲ್ಲಿ ಕೌಶಲ್ಯವನ್ನು ಬೆಳೆಸಿಕೊಂಡು ಬರಲು, ಉಳಿಸಿಕೊಳ್ಳಲು ಸಾಧ್ಯವಾಯಿತು.

ಬದುಕು ಕ್ಷಣಿಕವಾದುದು. ಕಾಲಚಕ್ರ ಉರುಳುತ್ತಾ ಹೋಗುತ್ತದೆ. ಕಾರಣ, ಜೀವನದಲ್ಲಿ ದಾನ, ಧರ್ಮ ಮಾಡುತ್ತ ಸಾಗಬೇಕು ಎಂಬುದು ಪ್ರಾಚೀನ ಕನ್ನಡಿಗರ ಮನಸ್ಸಿನಲ್ಲಿ ಬೇರೂರಿದ್ದ ಕೆಲವು ಭಾವನೆಗಳು. ಇಲ್ಲಿ 'ಧರ್ಮ' ಎಂದರೆ ಸಂಕುಚಿತ ಅರ್ಥವಿರದೇ ವಿಶಾಲವಾದ ಅರ್ಥವನ್ನು ಹೊಂದಿದೆ. ಅಂದರೆ ಎಲ್ಲರಿಗೂ ಸಮಾನವಾದ, ಎಲ್ಲ ಧರ್ಮಗಳೂ ಒತ್ತಿ ಹೇಳುವ ದಾನ, ಕೆರೆಯನ್ನು ಕಟ್ಟಿಸುವುದು, ದೇವಸ್ಥಾನ ನಿರ್ಮಾಣ ಮಾಡುವುದು... ಪುಣ್ಯಾರ್ಜನೆಗಾಗಿ ರಾಜರೂ, ಶ್ರೀಮಂತರೂ ಉದಾರವಾಗಿ ದತ್ತಿಗಳನ್ನು ನೀಡಿರುವುದು ಶಾಸನಗಳಿಂದ ಮನವರಿಕೆಯಾಗುತ್ತದೆ. ಪ್ರಾಚೀನ ಕರ್ನಾಟಕದ ಊರುಗಳ ಹೊರಗೆ 'ಬಹಿರ್ವನ'ಗಳಿದ್ದವೆಂದು ಶಾಸನಗಳು ಉಲ್ಲೇಖಿಸುತ್ತವೆ. ಅವು ಸಾರ್ವಜನಿಕರ ಉಪಯೋಗಕ್ಕಾಗಿ ಇದ್ದ ವಿಹಾರೋದ್ಯಾನಗಳು. ಇಂತವುಗಳನ್ನು ಧರ್ಮಾರ್ಥವಾಗಿ ಬಿಟ್ಟುಕೊಟ್ಟ ಉಲ್ಲೇಖಗಳು ಕೆಲವು ಶಾಸನಗಳಲ್ಲಿವೆ. ಚಟ್ಟುಕದೇವಿ ಎಂಬಾಕೆಯು ಕೆರೆ, ಬಾವಿ, ದೇಗುಲ ಮುಂತಾದವುಗಳ ಜೊತೆಗೆ ಸಾರ್ವಜನಿಕ ಉದ್ಯಾನವನ್ನು ನಿರ್ಮಿಸಿದ್ದಳೆಂದು ಒಂದು ಶಾಸನದಲ್ಲಿ ಉಕ್ತವಾಗಿದೆ.

ಚಕಮಕಿ ಕಲ್ಲಿನಿಂದಲೂ, ಎರಡು ಮರದ ತುಂಡುಗಳನ್ನು ಉಜ್ಜುವುದರಿಂದಲೂ ಬೆಂಕಿ ಉತ್ಪತ್ತಿಯಾಗುತ್ತಿತ್ತು ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಆದರೆ ಪ್ರತಿದಿನವೂ ಪ್ರತಿ ಮನೆಮನೆಯಲ್ಲಿ, ಪ್ರತಿಬಾರಿಯೂ ಹೀಗೆ ಬೆಂಕಿಯನ್ನು ಸೃಷ್ಟಿಸಿಕೊಳ್ಳುತ್ತಿದ್ದರೆಂದು ಊಹಿಸಿಕೊಳ್ಳುವುದು ಕಷ್ಟ. ಹಾಗಾದರೆ ಪ್ರತಿನಿತ್ಯವೂ ಬಳಸುವ ಬೆಂಕಿಗೆ ಏನು ಮಾಡಿಕೊಂಡಿದ್ದರು? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಅದಕ್ಕೆ ಉತ್ತರ–ಅಗ್ಗಿಷ್ಟಿಗೆ ಒಂದೊಂದು ಊರಿನಲ್ಲೂ, ಮಠ–ದೇವಸ್ಥಾನಗಳಂತಹ ಸ್ಥಳಗಳಲ್ಲಿ, ಶ್ರದ್ಧಾವಂತ, ವೈದಿಕರ ಮನೆಗಳಲ್ಲಿ ಬೆಂಕಿಯಾರದೆ ಸದಾ ಜೀವಂತವಾಗಿರುವಂತೆ ನೋಡಿಕೊಳ್ಳಲು ಊರಿನ ಜನರು ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ಅಂತಹ ಸ್ಥಳಗಳಿಂದ ಪ್ರತಿದಿನವೂ ಬೆಂಕಿಯು ಮನೆಯಿಂದ ಮನೆಗೆ ಹೋಗುತ್ತಿದ್ದಿತು. ಊರಿನಲ್ಲಿ ಒಂದೆಡೆ ಅಗ್ನಿಯನ್ನು ಆರದಂತೆ ನೋಡಿಕೊಳ್ಳುತ್ತಿದ್ದರೆಂಬುದಕ್ಕೆ

ಶಾಸನಾಧಾರಗಳಿವೆ. ಅಗ್ಗಿಷ್ಟಿಗೆಯು ಅಂದು ಸಾರ್ವಜನಿಕರ ಸೊತ್ತಾಗಿತ್ತು. ಅಗ್ಗಿಷ್ಟಕೆಯನ್ನು ಆರದೆ ನೋಡಿಕೊಳ್ಳಲು, ಆ ಬೆಂಕಿಯನ್ನು ವಿತರಣೆ ಮಾಡಲು ಪ್ರತ್ಯೇಕವಾಗಿ ಒಬ್ಬ ವ್ಯಕ್ತಿಯನ್ನು ನೇಮಿಸುತ್ತಿದ್ದಂತೆ ಕಾಣುತ್ತದೆ. ಒಂದು ಅಗ್ಗಿಷ್ಟೆಯನ್ನೂ ಒಂದು ಕೋಳಿಯನ್ನು ಇಟ್ಟುಕೊಂಡು, ತನ್ನ ಅಗ್ಗಿಷ್ಟಗಿಯ ಬೆಂಕಿಯಿಂದಲೇ ಊರಿನ ಜನ ಅಡಿಗೆ ಮಾಡಿಕೊಳ್ಳುವುದು, ತನ್ನ ಕೋಳಿಯಿಂದಲೇ ಬೆಳಗಾಗುವುದು ಎಂದು ಜಂಬ ಕೊಚ್ಚಿಕೊಳ್ಳುತ್ತಿದ್ದ ಮುದುಕಿಯ ಕತೆಯನ್ನು ಇಲ್ಲಿ ನೆನೆಯಬಹುದು.

ಊರಿಂದ ಊರಿಗೆ ದೇಶದಿಂದ ದೇಶಕ್ಕೆ ಸಂಚರಿಸುವ ಪ್ರಯಾಣಿಕರಿಗೆ ಅಥವಾ ಪ್ರವಾಸಿಗರಿಗೆ ಬಾಯಾರಿಕೆಯನ್ನು ಇಂಗಿಸಲು ದಾರಿಗಳ ಪಕ್ಕದಲ್ಲಿ 'ಅರವಟ್ಟಿಗೆ'ಗಳು ಇರುತ್ತಿದ್ದವು. ಅವು ಛತ್ರಗಳಿಗೆ, ದೇವಸ್ಥಾನಗಳಿಗೆ ಹೊಂದಿಕೊಂಡಂತೆಯೂ, ಕೆಲವೆಡೆಗಳಲ್ಲಿ ಸ್ವತಂತ್ರವಾಗಿಯೂ ಇರುತ್ತಿದ್ದುಂಟು. ಅಲ್ಲಿ ನೀರೆರೆಯಲು ಬಾಲಕರನ್ನು ನೇಮಿಸುತ್ತಿದ್ದಂತೆ ಶಾಸನಗಳು ತಿಳಿಸುತ್ತವೆ.

ಪ್ರವಾಸಿಗರಿಗೆ ಅರವಟ್ಟಿಗೆಗಳಲ್ಲಿ ನೀರು ಸಿಕ್ಕರೆ ಸತ್ರಗಳಲ್ಲಿ ಆಹಾರವೂ, ವಿಶ್ರಾಂತಿ ತೆಗೆದುಕೊಳ್ಳಲು ವಸತಿಯೂ ದೊರೆಯುತ್ತಿದ್ದಿತು. ಅತಿಥಿ ಸತ್ಕಾರದ ವಿಸ್ತೃತರೂಪವೇ ಸತ್ರ. ಭೂದಾನ ವಿದ್ಯಾದಾನಗಳಿಗಿಂತ ಅನ್ನದಾನವೇ ಶ್ರೇಷ್ಠವೆಂದು ಜನರು ನಂಬಿದ್ದರು. ಅನ್ನದಾನದ ಮಹಿಮೆಯನ್ನು ಒಂದು ಶಾಸನವು ಹೀಗೆ ಕೊಂಡಾಡುವುದನ್ನು ಗಮನಿಸಬಹುದು.

> "ಅನ್ನಾತ್ಪರತರಂ ಲೋಕೇ ನ ಭೂತೋ ನ ಭವಿಷ್ಯತಿ
> ಅನ್ನಮೂಲಂ ಭವೇತ್ಸರ್ವಂ ಸರ್ವಮನ್ನೇ ಪ್ರತಿಷ್ಠಿತಂ
> ಅನ್ನದಃ ಪ್ರಾಣದಃ ಪ್ರೋಕ್ತ (;) ಪ್ರಾಣದಶ್ಚಾಪಿ ಸರ್ವದಃ
> ತಸ್ಮಾದನ್ನ ಪ್ರದಾನೇನ ಸರ್ವದಾನಫಲಂ ಲಭೇತ್॥"[೯]

ಸತ್ರಗಳು ಬಹುಮಟ್ಟಿಗೆ ದೇವಸ್ಥಾನಗಳ, ಮಠಗಳ ಅಂಗಗಳಾಗಿದ್ದವು. ಅಲ್ಲಿ ದೇಸಿಗ ಪ್ರವಾಸಿಗರಲ್ಲದ ಕೆಲವೆಡೆ ಅಲ್ಲಿಯ ಮಠದಲ್ಲಿ ಅಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಗಳಿಗೂ ಊಟದ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತು. ಸತ್ರಕ್ಕೆ ನೀಡಿರುವ ದತ್ತಿಯ ಆದಾಯದ ಮಿತಿಯನ್ನು ನೋಡಿಕೊಂಡು ಆ ಸತ್ರದಲ್ಲಿ ಊಟ ಮಾಡಬೇಕಾದವರ ಸಂಖ್ಯೆಯನ್ನು

ನಿರ್ದಿಷ್ಟಗೊಳಿಸುತ್ತಿದ್ದರು. ಕೆಲವು ಸತ್ರಗಳು ಬ್ರಾಹ್ಮಣರಿಗೆ ಮಾತ್ರ ಮೀಸಲಾಗಿದ್ದರೆ, ಇನ್ನೂ ಕೆಲವೆಡೆಗಳಲ್ಲಿ ಎಲ್ಲ ಜಾತಿಯ ಜನರಿಗೂ ಅವಕಾಶವಿದ್ದಿತು.

ಕೆರೆಯನ್ನು ಕಟ್ಟಿಸಿದರೆ ತನಗೆ ಮಾತ್ರವಲ್ಲ, ತನ್ನ ಹೆತ್ತವರಿಗೂ ಪುಣ್ಯ ಬರುತ್ತದೆಯೆಂದು ನಾಣಿಮಯ್ಯ ನಾಯಕನು ಕೆರೆಗಳನ್ನು ಕಟ್ಟಿಸಿದಲ್ಲದೆ ಒಂದು ಹೊಕ್ಕರಣೆಯನ್ನು (ಪುಷ್ಕರಿಣಿ) ಅಗೆಯಿಸಿದ ವಿಷಯವು ಶಾಸನಗಳಿಂದ ತಿಳಿಯುತ್ತದೆ. ದೇವಾಲಯ ಮಂದಿರಗಳನ್ನು ನಿರ್ಮಾಣ ಮಾಡುತ್ತಿದ್ದವರು ತಮ್ಮ ಹೆಸರನ್ನೇ ದೇವಸ್ಥಾನಗಳಿಗೆ ಇಡುತ್ತಿದ್ದಂತೆ, ಕೆರೆಗಳನ್ನು ಕಟ್ಟಿಸುತ್ತಿದ್ದವರು ತಮ್ಮ ಹೆಸರನ್ನೇ ಕೆರೆಗಳಿಗೆ ಇಡುತ್ತಿದ್ದರು. ಕೆರೆಯನ್ನು ಕಟ್ಟಿಸಬೇಕಾದರೆ ಅಪಾರವಾದ ಹಣವು ಬೇಕಾಗುತ್ತಿತ್ತು. ಅಂತೆಯೇ ರಾಜರೂ, ಸಾಮಂತರೂ, ಶ್ರೀಮಂತರೂ ಇಲ್ಲವೇ ಪ್ರಭಾವಶಾಲಿಗಳಾದ ಸನ್ಯಾಸಿಗಳು ಮಾತ್ರವೇ ಕೆರೆ ಕಟ್ಟಿಸುವಂತಹ ಕಾರ್ಯಗಳಿಗೆ ಮುಂದಾಗುತ್ತಿದ್ದರು. ಚಿಲ್ಲು ಕುಭಟಾರ ಎಂಬ ಪ್ರಸಿದ್ಧ ಶೈವ ಸನ್ಯಾಸಿಗಳು ಐದು ಕೆರೆಗಳನ್ನು ಕಟ್ಟಿಸಿದರೆಂದು ಒಂದು ಶಾಸನವು ತಿಳಿಸುತ್ತದೆ. ಊರಿನ ಜನ ಒಗ್ಗಟ್ಟಾಗಿ ಕೂಡಿ ಕೆರೆಯನ್ನು ಕಟ್ಟಿಸಿದ ಹಲವಾರು ನಿದರ್ಶನಗಳೂ ಉಂಟು. ಕೆರೆ ಬಹಳ ಕಾಲ ಉಳಿಯಬೇಕಾದರೆ ಆಗಾಗ್ಗೆ ಅದರ ಕಡೆಗೆ ಗಮನ ಕೊಡಬೇಕಾಗುತ್ತದೆ. ಅದರ ಕಟ್ಟೆ ಒಡೆಯಬಹುದು, ತೂಬು ಹಾಳಾಗಲೂಬಹುದು; ಮರಳಿನಿಂದ ಕೆರೆ ಹೂತು ಹೋಗಬಹುದು, ಇವುಗಳ ಯೋಗಕ್ಷೇಮಕ್ಕೆ ಹಣ ಬೇಕಾಗುತ್ತದೆ. ಅದಕ್ಕಾಗಿ ಊರಿನ ಜನ ಸೇರಿ ಕೆರೆಗಾಗಿ ಒಂದು ಜಮೀನನ್ನು ಬಿಡುತ್ತಿದ್ದರು. ಅದನ್ನೇ 'ಬಿತ್ತುವಾಟ' ಅಥವಾ 'ಬಿತ್ತುವಟ್ಟ' ಎಂದು ಶಾಸನಗಳಲ್ಲಿ ಕರೆದಿರುವುದುಂಟು. ಈ ಗದ್ದೆಯಿಂದ ಬರುವ ಆದಾಯವನ್ನು ಕೆರೆಗಾಗಿ ಮೀಸಲಾಗಿಡುತ್ತಿದ್ದರು. ಅಯ್ಯಪದೇವ ಎಂಬಾತನು ಆಳುತ್ತಿರುವಾಗ ಬೋರಯ್ಯ ಮುಂತಾದವರು ಸೇರಿ ಅಯ್ಯಪದೇವನಿಂದ ಕೆರೆಗೆ ಬಿತ್ತುವಾಟವನ್ನು ಪಡೆದ ವಿಷಯವು ಶಾಸನದಲ್ಲೂ ಉಲ್ಲೇಖಿಸಲಾಗಿದೆ.

ಶ್ರವಣಬೆಳಗೊಳದ ಬುಕ್ಕರಾಯನ ಶಾಸನ ವಿಜಯನಗರ ಕಾಲದೊಂದು ಮಹತ್ವಪೂರ್ಣ ಶಾಸನ ಈ ಗದ್ಯ ಶಾಸನ ವಿಜಯನಗರದ ಅರಸರ ಧಾರ್ಮಿಕ ಸಾಮರಸ್ಯ ದೃಷ್ಟಿಕೋನವನ್ನು ಎತ್ತಿಹಿಡಿಯುತ್ತದೆ. ಜೈನರ ಮೇಲೆ ವೈಷ್ಣವರು ಆಕ್ರಮಣ ಮಾಡಿದಾಗ

ಬುಕ್ಕರಾಯನ ಬಳಿಗೆ ಜೈನರು ದೂರು ಒಯ್ಯುತ್ತಾರೆ. ರಾಜ ಜೈನಧರ್ಮ ಮತ್ತು ವೈಷ್ಣವ ಧರ್ಮಗಳ ನಡುವೆ ಭೇದವಿಲ್ಲವೆಂದು ರಾಜಿ ಮಾಡಿಸುತ್ತಾನೆ. ಈ ಶಾಸನದ ಮೊದಲ ಪಾಠ ಬೆಂಗಳೂರಿನ ಮಾಗಡಿ ಬಳಿಯ ಕಲ್ಯದಲ್ಲಿ ದೊರೆತಿದೆ. ಸರ್ವಧರ್ಮ ಸಹಿಷ್ಣುತೆ ಹಾಗೂ ಒಡಂಬಡಿಕೆಯ ಕುರುವಾಗಿರುವ ಈ ಶಾಸನ 'ಸರ್ವಧರ್ಮ ಸಮನ್ವಯ ಶಾಸನ' ಎಂತಲೂ ಕರೆಯುವುದುಂಟು.

'ಮುಮ್ಮಡಿಕೃಷ್ಣನ ಜೂರಾ ಶಾಸನ' ಮಧ್ಯಪ್ರದೇಶದ ಜಬ್ಬಲ್‌ಪುರದ ಹತ್ತಿರ ದೊರೆತ ಕನ್ನಡ ಶಾಸನವಿದು. ರಾಷ್ಟ್ರಕೂಟ ವಂಶದ ಪ್ರಸಿದ್ಧ ಅರಸ ಮೂರನೆಯ ಕೃಷ್ಣನ ಶುಭ್ರಶೀಲ ಚಾರಿತ್ರ್ಯವನ್ನು ಪ್ರಪಂಚಕ್ಕೆ ಸಾರುತ್ತದೆ. ಪೃಥ್ವಿ, ವಲ್ಲಭ, ಮಹಾರಾಜಾಧಿರಾಜ ಎಂಬ ಬಿರುದನ್ನು ಪಡೆದಿದ್ದ ಕೃಷ್ಣನು ಉತ್ತರ ಭಾರತದ ಮೇಲೆ ದಂಡೆಯಾತ್ರೆ ಮಾಡುವ ಸಂದರ್ಭದಲ್ಲಿ ಈ ಶಾಸನ ಹಾಕಿಸಿದ್ದಾನೆ ಎನ್ನಲಾಗಿದೆ.

ಕೃಷ್ಣನಿಗೆ 'ಪರಾಂಗನಾ ಪುತ್ರ' ಎಂಬ ಬಿರುದಿರುವುದನ್ನು ಈ ಶಾಸನವು ಸಾರುತ್ತದೆ. ಪರವನಿತೆಯರೆಡೆಗೆ ಕೃಷ್ಣನ ಕಣ್ಣು ಹಾಯದು, ಮನಸ್ಸು ಸೋಲದು, ನಾಲಗೆ ತಡವರಿಸದು; ಅನ್ಯ ಸ್ತ್ರೀಯರ ತೋಳು ತನ್ನನ್ನಾಡಿಸಿದ ತೋಳು, ಅವರೆದೆ ತನಗುಣಿಸಿದ ತಾಯ ಸ್ತನ್ಯ ಎಂದು ಭಾವಿಸುತ್ತಾನೆ ಎಂಬ ಮಾತು ಅವನ ಶೀಲಕ್ಕೆ ಹಿಡಿದ ಕನ್ನಡಿಯಾಗಿದೆ.

ಬೇಲೂರು ವಿಷ್ಣುವರ್ಧನನ ಶಾಸನವು ಹೊಯ್ಸಳ ವಂಶದ ವರ್ಣನೆಯನ್ನು ಬಹು ವಿಸ್ತಾರವಾಗಿ ಮಾಡುತ್ತದೆ. ಈ ಶಾಸನದ ನಾಯಕನಾದ ವಿಷ್ಣುವರ್ಧನನ ವ್ಯಕ್ತಿತ್ವ ಕಣ್ಣಮುಂದೆ ಕಟ್ಟುವಂತೆ ಚಿತ್ರಿಸುತ್ತದೆ. ಬೇಲೂರಿನಲ್ಲಿ ವಿಷ್ಣುವರ್ಧನನು ಸ್ವಯಾರ್ಜಿತ ಧನದಿಂದ ದೇವಾಲಯವನ್ನು (ವಿಜಯನಾರಾಯಣ ದೇವಾಲಯ) ಕಟ್ಟಿಸಿದುದನ್ನು ಹೇಳುತ್ತದೆ. ದೇವಾಲಯಕ್ಕೆ ನಾನಾ ಉದ್ದೇಶಗಳಿಗಾಗಿ ವಿಷ್ಣುವರ್ಧನನು ಬಿಟ್ಟ ದತ್ತಿಯ ವಿವರವಿದೆ.

ಕಪ್ಪೆ ಆರಭಟನ ಶಾಸನ ಬಾಗಲಕೋಟೆ ಜಿಲ್ಲೆಯ ಬಾದಾಮಿಗೆ ಸಮೀಪದಲ್ಲಿರುವ ತಟ್ಟುಕೋಟೆ ಎಂಬ ಸ್ಥಳದ ವಾಯುವ್ಯ ದಿಕ್ಕಿನಲ್ಲಿರುವ ಬಂಡೆಗಲ್ಲಿನ ಮೇಲೆ ಕೊರೆದಿರುವ ಶಾಸನವಾಗಿದೆ. ಕನ್ನಡದಲ್ಲಿ ಉಪಲಬ್ದವಾಗಿರುವ ಮೊದಲ ತ್ರಿಪದಿ ಈ ಶಾಸನದ

ವೈಶಿಷ್ಟ್ಯವಾಗಿದೆ. ಕಪ್ಪೆ ಆರಭಟನ ವ್ಯಕ್ತಿತ್ವದೊಂದಿಗೆ ಅಂದಿನ ಸಾಮಾಜಿಕ ಮೌಲ್ಯವನ್ನು ಸಾರುತ್ತದೆ.

"ಸಾಧುಗೆ ಸಾಧು ಮಾಧೂರ್ಯ್ಯನ್ಗೆ ಮಾಧೂರ್ಯನ್
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆಱನಲ್ಲ"[೧೦]

ಒಳ್ಳೆಯವರಿಗೆ ಒಳ್ಳೆಯವನು, ಮಧುರಗುಣ ಉಳ್ಳವರಿಗೆ ಮಧುರವಾಗಿ ವರ್ತಿಸುವನು. ತೊಂದರೆಪಡಿಸುವ ದುಷ್ಟರಿಗೆ ದುಷ್ಟರಂತೆ ಕಾಣಿಸುವನು. ಈತನು ಅಸಾಮಾನ್ಯನಾದ ಮಧವನೇ ಆಗಿರುವನು.

**ಚಂದ್ರವಳ್ಳಿಯ ಮಯೂರಶರ್ಮನ ಶಾಸನ:**

ಚಿತ್ರದುರ್ಗದ ಬಳಿಯ ಚಂದ್ರವಳ್ಳಿ ಕಣಿವೆಯ ಬಳಿ ಒಂದು ಬಂಡೆಯ ಮೇಲೆ ಈ ಚಿಕ್ಕ ಶಾಸನವನ್ನು ಕೊರೆದಿದೆ. ಇದರ ಕಾಲ ಸುಮಾರು ನಾಲ್ಕನೆಯ ಶತಮಾನ. ಇದರಲ್ಲಿ ಕದಂಬ ರಾಜವಂಶದ ಸ್ಥಾಪಕನಾದ ಮಯೂರಶರ್ಮನು ಒಂದು ಕೆರೆಯನ್ನು ಕಟ್ಟಿಸಿದನೆಂದು ಹೇಳಿದೆ.

ಒಂದನೆಯ ಪುಲಿಕೇಶಿಯ ಬಾದಾಮಿಯ ಶಾಸನವು ಬಾದಾಮಿ ಬೆಟ್ಟದ ಬಂಡೆಗಲ್ಲ ಮೇಲಿದೆ. ಇದರ ಕಾಲ ಕ್ರಿ.ಶ. ೫೪೩. ಇದು ಅಶ್ವಮೇದಾಧಿಯಾಗಗಳನ್ನು ನೆರವೇರಿಸಿದ ಚಲಿಕ್ಯ ವಲ್ಲಭೇಶ್ವರನು ಅಜೇಯವಾದ ಬಾದಾಮಿಯ ಕೋಟೆಯನ್ನು ಕಟ್ಟಿಸಿದ ವಿಷಯವನ್ನು ಸಾರುತ್ತದೆ.

ನಮ್ಮ ಪ್ರಾಚೀನ ಯುದ್ಧ ವ್ಯವಸ್ಥೆಯಲ್ಲಿ ಕಲಿತನದಿಂದ ಹೋರಾಡುವುದು ಮತ್ತು ಪ್ರಾಣವನ್ನು ಲೆಕ್ಕಿಸದೆ ತಮ್ಮವರನ್ನು ರಕ್ಷಿಸುವುದು ಒಂದು ಮೌಲ್ಯವೇ ಆಗಿತ್ತು. ಶತ್ರುಗಳು ದಾಳಿ ಮಾಡಿದಾಗ ಗ್ರಾಮಗಳನ್ನು ದೋಚುತ್ತಿದ್ದುದಲ್ಲದೇ ಕೆಲವು ವೇಳೆ ಅಮಾನುಷವಾಗಿ ಸುಡುತ್ತಿದ್ದರು. ಅಷ್ಟೇ ಅಲ್ಲದೆ ಸ್ತ್ರೀಯರನ್ನು ಅಪಮಾನಿಸುವುದು, ದನ–ಕರುಗಳನ್ನು ಅಪಹರಿಸುವುದೂ ಮಾಡುತ್ತಿದ್ದರೂ. ಆ ಸಮಯದಲ್ಲಿ ಅನೇಕರು ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಶತೃಗಳೊಂದಿಗೆ ಹೋರಾಡಿ ಆಪತ್ತಿಗೆ ಒಳಗಾದ ಸ್ತ್ರೀಯರನ್ನು ಮತ್ತು ದನಕರುಗಳನ್ನು

ರಕ್ಷಿಸುತ್ತಿದ್ದರು. ಹೀಗೆ ರಕ್ಷಣೆ ಮಾಡುವುದು ಅನೇಕರ ಬದುಕಿನ ಆದರ್ಶವಾಗಿತ್ತು. ಸೊರಬ ತಾಲೂಕಿನ ಮನೆ ಮನೆ ಗ್ರಾಮದ ಶಾಸನವು ಪ್ರಾಚೀನ ಶಾಸನವಾಗಿದ್ದು, ರಾಷ್ಟ್ರಕೂಟರ ಅವಧಿಯ ಈ ಶಾಸನವು ಸುಮಾರು ಕ್ರಿ.ಶ. ೮೦೦ಕ್ಕೆ ಸೇರಿದೆ. ಅಜ್ಜರನೆಂಬ ವೀರನು ಊರಳಿವಿನ ಸಮಯದಲ್ಲಿ ಸ್ತ್ರೀಯರ ಮಾನಭಂಗಕ್ಕೆ ಪ್ರಯತ್ನಿಸಿದ ಶತ್ರುಗಳ ವಿರುದ್ಧ ಹೋರಾಡಿ ಮಡಿಯುತ್ತಾನೆ. ಗ್ರಾಮಸ್ಥರು ಅವನ ನೆನಪಿಗೆ ಶಿಲಾಶಾಸನವನ್ನು ನೆಡಿಸುವರು. ಮಹಿಳೆಯರ ರಕ್ಷಣೆ ಮಾಡುವುದು ಅಂದಿನ ಸಾಮಾಜಿಕ ಮೌಲ್ಯವಾಗಿತ್ತು. "ಚೋಳರ ಒಂದು ಶಾಸನದಲ್ಲಿ ಶತ್ರುಗಳು ಬೆಳಗಟ್ಟೂರು ಗ್ರಾಮವನ್ನು ಸೂರೆ ಮಾಡಿ ದನಗಳನ್ನು ಅಪಹರಿಸಿ, ಹೆಣ್ಣುಮಕ್ಕಳ ಮಾನಭಂಗ ಮಾಡುವಾಗ ಎರೆಯಗಾವುಣ್ಣನೆಂಬುವನು ಹೋರಾಡಿ ಮಡಿಯುತ್ತಾನೆ"[೧೦]. ಇದರಿಂದ ಆ ಸಮಾಜದಲ್ಲಿ ಜನ ಹೇಗೆ ತಮ್ಮ ಗ್ರಾಮದ ಗೋವುಗಳನ್ನು, ಸ್ತ್ರೀಯರನ್ನು ಸಂರಕ್ಷಿಸುವಲ್ಲಿ ತಮ್ಮ ಪ್ರಾಣವನ್ನೇ ನೀಡಿರುವುದು ತಿಳಿಯಬಹುದು.

ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡಿಗರದು ಧರ್ಮ ಮತ್ತು ರಾಜಧರ್ಮಗಳ ಮೇಲೆ ನಿಂತ ಸಮಾಜ. ಅಗ್ರಹಾರ ದೇವಾಲಯ ಜೀರ್ಣೋದ್ಧಾರ, ದೇವರ ಅಂಗಭೋಗ, ರಂಗಭೋಗ, ಮಠ, ದಾಸೋಹ, ಅರವಟ್ಟಿಗೆ, ಪುರಾಣವೃತ್ತಿ–ಹೀಗೆ ವಿವಿಧ ಉದ್ದೇಶಗಳಿಗಾಗಿ ಹೊಲ, ತೋಟ, ಗ್ರಾಮ ನೀಡಿದ; ತೆರಿಗೆಯಿಂದ ಮುಕ್ತಮಾಡಿದ ಶಾಸನಗಳು ಅಂದಿನ ಜನಾಂಗದ ಮನೋಧರ್ಮಕ್ಕೆ ಹಿಡಿದ ಕನ್ನಡಿಯಾಗಿವೆ. ದಕ್ಷಿಣ ವಾರಣಾಸಿಯೆನಿಸಿದ ಕಡ್ಲೇವಾಡದ ಸೋಮನಾಥ ದೇವರ ಅಂಗ–ರಂಗಭೋಗ, ಜೀರ್ಣೋದ್ಧಾರಕ್ಕೆ, ತಮೋಧನರ ಅಶನ–ಅಚ್ಚಾದನಗಳಿಗಾಗಿ ಸ್ಥಾನಾಚಾರ್ಯ ಸೋಮರಾಶಿದೇವರಿಗೆ ದತ್ತಿ ನೀಡಿದ ಸಂಗತಿ ಕಡ್ಲೇವಾಡ ಶಾಸನದಲ್ಲಿದೆ.

ಶೌರ್ಯ ಪುರುಷರಿಗಷ್ಟೇ ಸೀಮಿತವಾಗಿರಲಿಲ್ಲ. ಬಿಜಾಪುರ ಜಿಲ್ಲೆಯ ನೀಲಗುಂದ ಶಾಸನದಲ್ಲಿ ತೊರಗಲೆಯ ಸಾಮಂತನ ಹೆಂಡತಿ ಚಾಗಲದೇವಿಯು ನೀಲಗುಂದದ ಚಾವುಗಾವುಂಡ ಹೊಲ್ಲಗಾವುಂಡರ ಜೊತೆ ಕಾದಿ ಪರಾಕ್ರಮ ಮೆರೆದ ಉಲ್ಲೇಖ ಇದೆ. ವ್ಯಾಪಾರವನ್ನು ಮತ್ತು ವ್ಯಾಪಾರವನ್ನೇ ವೃತ್ತಿಯಾಗಿಸಿಕೊಂಡವರು ವರ್ತಕರು. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಬೇರೆ–ಬೇರೆ ಪ್ರದೇಶ, ಕಾಲಗಳಲ್ಲಿ ವಸ್ತುಗಳಿಗೆ ಸಂತೆಯ

ಸುಂಕವನ್ನು ಹಣ ಮತ್ತು ವಸ್ತುಗಳ ಹಾಗೂ ಅವುಗಳ ಪ್ರಮಾಣವು ಕರ್ನಾಟಕದ ಶಾಸನಗಳಿಂದ ಗೊತ್ತಾಗುತ್ತದೆ. ಸಂತೆಯ ಸುಂಕವನ್ನು ಸರಕುಗಳ ತೂಕ, ತುಂಬಿದ ವಸ್ತುವಿನ ಗಾತ್ರ, ಸಾಗಿಸುವ ವಾಹನ, ಸರಕಿನ ಬೆಲೆ, ಅಳತೆ ಪ್ರಮಾಣ, ಹಾಗೂ ರಾಶಿಗಳ ಮೇಲೆ ನಿಗದಿಪಡಿಸುತ್ತಿದ್ದರು. ವರ್ತಕರು ಸಂತೆಯ ಸುಂಕದೊಂದಿಗೆ ಮಾರಾಟದ ಸುಂಕವನ್ನು ಸಲ್ಲಿಸುತ್ತಿದ್ದರು. ಅದು ವಸ್ತುವಿನ ಮಾರಾಟದ ಪ್ರಮಾಣದ ಮೇಲೆ ನಿರ್ಣಯವಾಗುತ್ತಿತ್ತು. ಮಾರಾಟ ಸುಂಕ ಆಯಾ ಕಾಲ, ಪ್ರದೇಶಗಳಲ್ಲಿ ವ್ಯತ್ಯಾಸವಾಗಿದ್ದು, ವಸ್ತು ಹಾಗೂ ಹಣದ ರೂಪದಲ್ಲಿ ಅದನ್ನು ವಸೂಲು ಮಾಡುತ್ತಿದ್ದ ಅಂಶವೂ ಭತ್ತ, ಬೆಲ್ಲ, ಸಕ್ಕರೆ, ಎಲೆ, ಅಡಿಕೆ, ಹತ್ತಿ, ಸೀರೆ, ಸಾಸಿವೆ, ಜೀರಿಗೆ, ಶುಂಠಿ, ಅರಿಶಿಣ, ಮೆಣಸು, ಇಂಗು..... ಮುಂತಾದ ಸರಕುಗಳ ಮೇಲೆ ಮಾರಾಟಕರು ಆಕರಿಸುತ್ತಿದ್ದ ಸಂಗತಿಯೂ ಶಾಸನಗಳಿಂದ ವ್ಯಕ್ತವಾಗುತ್ತದೆ.

ಪ್ರಾಚೀನ ಹಾಗೂ ಮಧ್ಯಕಾಲೀನ ದೇವಾಲಯಗಳು ಆ ಕಾಲದಲ್ಲಿ ಜನರಲ್ಲಿ ಬೇರೂರಿದ್ದ ಜೀವನ ಶ್ರದ್ಧೆ ಹಾಗೂ ನಿಷ್ಠೆಗಳ ಪ್ರತೀಕವೂ ಹೌದು. ಸಮಾಜದಲ್ಲಿಯ ಎಲ್ಲಾ ವರ್ಗದ ಜಾತಿ, ವರ್ಗಗಳು ದೇವಾಲಯ-ಮಂದಿರಗಳೊಡನೆ ಸಂಬಂಧ ಇರಿಸಿಕೊಂಡಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ಜನತೆಯ ಅಂತರಂಗದ ಬದುಕು ದೇವಾಲಯಗಳಿಗೆ ಸ್ಪಂದಿಸಿದ ರೀತಿ, ದೇವಾಲಯಗಳು ಜನತೆಯ ಅಂತರಂಗವನ್ನು ವಿಕಸಿಸಿದ ರೀತಿಯನ್ನು ಆಯಾ ಕಾಲದ ಶಾಸನಗಳ ಮೂಲಕ ತಿಳಿಯಬಹುದಾಗಿದೆ. ವಿವಿಧ ಅರಸು ಮನೆತನಗಳ ಆಳ್ವಿಕೆಗೆ ಅನುಗುಣವಾಗಿ ದೇವಾಲಯಗಳ ರಚನೆಯ ಉತ್ತಮ ಪರಂಪರೆಯೇ ನಿರ್ಮಿತವಾಗಿದೆ. ಬಹುಪಾಲು ಶಾಸನಗಳಲ್ಲಿ ನೇರವಾಗಿ ದೇವಾಲಯಗಳನ್ನು ಯಾರು ಯಾರ ಹೆಸರಿನಲ್ಲಿ ಯಾರನ್ನು ಸಂಪ್ರೀತಗೊಳಿಸಲು ಪ್ರತಿಷ್ಠಾಪಿಸಿದ್ದಾರೆಂಬ ಉಲ್ಲೇಖಗಳು ಹೆಚ್ಚಿಗೆ ದೊರೆಯುವುದಿಲ್ಲ. ದೇವಾಲಯಗಳ ರಚನೆಯ ಬಗೆಗೆ ಏನನ್ನು ತಿಳಿಸದೆ ದೇವಾಲಯಗಳಿಗೆ ನೀಡಿದ ದಾನ-ದತ್ತಿಗಳನ್ನಷ್ಟೇ ಉಲ್ಲೇಖಿಸುತ್ತವೆ.

ಶಾಸನಗಳು ಜನಜೀವನದಿಂದ ಮೂಡಿಬಂದಿವೆಯಾದ್ದರಿಂದ ಅನೇಕ ಸಾಮಾಜಿಕ ಅಂಶಗಳು ಶಾಸನಗಳಲ್ಲಿ ದೊರೆಯುತ್ತವೆ. ಶಾಸನಗಳಲ್ಲಿ ಉಕ್ತವಾಗಿರುವ ಮಾಹಿತಿಗಳು ಮತ್ತು ಘಟನೆಗಳು ಆಯಾ ಕಾಲದ ಸಾಂಸ್ಕೃತಿಕ ಮೌಲ್ಯವನ್ನು ನಿರೂಪಿಸುತ್ತವೆ. ರಾಜ ತಾನು ಕಟ್ಟಿಸಿದ ದೇವಾಲಯ, ಬಿಟ್ಟ ದತ್ತಿ, ಕವಿಗಳಿಗೆ ಕೊಟ್ಟ ಆಶ್ರಯ.... ಇತ್ಯಾದಿ ಬಿಡಿ ಸಂಗತಿಗಳನ್ನು ಆ ಕಾಲದ ಪ್ರಮುಖ ಆರ್ಥಿಕ, ಸಾಮಾಜಿಕ ಕಾರ್ಯಗಳು ಎಂಬಂತೆ ಗುರುತಿಸಲಾಗಿದೆ.

**ಅಡಿಟಿಪ್ಪಣಿಗಳು:**

೧. ಶಾಸನಗಳ ಪ್ರಕಾರ ಮತ್ತು ಅವುಗಳ ಮಹತ್ವ, ಪು. ೨೨೭.
೨. ಕನ್ನಡ ಶಾಸನಗಳ ಅಧ್ಯಯನ, ಪು. ೧೦೨.
೩. ಮಾರ್ಗ ಸಂ.–೨, ಪು. ೬೪.
೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೬೫.
೫. ಅದೇ, ಪು. ೪೭೧.
೬. ಅದೇ, ಪು. ೪೭೧.
೭. ಅದೇ, ಪು. ೪೮೦.
೮. ಅದೇ, ಪು. ೪೮೭.
೯. ಅದೇ, ಪು. ೫೦೦.
೧೦. ಕನ್ನಡ ಸಾಹಿತ್ಯ ಸಂಜೀವಿನಿ, ಪು. ೬೯೦.

# ಅಧ್ಯಾಯ-೫
# ಮೌಲ್ಯವಾಗಿ ವೀರ

ಕನ್ನಡ ಶಾಸನ ಪರಂಪರೆಯಲ್ಲಿ ದಾನ ಶಾಸನಗಳಂತೆ ವೀರಗಲ್ಲುಗಳಿಗೇನೂ ಕೊರತೆಯಿಲ್ಲ. ಕಾರಣ, ಅಂದಿನ ಸಮಾಜದಲ್ಲಿ ದಾನ ಮತ್ತು ಶೌರ್ಯ ಮಹತ್ವದ ಮೌಲ್ಯಗಳಾಗಿದ್ದವು. ಅವು ಜನಜೀವನದ ಅವಿಭಾಜ್ಯ ಅಂಗಗಳಾಗಿದ್ದವು. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಆ ಮೌಲ್ಯಗಳ ಛಾಯೆ ದಟ್ಟವಾಗಿರುವುದನ್ನು ಕಾಣುತ್ತೇವೆ. "ದಾನಗುಣದ ಸತ್ವವು ಕನ್ನಡಿಗರ ರಕ್ತವಾಗಿದ್ದಂತೆ, ವೀರಗುಣದ ಸತ್ವವು ಅವರ ರಕ್ತದಲ್ಲಿ ಬೆರೆತ ಶಕ್ತಿಯ ಅಂಶವಾಗಿದ್ದಿತು"[೧] ಎಂಬ ಹೇಳಿಕೆಯು ನಮ್ಮ ನಾಡಿನ ಜನರ ವ್ಯಕ್ತಿತ್ವವನ್ನು ಸಾರುತ್ತದೆ.

ಮಾನವನ ಹುಟ್ಟು ಅನಿವಾರ್ಯಗವಾಗದೇ ಇರಬಹುದು. ಆದರೆ ಹುಟ್ಟಿದ ಮೇಲೆ ಮರಣವೆಂಬುದು ಅವನಿಗೆ ಅನಿವಾರ್ಯವೂ, ಪ್ರಕೃತಿ ನಿಯಮವೂ ಹೌದು. ಈ ಸಾವು ಎನ್ನುವುದು ಮಾನವನ ಖಚಿತವಾದ ವ್ಯಾಖ್ಯಾನಕ್ಕೆ ಒಳಪಡದೇ ರಹಸ್ಯವಾಗಿಯೇ ಉಳಿದಿದೆ. ಮಾನವನಿಗೆ ಒದಗುವ ಎಲ್ಲ ಕಷ್ಟಗಳಿಗಿಂತಲೂ ಸಾವಿನ ಭಯ ಎಂಬುದು ಅವನ ಜೀವನದ ಅಲ್ಲೋಲಕಲ್ಲೋಲವನ್ನುಂಟು ಮಾಡುವ ಒಂದು ಸ್ಥಿತಿ. ಮಾನವನ ನಾಗರಿಕತೆಯ, ಸಂಸ್ಕೃತಿಯ ಆರಂಭ ಕಾಲದಿಂದಲೂ ಸಾವಿನ ಬಗ್ಗೆ, ಸಾವಿನ ನಂತರದ ಜೀವನದ ಬಗ್ಗೆ ಹಲವಾರು ಕಲ್ಪನೆಗಳು, ನಂಬಿಕೆಗಳು ಬೆಳೆದು ಬಂದಿವೆ.

ಗತಿಸಿಹೋದ ಮಾನವನನ್ನು ಸಮಾಧಿ ಮಾಡಿದ ನಿರ್ದಿಷ್ಟ ಸ್ಥಳದ ಗುರುತಿಗಾಗಿಯೋ, ಮಡಿದವನ ಸ್ಮರಣೆ ಬರುವಂತೆಯೋ, ಕೆಲವಾರು ಸಂಕೇತಗಳನ್ನೋ, ಗುರುತುಗಳನ್ನೋ ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಅವು ಸಾಮಾನ್ಯವಾಗಿ ಆಯಾ ದೇಶಗಳಲ್ಲಿನ ಧರ್ಮ, ನಂಬಿಕೆ, ಸಾಮಾಜಿಕ ಪ್ರತಿಷ್ಠೆಗಳನ್ನು ಅನುಸರಿಸಿಯೆ ಬೆಳೆದಿವೆ. ಈ ಕಾರಣದಿಂದ ಸ್ಮಾರಕಗಳು ಮಾನವನ ಜೀವನ ವಿಧಾನವನ್ನು, ಜೀವನದ ಬಗ್ಗೆ ಅವನಿಗಿರುವ ದೋರಣೆಯನ್ನು, ಅಂದಿನ ಸಮಾಜದ ನಾಗರಿಕತೆ ಮತ್ತು ಸಂಸ್ಕೃತಿಯನ್ನು ತಿಳಿಸಿಕೊಡುತ್ತವೆ.

ಬಹುಪಾಲು ಸ್ಮಾರಕಗಳು ಕಲ್ಲುಗಳೇ ಆಗಿರುವುದನ್ನು ಗಮನಿಸಬಹುದು. ಶಿಲೆಗಳ ಆರಾಧನೆ ವಿಶೇಷವಾದ ಮಹತ್ವವನ್ನು ಪಡೆಯುತ್ತವೆ. ಕಾರಣ, ಅವು ಎಲ್ಲ ಪ್ರದೇಶಗಳಲ್ಲಿ ಸುಲಭವಾಗಿಯೂ ತಮ್ಮ ಸಹಜ ಆಕೃತಿಗಳಿಂದಲೇ ಜನರಲ್ಲಿ ಒಂದು ಭಾವನೆಯನ್ನು ಮೂಡಿಸುವಂತೆಯೂ ದೊರೆಯುತ್ತವೆ. ಭಾರತದ ಪ್ರತಿಯೊಂದು ಹಳ್ಳಿಯಲ್ಲಿಯೂ ಪೂಜೆಗೊಳಗಾಗುವ ಒಂದಲ್ಲ ಒಂದು ಕಲ್ಲು ಇದ್ದೆ ಇರುತ್ತದೆ.

ಕನ್ನಡ ಸಾಂಸ್ಕೃತಿಕ ಚರಿತ್ರೆಯಲ್ಲಿ ಹತ್ತನೆಯ ಶತಮಾನವು ವೀರಯುಗದ ಕಾಲಮಾನವೇ ಆಗಿದೆ. ಆ ಕಾಲದ ಪ್ರಮುಖ ಕನ್ನಡ ಕವಿಗಳು ವೀರರಸಯುಕ್ತವಾದ ಕಾವ್ಯಗಳನ್ನು ಬರೆದು, ವೀರತ್ವದ ಧರ್ಮಕ್ಕೆ ಮತ್ತಷ್ಟು ಚೈತನ್ಯ ತುಂಬಿದರು. ವೀರತನವೆಂಬುದು ಪುರುಷರ ಸ್ವತ್ತು ಅಷ್ಟೇ ಅಲ್ಲ, ಸ್ತ್ರೀಯರ ಸಂಪತ್ತೂ ಆಗಿತ್ತು. ಯುದ್ಧಭೂಮಿಯನ್ನು ಅವರು ಪೂಜಿಸುತ್ತಿದ್ದರು. ರಣರಂಗದಿಂದ ಹಿಮ್ಮೆಟ್ಟಿ ಹೆದರಿ ಓಡಿಬಂದ ಗಂಡಂದಿರನ್ನು ಹೆಂಡಂದಿರು ತಮ್ಮ ಮನೆಯಲ್ಲಿ ಸೇರಿಸಿಕೊಳ್ಳುತ್ತಿರಲಿಲ್ಲ. ಅವರಿಗೆ ಕುಂಕುಮ, ಬಳೆ, ಸೀರೆಯನ್ನು ನೀಡಿ ಹೊರಗೆ ಅಟ್ಟುತ್ತಿದ್ದರು. ಅಂದಿನ ಮಹಿಳೆಯರು ತಮ್ಮ ಗಂಡಂದಿರು ಕೊಡುವ ಆಭರಣಗಳನ್ನು ಮೆಚ್ಚುತ್ತಿರಲಿಲ್ಲ. ಗಂಡನ ಮೈಮೇಲಿನ ಶಸ್ತ್ರದ ಗಾಯಗಳ ಸಂಖ್ಯೆಯನ್ನು ಗಮನಿಸಿ; ಅವನಿಗೆ ಒಲಿಯುತ್ತಿದ್ದರು. ಅವರಿಗೆ ವೀರನಾದ ಗಂಡನು ಪ್ರಿಯನಾಗಿದ್ದನೇ ಹೊರತು ಹೇಡಿಯಾದ ಗಂಡನಲ್ಲ;

"ತುರುಗೋಳೊಳ್ ಪೆಣ್ಣುಯ್ಯಲೊಳ್
ಇರಿವೆಸದೊಳ್ನಂಟನೆ ನೆಡರೊಳೂರಳಿವಿನೊಳಂ
ತರಿಸಂದು ಗಂಡುತನಮೆನೆ
ನೆರಪದವಂ ಗಂಡನಲ್ಲನೆಂತು ಷಂಡಂ" (೨-೩೧)

ಎಂದು ರನ್ನನು ನಿಜವಾದ ಗಂಡನು ಯಾರು.....? ಎಂಬುದನ್ನು ತನ್ನ 'ಗದಾಯುದ್ಧ'ದಲ್ಲಿ ಹೇಳಿದ್ದಾನೆ.

ಈ ದೇಹವು ನಶ್ವರ ಒಂದಲ್ಲ. ಒಂದು ದಿನ ನಾಶವಾಗುವಂಥದ್ದು. ನಿರಂತರವಾಗಿ, ಶಾಶ್ವತವಾಗಿ ಈ ಭೂಮಿಯಲ್ಲಿ ಉಳಿಯುವುದು ಮನುಷ್ಯನ ವೀರತನ ಮಾತ್ರ. ಆ

ಕಾರಣಕ್ಕಾಗಿಯೇ ಅವರು ಸತ್ತೂ ಜೀವಿಸುವುದಕ್ಕಾಗಿ ತಹತಹಿಸುತ್ತಿದ್ದರು. ವೀರತನ ಮೆರೆಯುವುದು, ಪ್ರಭುತ್ವ ವ್ಯವಸ್ಥೆಯಲ್ಲಿ ಕರ್ತವ್ಯ ವೃತ್ತಿಯಾಗಿದ್ದರೂ ಅದರೊಂದಿಗೆ ಧರ್ಮದೃಷ್ಟಿಯೂ ಸಂಗತವಾಗಿರುತ್ತಿತ್ತು. ಕಳ್ಳರು ಬಂದು ತೊಂದರೆ ಕೊಡುತ್ತಿದ್ದಾಗ, ಗ್ರಾಮದ ಆಕಳುಗಳನ್ನು ಶತ್ರುಗಳು ಅಪಹರಿಸಲು ಬಂದಾಗ, ಸ್ತ್ರೀಯರ ಮಾನಕ್ಕೆ ಕಂಟಕವು ಎದುರಾದಾಗ ಗ್ರಾಮದವರೆಲ್ಲ ಒಟ್ಟಿಗೆ ಸೇರಿ ಅಂತಹ ಆಪತ್ತುಗಳನ್ನು ಎದುರಿಸುತ್ತಿದ್ದರು. ಅಭಿಮಾನಧನರಾದ ಕನ್ನಡಿಗರಿಗೆ ಮರಣವು ದುಃಖವನ್ನು ಉಂಟು ಮಾಡುತ್ತಿರಲಿಲ್ಲ. ಬೇರೆಯವರಿಂದ ಆದ ಅಪಮಾನವು ಮರಣಕ್ಕಿಂತಲೂ ಹೆಚ್ಚು ನೋವನ್ನು ಉಂಟು ಮಾಡುತ್ತಿತ್ತು! 'ಹೋರಾಟದಲ್ಲಿ ಗೆದ್ದರೆ ಜಯಲಕ್ಷ್ಮಿಯು ದೊರೆಯುತ್ತಾಳೆ. ಒಂದು ವೇಳೆ ಯುದ್ಧಭೂಮಿಯಲ್ಲಿ ಮಡಿದರೆ ಸ್ವರ್ಗಲೋಕದ ದೇವಾಂಗನೆಯರು ದೊರಕುತ್ತಾರೆ' ಎಂದು ಅಂದಿನ ಜನರು ಬಲವಾಗಿ ನಂಬುತ್ತಿದ್ದರು.

'ಧೀರ' ಎನ್ನವುದು ಮೂಲತಃ ಸಂಸ್ಕೃತ ಭಾಷೆಯ ಪದ. ಈ ಪದವು ವ್ಯಕ್ತಿಯ ಪರಾಕ್ರಮ, ಶಕ್ತಿ ಮುಂತಾದ ಅವನ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಚಕವಾಗಿ ಬಳಕೆಯಲ್ಲಿದೆ. ಪರಾಕ್ರಮವನ್ನು ಮಾತ್ರ ಸೂಚಿಸಲು 'ವೀರ' ಎಂಬ ಪದವನ್ನು ಆರಂಭದ ದಿಶೆಯಲ್ಲಿ ಬಳಸುತ್ತಿದ್ದರು. ಆದರೆ ನಂತರದ ಕಾಲದಲ್ಲಿ ವೀರತನವನ್ನು ತಾತ್ವಿಕ ಮಟ್ಟದಲ್ಲಿ, ಮತೀಯ ಪರಿಸರದಲ್ಲಿ, ಹಲವಾರು ಹಂತಗಳಲ್ಲಿ ಗುರುತಿಸಿರುವುದನ್ನು ಕಾಣಬಹುದು.

ಇತಿಹಾಸ ಕಾಲದ ವೀರರನ್ನು, ಅರಸರನ್ನು ಗಮನಿಸಿದಾಗ ವೀರತ್ವ ಯಾವುದೇ ಒಂದು ಜಾತಿಯವರಲ್ಲಿ ಮಾತ್ರ ಪ್ರಕಟವಾಗದೆ, ವ್ಯಕ್ತಿಯ ಸ್ವಾಭಿಮಾನ, ಮಹತ್ವಾಕಾಂಕ್ಷೆ, ಶೌರ್ಯ, ಪರಾಕ್ರಮವನ್ನು ಅವಲಂಬಿಸಿ ತನ್ನದೇ ರೀತಿಯಲ್ಲಿ ಎಲ್ಲ ಜಾತಿಯ ವ್ಯಕ್ತಿಗಳಲ್ಲಿಯೂ ಪ್ರಕಟವಾಗಿದೆ. ಇಂಥ ಜಾತಿಯವರೇ ವೀರರು ಎಂದು ಕರೆಯುವುದಕ್ಕಿಂತ ವೀರರೆಲ್ಲರೂ ವೀರಕುಲದವರೇ–ಎಂಬ ಧ್ವನಿ ಪಂಪಭಾರತದಲ್ಲಿ ಉಲ್ಲೇಖವಾಗಿದೆ.

ನಾಗರಿಕತೆಯು ಬೆಳೆಯುತ್ತಿದ್ದಂತೆ ಮಾನವನಿಗೆ ತನ್ನ ಅನಾಗರಿಕ, ಅಮಾನುಷ ವರ್ತನೆಗಳ ಅರಿವಾಗಲು ಆರಂಭಿಸಿತು. ನಂತರ ಅವುಗಳಿಗೆ ಒಂದು ಮಿತಿಯನ್ನು ಹಾಕಲು ಪ್ರಯತ್ನಿಸಿದನು. ತಾನೇ ಅರಿತ ತನ್ನ ಹಿಂದಿನ ಅಮಾನುಷ ಶಕ್ತಿ ಪರಾಕ್ರಮಗಳಿಗೆ ನೀತಿ–

ನಿಯಮಗಳನ್ನು ಹಾಕುತ್ತ ಬಂದಂತೆ ಅವುಗಳಿಗೆ ನೈತಿಕ ಬೆಂಬಲವೂ ದೊರೆಯಿತು. ಈ ರೀತಿಯಲ್ಲಿ ಅವನ ವರ್ಚಸ್ಸನ್ನು ಬೆಳೆಸಿದ ವೀರತನ ಒಂದು ಸಾಮಾಜಿಕ ಮೌಲ್ಯದ ವ್ಯಾಪ್ತಿಯನ್ನು ಪಡೆಯಿತು. 'ವೀರತನ' ಎನ್ನುವುದನ್ನು ಕೇವಲ ಶಕ್ತಿಯ ಪ್ರಯೋಗವಲ್ಲವೆಂಬುದನ್ನು ಅರಿತನು. ವೀರನಾದವನಿಗೆ ಸಾಯಲು ಭಯವಿರುವುದಿಲ್ಲ. ಆದರೆ ತಾನು ಯಾವ ಉದ್ದೇಶಕ್ಕಾಗಿ ಸಾಯುತ್ತಿದ್ದೇನೆ ಎನ್ನುವುದು ಮುಖ್ಯವೆಂದು ಭಾವಿಸುತ್ತಾನೆ. ವೀರನಾದವನು ಪರಾಕ್ರಮವನ್ನು ಯುದ್ಧದಲ್ಲಿ ಪ್ರದರ್ಶಿಸುವುದರಿಂದ ಅಥವಾ ಸಾಯುವುದರಿಂದ ಮಾತ್ರ 'ವೀರ'ನೆಂಬ ಗೌರವಕ್ಕೆ ಪಾತ್ರನಾಗುವುದಿಲ್ಲ. ತನ್ನ ಸ್ವಂತ ರಕ್ಷಣೆಗಾಗಲೀ, ಇತರರಿಗೆ ಧಕ್ಕೆಯುಂಟಾದಾಗಾಗಲೀ, ತನ್ನ ಊರು, ದೇಶ, ನೆಂಟರು ತೊಂದರೆಯಲ್ಲಿರುವಾಗಾಗಲೀ, ಅವರನ್ನು ಆ ತೊಂದರೆಗಳಿಂದ ಬಿಡಿಸುವಲ್ಲಿ ವ್ಯಕ್ತಿಯೊಬ್ಬನು ಮಾಡುವ ಹೋರಾಟವನ್ನು ವೀರತನವೆಂದು ಪರಿಗಣಿಸಲಾಗುತ್ತಿತ್ತು. ಇದೇ ಸಂದರ್ಭದಲ್ಲಿ ಕವಿರಾಜಮಾರ್ಗಕಾರನು ವರ್ಣಿಸುವ ಕರ್ನಾಟಕದ ಜನರ ವರ್ಣನೆಯು ತುಂಬಾ ಮಹತ್ವದ್ದಾಗಿದೆ.

"ಸುಭಟರ್ಕಳ್ ಕವಿಗಳ ಸು
ಪ್ರಭುಗಳ್ ಚೆಲ್ವರ್ಕಳ್ ಅಭಿಜನರ್ಕಳ್ ಗುಣಿಗಳ್
ಅಭಿಮಾನಿಗಳ್ ಅತ್ಯುಗ್ರರ್
ಗಂಭೀರಚಿತ್ತರ್ ವಿವೇಕಿಗಳ್ ನಾಡವಗಳ್"[೨]

ಆ ನಾಡವರು ಸುಭಟರೂ, ಗುಣವಂತರೂ, ಕಲಾರಸಿಕರೂ, ವಿವೇಕಿಗಳೂ, ಮೇಲಾಗಿ ಅಷ್ಟೇ ಸ್ವಾಭಿಮಾನಿಗಳೂ, ಉಗ್ರಸ್ವರೂಪಿಗಳೂ ಆಗಿದ್ದರು ಎಂಬ ಮಾತು ಪ್ರಾಚೀನ ಕರ್ನಾಟಕ ಜನತೆಯ ಜೀವನ ಮೌಲ್ಯವನ್ನು ತೋರಿಸುತ್ತದೆ.

"ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲ ಭೇದಿಸಾ
ಪರಿವಾದ್ಯೋಗ ಯುಕ್ತಾಶ್ವರಣೀ ಚಾಭಿಮುಖೇ ಹತಃ"[೩]

ಸೂರ್ಯಮಂಡಲವನ್ನು ಇಬ್ಬರು ಮಾತ್ರ ಭೇದಿಸಬಲ್ಲರು. ಒಬ್ಬ ಯೋಗಸಾಧನೆ ಮಾಡಿದ ಪರಿವ್ರಾಜಕ, ಮತ್ತೊಬ್ಬ ರಣರಂಗದ ಮೂಲಕ ಸಾಧನೆ ಮಾಡಿದ ಯೋಧ. ಈ ಶ್ಲೋಕ ಕರ್ನಾಟಕದ ಹಲವಾರು ವೀರಗಲ್ಲುಗಳ ಪಾಠದಲ್ಲಿ ಪದೇ ಪದೇ ಉದ್ಧೃತವಾಗಿರುವುದನ್ನು

ಕಾಣಬಹುದಾಗಿದೆ. ಜನ ಯಾವುದನ್ನು ಪಾರಮಾರ್ಥಿಕ ದೃಷ್ಟಿಯಿಂದ ಶ್ರೇಷ್ಠವಾದುದೆಂದು ಭಾವಿಸಿದ್ದಾರೋ ಅದಕ್ಕೆ ಸಮಾನವಾದುದು ಈ ಯುದ್ಧದಲ್ಲಿ ಮಡಿಯುವುದು ಎಂಬುದಾಗಿ ನಮ್ಮ ಜನ ನಂಬಿದ್ದರೆಂದು ಇದರಿಂದ ತಿಳಿಯಬಹುದಾಗಿದೆ. ಇನ್ನು ವೀರರು ಹೋರಾಟದಲ್ಲಿ ಸತ್ತ ನಂತರ ಇಪ್ಪತ್ತು ತಲೆಮಾರುಗಳವರೆಗೂ ಆತನ ಪರಾಕ್ರಮದ ಕೀರ್ತಿ ಶಾಶ್ವತವಾಗಿ ನಿಲ್ಲುವುದು ಎಂಬುದು ಅಂದಿನ ಜನರ ನಂಬಿಕೆಯಾಗಿತ್ತು.

**ಶಾಸನಶಿಲ್ಪ:**

ಯುದ್ಧದಲ್ಲಿ ಹೋರಾಡಿ ಮಡಿದ ವೀರರ ಸ್ಮರಣೆಗಾಗಿ ನಿಲ್ಲಿಸಿದ ಹಲವಾರು ವೀರಗಲ್ಲುಗಳು ದೊರಕುತ್ತವೆ. ಅಂತಹ ಕಲ್ಲುಗಳ ಮೇಲೆ ಕೈಯಲ್ಲಿ ಖಡ್ಗ ಹಿಡಿದ ಅಥವಾ ಬಿಲ್ಲನ್ನು ಹಿಡಿದ ವೀರನ ಶಿಲ್ಪವು ಕಾಣುತ್ತದೆ. ವೀರಗಲ್ಲನ್ನು ನಿಲ್ಲಿಸುವಲ್ಲಿ, ಅದನ್ನು ನಿಲ್ಲಿಸಿದವರು ಯಾವ ಉದ್ದೇಶಕ್ಕಾಗಿ ನಿಲ್ಲಿಸಿದರು ಎಂಬುದು ಬಹು ಮುಖ್ಯವಾಗುತ್ತದೆ.

ವೀರಗಲ್ಲನ್ನು ನಿಲ್ಲಿಸುವಲ್ಲಿ ಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳೆರಡೂ ಇತ್ತೆಂದು ತೋರುತ್ತದೆ. ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನೆಡುವುದು. ಅವನ ಪರಾಕ್ರಮ ಲೋಕಕ್ಕೂ ತಿಳಿಯಲೆಂದೂ ನೆಡುವುದು ಲೌಕಿಕ ಉದ್ದೇಶವಾದರೆ, ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದು ತಮ್ಮ ಕರ್ತವ್ಯ ಎಂದು ಭಾವಿಸಿ, ಹಾಗೆ ವೀರಗಲ್ಲು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೋ, ಕೈಲಾಸವೋ, ವೈಕುಂಠವೋ ಪ್ರಾಪ್ತವಾಗುತ್ತದೆಯೆಂದು ನಂಬಿ ವೀರಗಲ್ಲುಗಳನ್ನು ನೆಡುವುದು ಪಾರಮಾರ್ಥಿಕ ಉದ್ದೇಶವಾಗಿತ್ತು.

ವೀರಗಲ್ಲನ್ನು ನಿಲ್ಲಿಸುವಲ್ಲಿನ ಪ್ರಮುಖ ಉದ್ದೇಶ ವೀರನ ಪರಾಕ್ರಮ ಲೋಕಕ್ಕೆ ತಿಳಿಯುವಂತೆ, ಅದರಿಂದ ಮುಂದಿನ ತಲೆಮಾರಿನ ವೀರರು ಉತ್ತೇಜನಗೊಳ್ಳುವಂತೆ, ಆ ವೀರನನ್ನು ತಮ್ಮ ಆದರ್ಶ ಪುರುಷನನ್ನಾಗಿ ಮಾಡಿಕೊಳ್ಳುವಂತೆ ಮಾಡುವುದೇ ಆಗಿತ್ತೆಂಬುದು ಸ್ಪಷ್ಟವಾಗುತ್ತದೆ. ವೀರಗಲ್ಲನ್ನು ಹಾಕಿಸುವುದರಿಂದ ವೀರನಿಗೆ ಅವನ ಮರಣೋತ್ತರ ಜೀವನದಲ್ಲಿ ಶ್ರೇಯಸ್ಸು ದೊರೆಯುತ್ತದೆ. ವೀರನಿಗೆ ಶ್ರೇಯಸ್ಸು ದೊರೆಯುವುದಕ್ಕಾಗಿಯೇ ವೀರಗಲ್ಲು ನಿಲ್ಲಿಸುವುದು ತಮ್ಮ ಕರ್ತವ್ಯವೆಂದು ಜನ ಭಾವಿಸಿದ್ದರು. ವೀರಗಲ್ಲನ್ನು ನಿಲ್ಲಿಸುವುದು ಒಂದು ಆಚರಣೆಯ ಅಂಗವಾಗಿತ್ತು. ಆ ಆಚರಣೆಗಳು ತಾನು ತನ್ನ ತಂದೆಯ ಬಗ್ಗೆ ಮಾಡುವ

ಸುಕಾರ್ಯ ಎಂದು ಮಡಿದ ವ್ಯಕ್ತಿಯ ಮಗ ಭಾವಿಸುತ್ತಿದ್ದನು. ಸತ್ತ ವೀರನ ಮರಣೋತ್ತರ ಜೀವನದ ಶ್ರೇಯಸ್ಸಿಗಾಗಿ ದಾನ, ಧರ್ಮ ಮುಂತಾದ ಕಾರ್ಯಗಳನ್ನು ಮಾಡುವುದರಷ್ಟೇ ಮುಖ್ಯ, ವೀರನಾದವನು ಸತ್ತಾಗ ಅವನಿಗೆ ವೀರಗಲ್ಲನ್ನು ನೆಡುವುದು ಎಂದು ಜನರು ಭಾವಿಸಿದ್ದರು.

ಸಾಮಾನ್ಯವಾಗಿ ವೀರಗಲ್ಲುಗಳನ್ನು ಸತ್ತ ವ್ಯಕ್ತಿಯ ನೇರ ಸಂಬಂಧಿಗಳು ಹಾಕಿಸುತ್ತಿದ್ದರು. ಇನ್ನು ಕೆಲವೊಮ್ಮೆ ಸಂಬಂಧಿಗಳೊಡನೆ ಊರಿನ ಜನ ಕೂಡಿಕೊಂಡು ಅಥವಾ ತಾವಾಗಿಯೇ ಸ್ವಇಚ್ಛೆಯಿಂದ ವೀರನ ಬಗ್ಗೆ ಇರುವ ವಿಶ್ವಾಸಕ್ಕೆ, ಪ್ರೀತಿ, ಕೃತಜ್ಞತೆಗೆ ಸಾರ್ವಜನಿಕರೇ ವೀರಗಲ್ಲನ್ನು ಹಾಕಿಸುತ್ತಿದ್ದರು. ಸಹಗಮನ ಪದ್ಧತಿಯು ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತದಲ್ಲಿದ್ದರೂ, ಕೆಲವು ವೀರಗಲ್ಲುಗಳನ್ನು ಸತ್ತ ವೀರನ ಹೆಂಡತಿಯೇ ಹಾಕಿಸಿರುವ ನಿದರ್ಶನಗಳು ದೊರೆಯುತ್ತವೆ. ಇದರಿಂದ ಸಹಗಮನ ಪದ್ಧತಿಯು ಕಡ್ಡಾಯವಾಗಿರಲಿಲ್ಲ ಎಂದು ಮನದಟ್ಟಾಗುತ್ತದೆ. ಸಹಗಮನ ಮಾಡದೆ ಉಳಿದ ವೀರನ ಮಡದಿಯರು ತಮ್ಮ ಗಂಡನಿಗೆ ವೀರಗಲ್ಲನ್ನು ಹಾಕುವ ಪದ್ಧತಿಯನ್ನು ಕಾಣಬಹುದು. ಒಟ್ಟಿನಲ್ಲಿ ವೀರಗಲ್ಲನ್ನು ಇಂಥವರೇ ನಿಲ್ಲಿಸಬೇಕೆಂಬ ನಿಯಮವೇನೂ ಇದ್ದಂತೆ ತೋರುವುದಿಲ್ಲ. ವೀರನಿಂದ ತಮಗಾದ ಉಪಕಾರವನ್ನು ಸ್ಮರಿಸಿ, ಅವನ ಮನೆತನದವರಿಗೆ ದತ್ತಿಯನ್ನು ಬಿಡುವಾಗಲೇ ವೀರನಿಗೆ ವೀರಗಲ್ಲನ್ನು ಊರಿನ ಮುಖ್ಯಸ್ಥರೋ ಇಲ್ಲವೇ ವೀರನ ಆಶ್ರಯದಾತರೋ ಹಾಕಿಸುತ್ತಿದ್ದರು.

ಕರ್ನಾಟಕದ ಬಹುಪಾಲು ವೀರಗಲ್ಲುಗಳು ಇಂದು ನಮಗೆ ದೊರೆಯುವುದು ದೇವಾಲಯಗಳ ಬಳಿ. ಇನ್ನು 'ಶಿವ' ದೇವಾಲಯಗಳ ಬಳಿಯಂತೂ ವೀರಗಲ್ಲುಗಳು ಸಾಮಾನ್ಯವಾಗಿ ಇದ್ದೇ ಇರುತ್ತವೆ. ಜೈನ ಬಸದಿಗಳ ಬಳಿಯಲ್ಲಿಯೂ ವೀರಗಲ್ಲುಗಳು ದೊರೆಯುತ್ತವೆ. ವೀರನು ದೇವರ ಸನ್ನಿಧಿಯಲ್ಲಿರುತ್ತಾನೆ ಎಂಬ ನಂಬಿಕೆಯಿಂದ ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ನಿಲ್ಲಿಸುತ್ತಿದ್ದರು. ವೀರನಾದವನು ಎಲ್ಲೇ ಸಾಯಲಿ ಅವನಿಗೆ ಅವನ ಸ್ವಂತ ಊರಿನಲ್ಲೇ ವೀರಗಲ್ಲನ್ನು ಹಾಕುತ್ತಿದ್ದರೆಂಬ ಅಂಶ ವೀರಗಲ್ಲುಗಳ ಪಾಠದಿಂದ ತಿಳಿದುಬರುತ್ತದೆ. ಕೆಲ ವೀರಗಲ್ಲುಗಳು ಹೊಲ, ಗದ್ದೆಗಳಲ್ಲಿ ದೊರೆಯುವುದರಿಂದ ಬಹುಶಃ ವೀರನಿಗೆ ಬಿಟ್ಟ ದತ್ತಿಯ ಬಳಿಯೇ ಆ ವೀರಗಲ್ಲನ್ನು ಹಾಕಿಸುತ್ತಿದ್ದರು.

“ವೀರಗಲ್ಲನ್ನು ನಿಲ್ಲಿಸುವುದರ ಮೂಲಕ ವೀರನ ಆತ್ಮಕ್ಕೊಂದು ಸ್ಥಳಾವಕಾಶ ಮಾಡಿಕೊಡುತ್ತೇವೆ; ಈ ಶಿಲೆಯಲ್ಲಿ ವೀರನ ಆತ್ಮ ನೆಲೆಸಿರುತ್ತದೆ; ಅದರಲ್ಲಿ ಪ್ರತಿಷ್ಠಾಪಿತವಾಗಿರುವ ವೀರ ತಮಗೆ ಕಷ್ಟದಲ್ಲಿ ನೆರವಾಗುತ್ತಾನೆ ಎಂಬ ಮನೋಧರ್ಮ ಅತಿಪ್ರಾಚೀನವಾದುದು”[೪] ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ವೀರಗಲ್ಲನ್ನು ನಿಲ್ಲಿಸುವುದೆಂದರೆ, ವೀರನ ಆತ್ಮವನ್ನು ಅದರಲ್ಲಿ ಆವಾಹನೆ ಮಾಡಿ ಪ್ರತಿಷ್ಠಾಪಿಸುವುದು. ವೀರನ ಆತ್ಮ ವೀರಗಲ್ಲಿನಲ್ಲಿರುತ್ತದೆ ಎಂದು ನಂಬಿ ಅದನ್ನು ಆರಾಧಿಸುತ್ತಿದ್ದ ಸಂಪ್ರದಾಯವೂ ನಮ್ಮಲ್ಲಿದೆ. ವೀರನು ದೇವಲೋಕವನ್ನು ಸೇರಿದ ಪುರುಷನಾದುದರಿಂದ ಅವನ ವೀರಗಲ್ಲಿಗೆ ಕಳಶ, ಕನ್ನಡಿ, ಹೂವು, ತಾಂಬೂಲ, ಕೊಡೆಯ ಮರ್ಯಾದೆಗಳನ್ನು ಆ ಊರಿನ ಜನ ಸಲ್ಲಿಸುತ್ತಿದ್ದರು.

ವೀರಗಲ್ಲುಗಳನ್ನು ನಿಲ್ಲಿಸುತ್ತಿದ್ದ ಸಮಯವೂ ಕೂಡ ತುಂಬಾ ಮುಖ್ಯವಾಗುತ್ತದೆ. ವೀರನು ಯುದ್ಧದಲ್ಲಿ ಮಡಿದ ತಿಥಿ, ವಾರ, ನಕ್ಷತ್ರಗಳ ವಿವರಗಳು ವೀರಗಲ್ಲುಗಳಲ್ಲಿ ದೊರೆಯುತ್ತವೆ. ಅದರೊಂದಿಗೆ ಯಾವಾಗ ಪ್ರತಿಷ್ಠಾಪಿಸಿದರು ಎಂಬುದು ಕೂಡ ತಿಳಿಯುತ್ತದೆ.

**ವೀರಗಲ್ಲುಗಳ ವಿಂಗಡಣೆ:**

ಅಭ್ಯಾಸದ ದೃಷ್ಟಿಯಿಂದ ವೀರಗಲ್ಲುಗಳ ವಿಂಗಡಣೆ ಮಾಡಲಾಗಿದೆ. ವೀರನಾದವನು ಯಾವುದೇ ರೀತಿಯ ವೀರಕೃತ್ಯದಲ್ಲಿ ಮಡಿದಿರಬಹುದು. ಆ ಕೃತ್ಯದ ಘಟನೆಯ ಸಂಪೂರ್ಣ ಚಿತ್ರವನ್ನು ಪುನಾರಚಿಸಬೇಕಾದರೆ ವೀರಗಲ್ಲುಗಳ ವಿಂಗಡಣೆ ಅತ್ಯವಶ್ಯಕ. ವೀರರ ಸಾವಿಗೆ ಕಾರಣವಾದ ಅವರ ವೀರಕೃತ್ಯಗಳನ್ನು ಗಮನದಲ್ಲಿಟ್ಟುಕೊಂಡು ವೀರರ ಗುಂಪನ್ನು ಹೀಗೆ ವಿಂಗಡಿಸಲಾಗಿದೆ.

೧. ಕಳ್ಳರೊಡನೆ ಹೋರಾಡಿ ಮಡಿದ ವೀರರು
೨. ಪೆಣ್ಬುಯ್ಯಲಿನಲ್ಲಿ ಮಡಿದ ವೀರರು
೩. ಗಡಿಕಾಳಗದಲ್ಲಿ ಮಡಿದ ವೀರರು
೪. ಊರಳಿವು
೫. ನೀರಲ್ಲಿ ಸತ್ತ ವೀರರು
೬. ಬೇಟೆಯಲ್ಲಿ ಸತ್ತ ವೀರರು

೭. ತುರುಗಾಳಗದಲ್ಲಿ ಮಡಿದ ವೀರರು

೮. ಯುದ್ಧದಲ್ಲಿ ಸಾವನ್ನಪ್ಪಿದ ವೀರರು

### ೧. ಕಳ್ಳರೊಡನೆ ಹೋರಾಡಿ ಮಡಿದ ವೀರರು:

ದಾರಿಗಳ್ಳರ ಹಾವಳಿಯು ಅನಾದಿಕಾಲದಿಂದಲೂ ಇದ್ದ ಒಂದು ಸಮಸ್ಯೆ. ವೈದಿಕ, ಜೈನ, ಬೌದ್ಧ, ಸಾಹಿತ್ಯ ಕೃತಿಗಳಿಂದ, ವ್ಯಾಪಾರಿಗಳನ್ನು ದಾರಿಗಳ್ಳರು ಅಡ್ಡಗಟ್ಟಿ ಅವರ ಸಂಪತ್ತನ್ನು ದೋಚಿ, ಅವರನ್ನು ಕೊಂದುಹಾಕುತ್ತಿದ್ದರು ಎಂಬುದು ತಿಳಿದುಬರುತ್ತದೆ. ವಡ್ಡಾರಾಧನೆಯಲ್ಲಿನ ಭದ್ರಬಾಹು ಭಟ್ಟಾರರ ಕಥೆಯಲ್ಲಿ ದಾರಿಗಳ್ಳರ ಪ್ರಸ್ತಾಪ ಬರುತ್ತದೆ. ನಯಸೇನನ ಧರ್ಮಾಮೃತದಲ್ಲಿನ ವಸುಭೂತಿಯ ಕಥೆಯಲ್ಲಿಯೂ ದಾರಿಗಳ್ಳರ ಪ್ರಸ್ತಾಪ ಇದೆ.

“ಕಾಳಗೌಡನ ಮಗ ಕಲ್ಲಣ್ಣ ಎಂಬುವವನು ಮಾರ್ಗದಲ್ಲಿ ಹೋಗುತ್ತಿರುವಾಗ ಕಳ್ಳರು ಬಂದು ಅವನ ಮೇಲೆ ಎರಗುತ್ತಾರೆ. ಆಗ ಅವನು ‘ಪೊಗಳ್ತೆಗಂ ನೆಗರ್ಳ್ತೆಗಂ ನೆಲೆಯಾಗಿ ಕಾದಿ’ ಮಡಿಯುತ್ತಾನೆ”[೫]. ಬಿದಿರೆಯ ‘ಗಲುಗವುಡ’ ಎಂಬುವನು ‘ತಂಮವೊಡೆಯನಲ್ಲಂಣಗಳ ಆ ಪಾದವ ಕಾಣಲೆಂದೊರಂಗೆ ಹೋದ ದಾರಿಯಲ್ಲಿ ಕಳ್ಳರು ತಾಗಿ’ ಮಡಿದ ವಿಷಯವನ್ನು ಕ್ರಿ.ಶ. ೧೧೭೩ರ ವೀರಗಲ್ಲು ತಿಳಿಸುತ್ತದೆ. ಬೋಲಿಯ ನಾಯಕ ಎಂಬುವನು ಲಿಂಗದಹಳ್ಳಿಯ ಘಟ್ಟದಲ್ಲಿ ಮದುವೆಯಾಗಿ ಬರುತ್ತಿರುವಲ್ಲಿ ಕಳ್ಳರೊಡನೆ ಹೋರಾಡಿ ಮಡಿದನೆಂದು ಕ್ರಿ.ಶ. ೧೨೭೭ರ ವೀರಗಲ್ಲು ತಿಳಿಸುತ್ತದೆ.

ಕಳ್ಳರು ಊರಿನ ಹೊರವಲಯಗಳಲ್ಲಿ ಮೇಯುತ್ತಿರುವ ತುರುಗಳನ್ನು ಅಪಹರಿಸುವುದು, ದಾರಿಯಲ್ಲಿನ ಪ್ರಯಾಣಿಕರನ್ನು ದೋಚುವುದು, ಅವುಗಳ ಜೊತೆಗೆ ಕೆಲವೊಮ್ಮೆ ಊರಿಗೂ ನುಗ್ಗಿ ಕಳ್ಳತನ ಮಾಡುತ್ತಿದ್ದರು. “ಮಹಾವಲಿ ಬಾಣರಸ ವಿಜಯಾದಿತ್ಯನ ಕಾಲದ ಒಂದು ಶಾಸನದಿಂದ, ಒಬ್ಬನು ತನ್ನ ಮನೆಗೆ ಕನ್ನ ಹಾಕಿ ಕಳ್ಳತನ ಮಾಡಲು ಯತ್ನಿಸಿದ ಕಳ್ಳರ ಮೇಲೆ ಬಿದ್ದು, ಅವರಲ್ಲಿ ನಾಲ್ಕೈದು ಜನ ಕಳ್ಳರನ್ನು ಇರಿದು, ತಾನು ಮಡಿದ ವಿಷಯ ತಿಳಿಯುತ್ತದೆ”[೬]. ದೇವಾಲಯಗಳಲ್ಲಿ ಕಳ್ಳತನ ಮಾಡುತ್ತಿದ್ದ ಕಳ್ಳರೊಡನೆ ಹೋರಾಡಿ ಮಡಿದ ವೀರರ ವಿಷಯವೂ ವೀರಗಲ್ಲುಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೧೪೩೨ರ ಒಂದು ವೀರಗಲ್ಲಿನಿಂದ, “ಶಿವರಾತ್ರಿಯ ದಿವಸ ಉಪವಾಸವಿದ್ದ ದೇವರ ಬನದಲ್ಲಿನ ದೇವಾಲಯದಲ್ಲಿ ಜಾಗರಣೆಯನ್ನು ನಡೆಸುತ್ತಿದ್ದಾಗ

ಕಳ್ಳರು ಬಂದು ದಾಳಿ ಮಾಡಿದರು. ಆ ಸಮಯದಲ್ಲಿ ಮಲ್ಲಯ್ಯನು ಕಳ್ಳರೊಂದಿಗೆ ಹೋರಾಡಿ ಅವರನ್ನು ಗಾಯ ಮಾಡಿ ತಾನೂ ಗಾಯಗೊಂಡನು. ಅವನು ಪಾಡ್ಯದ ದಿವಸ ಶುಕ್ರವಾರ ಮರಣ ಹೊಂದಿದನು. ಈತನ ತಮ್ಮ ಮಂಚಯಣ್ಣನು ಅಣ್ಣನ ಸ್ಮರಣೆಗೋಸ್ಕರ ವೀರಗಲ್ಲನ್ನು ನಡೆಸಿದನು"[೭]. ಧಾರ್ಮಿಕ ಕಾರ್ಯಗಳು ಸಾಂಗೋಪಸಾಂಗವಾಗಿ ಸಾಗಲು ಮಲ್ಲಯ್ಯ ಎಂಬ ವೀರ ತನ್ನ ಪ್ರಾಣವನ್ನೇ ಪಣಕ್ಕಿಟ್ಟು ಹೋರಾಡಿರುವುದು ಆ ಜನರ ಧಾರ್ಮಿಕ ಶ್ರದ್ಧೆ, ಭಕ್ತಿ ಉಜ್ವಲ ನಿದರ್ಶನವಾಗಿದೆ. ಕಳ್ಳರಾದವರು ತಮ್ಮ ಊರಿನ ಮೇಲೆ ಕಳ್ಳತನಕ್ಕಾಗಿ ಬಂದಾಗ ಜನ ಸ್ವಯಂಪ್ರೇರಿತರಾಗಿ ಅವರನ್ನು ಎದುರಿಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ.

ಇರಿವನೂಳಂಬನೊಳಿಪಯ್ಯನ ಆಳ್ವಿಕೆಯಲ್ಲಿ ಕೊಳ್ಳಯನೂರಿನ ಕೆಲವರು ತಮ್ಮ ಊರಿನ ಮೇಲೆ ಆಕ್ರಮಣ ಮಾಡಿದ ಕಳ್ಳರೊಂದಿಗೆ ಹೋರಾಡಿ ಸತ್ತರು ಎಂಬುದನ್ನು ಕ್ರಿ.ಶ. ೯೬೩ರ ಆಂಧ್ರಪ್ರದೇಶದ ಅನಂತಪುರ ಜಿಲ್ಲೆ, ಮಡಕಸಿರ ತಾಲ್ಲೂಕಿನ ಹೊನ್ನೇರಹಳ್ಳಿ ಶಾಸನವು ತಿಳಿಸುತ್ತದೆ. ತಳವಾರ ಚಾವೆಯನಾಯ್ಕನ ಮಗ ಕಲ್ಲ, ಅವನ ಅಣ್ಣನ ಮಗ ಕಲ್ಲ. ಅವನ ಅಣ್ಣನ ಮಗ ಸಂಕಯೆಖ್ಯರು ಬಾದಾಮಿ ದಾರಿಯಲ್ಲಿ ಕಚಕೆರೆಯ ಮಹಾಜನರ ಕೋರಿಕೆಯಂತೆ ಕಳ್ಳರೊಡನೆ ಕಾದಾಡಿ ಸತ್ತಾಗ ಅವರ ಧೈರ್ಯವನ್ನು ಮೆಚ್ಚಿದ ಮಹಾಜನ ಭೂದಾನ ನೀಡಿ; ಶಾಸನ ಹಾಕಿಸಿರುವುದನ್ನು ೧೨ನೇ ಶತಮಾನದ ಬಾಗಲಕೋಟೆ ಜಿಲ್ಲೆಯ ಕಟಗೇರಿ ಶಾಸನವು ತಿಳಿಸುತ್ತದೆ.

**೨. ಪೆಣ್ಬುಯ್ಯಲಿನಲ್ಲಿ ಸುತ್ತ ವೀರರು:**

ಪೆಣ್ಬುಯ್ಯಲ್ ಎಂಬ ಪದವು ಪೆಣ್+ಪುಯ್ಯಲ್ ಎಂಬ ಎರಡು ಶಬ್ದಗಳಿಂದ ಕೂಡಿದೆ. ಹೆಣ್ಣಿನ ಕೂಗು, ಹೆಣ್ಣಿನ ಆಕ್ರಂದನ ಎಂಬುದನ್ನು ಹೇಳುತ್ತದೆ. ಹೆಣ್ಣುಮಕ್ಕಳ ಮೇಲೆ ದುಷ್ಟರು ದೌರ್ಜನ್ಯ ಮಾಡಲು ಬಂದಾಗ ಅವರ ಹುಯ್ಯಲು ಕೇಳಿ ಹೆಣ್ಣುಮಕ್ಕಳನ್ನು ರಕ್ಷಿಸಲು ಬಂದ ವೀರರು ಅವರೊಡನೆ ಹೋರಾಡುತ್ತಿದ್ದರು. ಇಂತಹ ಹೋರಾಟದಲ್ಲಿ ವೀರರು ಮಡಿಯುತ್ತಿದ್ದರು. ಅವರ ಸ್ಮರಣೆಗಾಗಿ ನಿಲ್ಲಿಸಿದ ಕಲ್ಲುಗಳೇ "ಪೆಣ್ಬುಯ್ಯಲು ಕಲ್ಲು". ಕನ್ನಡದಲ್ಲಿ ಈವರೆಗೆ ಪೆಣ್ಬುಯ್ಯಲ್‌ಗೆ ಸಂಬಂಧಿಸಿದ ೪೬ ಶಾಸನಗಳು ಲಭ್ಯವಾಗಿವೆ ಎಂಬುದನ್ನು ಡಾ.

ಡಿ.ವಿ. ಪರಮಶಿವಮೂರ್ತಿಯವರು ಹೇಳಿದ್ದಾರೆ. ಇದರ ಕೆಲವು ಶಿಲ್ಪ ಪ್ರಕಾರಗಳನ್ನು ಹೀಗೆ ದಾಖಲಿಸಬಹುದಾಗಿದೆ.

೧. ಮುಡಿಬಿಚ್ಚಿದ ಹೆಣ್ಣುಮಕ್ಕಳ ಶಿಲ್ಪ–ಪುರುಷರು ಹೋರಾಡುತ್ತಿರುವುದು.

೨. ನಗ್ನರಾದ, ಅರೆನಗ್ನರಾದ ಹೆಣ್ಣುಮಕ್ಕಳ ಶಿಲ್ಪ, ಮಕ್ಕಳೊಂದಿಗೆ ಇರುವ ಮಹಿಳೆಯ ಶಿಲ್ಪ–ವೀರನ ಹೋರಾಟದ ಶಿಲ್ಪ.

೩. ವೀರನ ಹೋರಾಟ, ಅವನು ಅಪ್ಸರೆಯರೊಂದಿಗೆ ಇರುವಂತ ಚಿತ್ರಣ. ವೀರನ ಹಿಂದೆ ಸ್ತ್ರೀಯರ ಶಿಲ್ಪಗಳು, ವೀರನ ಸೊಂಟಕ್ಕೆ ಚುಚ್ಚಿದ ಈಟಿಯ ಚಿತ್ರ ವೀರನು ಎತ್ತರದ ಪೀಠದ ಮೇಲೆ ಕುಳಿತಿರುವುದು.....

೪. ವೀರನು ಶತ್ರುಗಳೊಡನೆ ಹೋರಾಟ ಮಾಡುತ್ತಿರುವುದು. ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ತೆಗೆದುಕೊಂಡು ಹೋಗುತ್ತಿರುವ ಶಿಲ್ಪಗಳು.

೫. ಸ್ತ್ರೀಯರ ಮೇಲೆ ಆಕ್ರಮಣ ಮಾಡುವ ಶಿಲ್ಪ. ಆಕ್ರಮಣಕಾರನ ಮೇಲೆ ವೀರನ ಆಕ್ರಮಣ.

೬. ಸ್ತ್ರೀಯರು ತಮ್ಮ ಮಕ್ಕಳೊಂದಿಗೆ ನಗ್ನರಾಗಿ, ಕೆದರಿದ ಕೇಶದೊಂದಿಗೆ ನಿಂತಿರುವುದನ್ನು ಮತ್ತು ನಾಚಿಕೆ–ಅವಮಾನದಿಂದ ತಮ್ಮ ಮರ್ಮಾಂಗವನ್ನು ಕೈಗಳಿಂದ ಮುಚ್ಚಿಕೊಂಡು ನಿಂತಿರುವ ದೃಶ್ಯಗಳು.......

೭. ಹೆಂಗಸರ ವಸ್ತ್ರಗಳಿಗೆ ಕೈಹಾಕುವುದು, ಸೀರೆ ಸೆಳೆಯುವುದು.....

ಚಿತ್ರದುರ್ಗ ಜಿಲ್ಲೆ, ಚೆಳ್ಳಕೆರೆ ತಾಲ್ಲೂಕು, ದೊಡ್ಡುಳ್ಳರ್ತಿಯಲ್ಲಿರುವ ಹತ್ತನೆಯ ಶತಮಾನದ ವೀರಗಲ್ಲಿನ ಶಿಲ್ಪ ನಮಗೆ ಮಹತ್ವದ ವಿಷಯವನ್ನು ತಿಳಿಸುತ್ತದೆ. ವಿವಸ್ತ್ರಳಾದ ಸ್ತ್ರೀಯ ಮಾನಹಾನಿಗೆ ಪ್ರಯತ್ನಿಸಿದವರನ್ನು ವೀರನು ಕೊಲ್ಲುತ್ತಿರುವಂತೆಯೂ, ಪುರುಷನೊಬ್ಬನು ಅಸಹಾಯಕ ಸ್ತ್ರೀಯ ಮೇಲೆ ಆಕ್ರಮಣ ಮಾಡುತ್ತಿರುವಂತೆಯೂ ಶಿಲ್ಪವನ್ನು ಬಿಡಿಸಲಾಗಿದೆ. ಅಲ್ಲಿ ಮಾನಹಾನಿ ನಡೆಯುತ್ತಿರುವಾಗ ವೀರನು ನಡೆಸಿದ ಹೋರಾಟದ ಚಿತ್ರವನ್ನು ಶಿಲ್ಪಿ ಕಂಡರಿಸಿದ್ದಾನೆ. ಕ್ಷತ್ರಿಯ ಪುಲಿಯಮ್ಮನು ನಡಿಯೂರನ್ನು ಆಳುತ್ತಿದ್ದಾಗ ಅವನ

ಮಗ ಪ್ರಿತುಮನು ಹೆಣ್ಣೊಂದರ ಮಾನ ಸಂರಕ್ಷಣೆ ಮಾಡಲು ಹೋಗಿ, ಶತ್ರುಗಳೊಡನೆ ಹೋರಾಡಿ ಮಡಿದ ಸಂಗತಿಯು ತಮಿಳುನಾಡಿನ ಧರ್ಮಪುರಿ ಜಿಲ್ಲೆ, ಹರೂರು ತಾಲ್ಲೂಕಿನ ಚಿನ್ನಕ್ಕವುಂಡಮತಟ್ಟಿ ಶಾಸನವು ವಿವರಿಸುತ್ತದೆ.

ಅಬ್ಬಲೂರಿನ ವೀರಗಲ್ಲು ಪೆಣ್ಬುಯ್ಯಲಿಗೆ ಸಂಬಂಧಪಟ್ಟಂತೆ ಒಂದು ಪುಟ್ಟ ಕಾವ್ಯದಂತಿದೆ. ಬೆಳಗವಟ್ಟಿಯ ಈಶ್ವರದೇವನು ಹಲವು ಅರಸರೊಡನೆ ಕೂಡಿಕೊಂಡು, ಸಾಂತಳಿಗೆ ನಾಡಿನ ನಾಯಕರೊಂದಿಗೆ ಹತ್ತು ಸಾವಿರ ಸೈನಿಕರು, ಒಂದು ಸಾವಿರ ಕುದುರೆಗಳ ಸಮೇತ ಅಬ್ಬಲೂರಿನ ಮೇಲೆ ದಾಳಿ ಮಾಡುತ್ತಾನೆ. ದಾಳಿ ಮಾಡಿ 'ಹಿಂಡುಸೆರೆ' ಮತ್ತು 'ತುರುವಂ' ಅಪಹರಿಸುತ್ತಾನೆ. ಶಾಸನಶಿಲ್ಪದಲ್ಲಿ ನಗ್ನವಾಗಿ, ಹೆದರಿಕೊಂಡು ಬಿಚ್ಚಿದ ಮುಡಿಯೊಂದಿಗೆ ನಿಂತಿರುವ ಸ್ತ್ರೀಯರನ್ನು ಚಿತ್ರಿಸಲಾಗಿರುವುದರಿಂದ 'ಹಿಂಡುಸೆರೆ' ಎಂಬುದು 'ಹೆಂಣುಸೆರೆ'ಯಾಗಿರಬಹುದು ಎಂದು ಅಂದಾಜಿಸಲಾಗಿದೆ. ಹೀಗೆ ದಾಳಿ ಮಾಡಿದಾಗ ಅಬ್ಬಲೂರಿನ ಬಡಗಿ ಕೇತೋಜನ ಮಕ್ಕಳಾದ ಮಾಚ ಮತ್ತು ಗೋಮ ಇಬ್ಬರೂ ಹೋರಾಡಿ ಹೆಣ್ಣುಗಳನ್ನು ಮತ್ತು ಗೋವುಗಳನ್ನು ರಕ್ಷಿಸಿ ಆ ಹೋರಾಟದಲ್ಲಿ ಮಡಿಯುತ್ತಾರೆ.

"ಕ್ರಿ.ಶ. ೧೨೨೪ರ ಒಂದು ವೀರಗಲ್ಲಿನಲ್ಲಿ ಶತ್ರುಗಳೊಂದಿಗೆ ಹೋರಾಡಿದ ಜಂಗುಳಿಯ ಕೇತನು ಹೆಣ್ಣುಗಳ ಸೆರೆಯನ್ನು ಬಿಡಿಸಿ, ಗೋಮಹಿಷಿಗಳ ಹಿಂತಿರುಗಿಸಿದನೆಂದಿದೆ. ಇಲ್ಲಿ ಹೆಣ್ಣುಗಳೊಂದಿಗೆ ದನ-ಕರು ಮತ್ತು ಎಮ್ಮೆಗಳನ್ನು ಸೆರೆಯಿಂದ ಬಿಡಿಸುತ್ತಾನೆ"[೮]. ಶತ್ರುಪಾಳೆಯಾದವರು ಕೇವಲ ದನ-ಕರು ಎಮ್ಮೆಗಳನ್ನು ಮಾತ್ರ ಅಪಹರಿಸುತ್ತಿರಲಿಲ್ಲ. ಮನೆಯ ಹೆಣ್ಣುಮಕ್ಕಳನ್ನು ಅಪಹರಿಸುತ್ತಿದ್ದರು. ಇದನ್ನು ನೋಡಿಕೊಂಡು ಯಾವ ಮನುಷ್ಯನಿಗೆ ತಾನೆ ಸುಮ್ಮನಿರಲಾಗುತ್ತದೆ? ಸ್ತ್ರೀಯರು ಮಾನ ರಕ್ಷಣೆಗೆ ಪುರುಷನ ಆದ್ಯ ಕರ್ತವ್ಯ ಎಂಬ ಭಾವ ಇಲ್ಲಿದೆ.

ವೀರರ ಕುಟುಂಬಗಳಿಗೆ ಕೊಟ್ಟ ದಾನವನ್ನು ಚೆನ್ನಾಗಿ ಕಾಪಾಡಬೇಕು ಎಂಬುದನ್ನು ಪ್ರಾಚೀನರ ನಂಬಿಕೆಯಾಗಿತ್ತು. "ಪಟ್ಟದಕಲ್ಲಿನಲ್ಲಿರುವ ಒಂದು ವೀರಗಲ್ಲಿನಲ್ಲಿ ವೀರನು ಇಬ್ಬರು ಶತ್ರುಗಳೊಂದಿಗೆ ಹೋರಾಡುತ್ತಿದ್ದು, ಶತ್ರುಗಳು ವೀರನೆಡೆಗೆ ಬಾಣವನ್ನು ಪ್ರಯೋಗಿಸುತ್ತಿರುವರು. ಮತ್ತಿಬ್ಬರು ಶತ್ರುಗಳು ಕುದುರೆಗಳ ಮೇಲೆ ಕುಳಿತಿರುವರು. ವೀರನ ಹಿಂದೆ ಇಬ್ಬರು ಸ್ತ್ರೀಯರು

ನಿಂತಿರುವರು. ಒಬ್ಬಳು ಸಣ್ಣ ಹುಡುಗನನ್ನು ಅಂದರೆ ತನ್ನ ಮಗುವನ್ನು ಹಿಡಿದು ನಿಂತಿದ್ದು ಸ್ತ್ರೀಯರು ವೀರನೆಡೆಗೆ ನೋಡುತ್ತಿದ್ದಾರೆ. ಇದು ಅವರ ಆತಂಕವನ್ನು ಮತ್ತು ಅವರ ಮೇಲೆ ಆಕ್ರಮಣ ನಡೆದಾಗ ವೀರರು ಅವರನ್ನು ರಕ್ಷಿಸಲು ನಿಂತದ್ದನ್ನು ಸೂಚಿಸುತ್ತದೆ. ಎರಡನೇ ಹಂತದಲ್ಲಿ ವೀರನು ಅಪ್ಸರೆಯರೊಂದಿಗೆ ಸ್ವರ್ಗಕ್ಕೆ ಪ್ರಯಾಣಿಸುತ್ತಿದ್ದಾನೆ. ಇದು ಪೂರ್ಣವಾಗಿ ಚಾಲುಕ್ಯಶೈಲಿಯಲ್ಲಿದ್ದು ವೀರ ಅಪ್ಸರೆಯರು ಮತ್ತು ಆಗಸದಲ್ಲಿ ಹಾರುವ ಶೈಲಿಯಲ್ಲಿದ್ದಾರೆ. ಕಾಲದ ದೃಷ್ಟಿಯಿಂದ ಇದು ಕರ್ನಾಟಕದ ಪ್ರಾಚೀನ ಪೆಣ್ಬುಯ್ಯಲ್ ಸ್ಮಾರಕ ಶಿಲ್ಪವಾಗಿದೆ"[೯]. ಸ್ತ್ರೀಯರ ಮಾನ-ಪ್ರಾಣಗಳನ್ನು ರಕ್ಷಿಸುವುದು ವೀರನಾದವನ ಪರಮ ಕರ್ತವ್ಯವಾಗಿತ್ತು. ಅದನ್ನು ನಿರ್ವಹಿಸುವಲ್ಲಿ ಅವರು ಹಿಂದೆ ಬಿದ್ದಿರಲಿಲ್ಲ. 'ಗೆದ್ದರೆ ಗೌರವ ಮಡಿದರೆ ವೀರ ಸ್ವರ್ಗ' ಎಂಬುದು ಅವರು ನಡೆದುಕೊಳ್ಳುತ್ತಿದ್ದರೆಂದು ಈ ಶಾಸನದಿಂದ ಮನಗಾಣಬಹುದು.

ಅಂತರವಳ್ಳಿಯ ವೀರಗಲ್ಲೊಂದರಲ್ಲಿ ವೀರನು ಶತ್ರುಗಳೊಂದಿಗೆ ಹೋರಾಡುತ್ತಿದ್ದು, ಶತ್ರುಗಳು ಅವನ ಶೌರ್ಯಕ್ಕೆ ಹೆದರಿ ಕೈಮುಗಿದುಕೊಂಡು ಮಂಡಿಯೂರಿ ಕುಳಿತು ಶರಣಾಗಿದ್ದೇವೆಂದು ಸೂಚಿಸುತ್ತಿದ್ದಾರೆ.

ಬಹುತೇಕ ಪೆಣ್ಬುಯ್ಯಲ್ ಶಾಸನಶಿಲ್ಪಗಳಲ್ಲಿ ನಗ್ನ ಅಥವಾ ಅರೆನಗ್ನರಾದ ಸ್ತ್ರೀಯರು, ಮುಡಿ ಕೆದರಿದ ಸ್ತ್ರೀಯರು, ಮಕ್ಕಳನ್ನು ಎತ್ತಿಕೊಂಡ ಅಥವಾ ಕೈಹಿಡಿದು ನಿಂತ ಮಹಿಳೆಯರನ್ನು ವೀರನ ಹಿಂಭಾಗದಲ್ಲಿ ಚಿತ್ರಿಸಲಾಗಿರುತ್ತದೆ. ಶಾಸನಶಿಲ್ಪದಲ್ಲಿ ಸಾಂಕೇತಿಕ ನಿರೂಪಣೆಗೆ ಹೆಚ್ಚಿನ ಆದ್ಯತೆಯಿರುತ್ತದೆ.

ಯಾವ ಶಾಸನಪಾಠದಲ್ಲೂ ಮಾನಭಂಗಕ್ಕೆ ಒಳಗಾದ ಮಹಿಳೆಯರ ವಿವರಗಳು ದೊರೆತಿಲ್ಲ. ಕನಿಷ್ಟಪಕ್ಷ ಅವರ ಹೆಸರುಗಳಾದರೂ ಒಂದು ದೊರಕಿಲ್ಲ. ಪುರುಷರ ಶೌರ್ಯ ಪ್ರದರ್ಶನಕ್ಕೆ ಮಹಿಳೆಯರು ಬಲಿಯಾಗುವ ದಾರುಣ ಸಮಾಚಾರ ಪೆಣ್ಬುಯ್ಯಲ್ ವೀರಗಲ್ಲಿನಲ್ಲಿದೆ. ಯಾವುದೇ ಯುದ್ಧವಾಗಲಿ, ಹೋರಾಟವಾಗಲಿ, ಜಗಳವಾಗಲಿ ಅಥವಾ ವೈಯಕ್ತಿಕ ದ್ವೇಷವಾಗಲಿ ಅದಕ್ಕೆ ಮಹಿಳೆಯರು ಮತ್ತು ಮೂಕ ಪ್ರಾಣಿಗಳು ದನ-ಕರುಗಳು ಸುಲಭವಾಗಿ ಬಲಿಯಾಗುತ್ತಿದ್ದವು. ಶತ್ರುಗಳು ದಾಳಿಮಾಡುವುದು ಮುಂಚೆಯೇ ತಿಳಿಯುತ್ತಿರಲಿಲ್ಲ. ಇದರಿಂದ ಮಹಿಳೆಯರು ಯಾವ ಸ್ಥಿತಿಯಲ್ಲೇ ಇರಲಿ, ಮಲಗಿರಲಿ,

ಸುರತದಲ್ಲಿರಲಿ, ಮಗುವಿಗೆ ಮೊಲೆಯುಣಿಸುತ್ತಿರಲಿ, ಮಕ್ಕಳಿಗೆ ಕೈ ತುತ್ತು ತಿನ್ನಿಸುತ್ತಿರಲಿ, ಹೊಲದಲ್ಲಿ ದುಡಿಯುತ್ತಿರಲಿ ಅಥವಾ ಮನೆಗೆಲಸ ಮಾಡುತ್ತಿರಲಿ ದಾಳಿಯಿಟ್ಟ ಶತ್ರುಗಳಿಗೆ ಸುಲಭವಾಗಿ ಕೈವಶವಾಗುತ್ತಿದ್ದರು. ಮಹಿಳೆಯರನ್ನು ದೇವತಾ ಸ್ಥಾನದಲ್ಲಿಟ್ಟು ಗೌರವಿಸುತ್ತಿದ್ದ ನಮ್ಮ ಸಮಾಜ ಅದೇ ವೇಳೆ ಪ್ರತೀಕಾರ, ವಿಜಯದ ನೆಪದಲ್ಲಿ ಅಬಲೆಯರ ಕಗ್ಗೊಲೆಯನ್ನು ಮಾಡುತ್ತಿತ್ತು. ಆಯಾ ಗ್ರಾಮದ ಯುವಕರೇ ಇಂತಹ ದಾಳಿಗಳನ್ನು ಎದುರಿಸಿ ಸ್ತ್ರೀ ಸಮೂಹದ ಕಣ್ಣೀರನ್ನು ಒರೆಸಬೇಕಾಗುತ್ತಿತ್ತು. ತಮ್ಮ ಪ್ರಾಣವನ್ನು ಲೆಕ್ಕಿಸದೇ ಸ್ತ್ರೀಯರ ದನ-ಕರುಗಳ ರಕ್ಷಣೆಗೆ ನಿಂತವರಿಗೆ ತೋರಿಸುವ ಒಂದು ಸಣ್ಣ ಗೌರವವೇ ವೀರಗಲ್ಲು ನಿರ್ಮಾಣ. ವೀರರ ಶೌರ್ಯವನ್ನೇ ಚಿತ್ರಿಸುವ ಉಮೇದಿನಲ್ಲಿ ಹಾನಿಗೊಳಗಾದ ಮಹಿಳೆಯರ ನೋವನ್ನು ಹಿಡಿದಿಡಲು ಶಾಸನಗಳು ವಿಫಲವಾಗಿವೆ ಎಂದೇ ಹೇಳಬೇಕು.

**೩. ಗಡಿಕಾಳಗದಲ್ಲಿ ಮಡಿದ ವೀರರು:**

ರಾಜ್ಯದ ಗಡಿಗಳ ವಿಷಯದಲ್ಲಿ ರಾಜರುಗಳ ನಡುವೆ ಯುದ್ಧಗಳು ನಡೆಯುತ್ತಿದ್ದವು. ಗ್ರಾಮ-ಪಟ್ಟಣ-ನಗರಗಳ ಸೀಮೆಯ ವಿಷಯದಲ್ಲಿ ಆಯಾ ಪ್ರದೇಶದಲ್ಲಿ ವಾಸಿಸುತ್ತಿದ್ದ ಜನರ ನಡುವೆಯೂ ಕಲಹಗಳು ಸಾಮಾನ್ಯವಾಗಿದ್ದವು. ಒಂದು ರಾಜ್ಯದ ಅರಸನು ತನ್ನ ಆಡಳಿತ ವಿಧಾನಕ್ಕನುಗುಣವಾಗಿ, ರಾಜ್ಯವನ್ನು ಹಲವಾರು ಭಾಗಗಳನ್ನಾಗಿ ವಿಂಗಡಿಸುತ್ತಿದ್ದರು. ಆ ವಿಂಗಡಣೆಯಲ್ಲಿ ಹಳ್ಳಿಗಳು ಗಡಿಗಳು ನಿರ್ಣಾಯಕವಾಗಿರುತ್ತಿದ್ದವು. ಕಾರಣಾಂತರಗಳಿಂದ ಗಡಿಯ ಒತ್ತುವರಿಯಾದಾಗ ಘರ್ಷಣೆಗಳು ಆಗುತ್ತಿದ್ದವು. ಇಂತಹ ಸಂಘರ್ಷಗಳಲ್ಲಿ ಮಡಿದವರ ಸ್ಮರಣೆಗಾಗಿ ನಿಲ್ಲಿಸಿದ ಕಲ್ಲುಗಳೇ 'ಗಡಿಯುದ್ಧದ ಕಲ್ಲು'ಗಳು.

ಗಡಿಯುದ್ಧದಲ್ಲಿ ಮಡಿದವರ ಸ್ಮರಣೆಗಾಗಿ ನಿಲ್ಲಿಸಿದ ಗಡಿ ವೀರಕಲ್ಲುಗಳ ಶಿಲ್ಪಗಳನ್ನು ಸರಿಯಾಗಿ ಗುರುತಿಸುವುದು ಕಠಿಣವೇ. ಕಾರಣ, ಅವುಗಳ ಮೇಲೆ ವೀರನು ಹಲವಾರು ಯುದ್ಧ ಆಯುಧಗಳನ್ನು ಹಿಡಿದು ಶತ್ರುಗಳೊಡನೆ ಹೋರಾಡುವಂತಿರುವ ಶಿಲ್ಪವೇ ಇರುತ್ತದೆ. ಥಟ್ಟನೆ ನೋಡಿದರೆ ಅದು 'ವೀರಗಲ್ಲು' ಎಂದೆನಿಸುತ್ತದೆ. ಆದರೆ ಇದು 'ಗಡಿಕಾಳಗ'ದ ವೀರಗಲ್ಲೆಂದು ತಿಳಿಯುವುದು ಅದರ ಮೇಲೆ ಬರೆದ ಬರಹವನ್ನು ನೋಡಿದಾಗಲೇ. ಆದುದರಿಂದ ಗಡಿಯ ಕಾಳಗದ ಶಾಸನ ಶಿಲ್ಪ ಕುರಿತು ವಿಶಿಷ್ಟವಾದ ಅಂಶಗಳನ್ನು ಗುರುತಿಸಲಾಗುವುದಿಲ್ಲ.

೧. ಕ್ರಿ.ಶ. ೧೧೯೦ರ ಶಾಸನವು ಉಪ್ಪವಳ್ಳಿಯವರೆಗೂ ಇಂದಪುರದವರೆಗೂ ಗಡಿಯ ವಿಷಯದಲ್ಲಿ ಹೋರಾಟ ನಡೆದ ಸಂಗತಿಯನ್ನು ತಿಳಿಸುತ್ತದೆ.

೨. ಸಾರೆಕೊಪ್ಪ ಶಾಸನವು "ನೇರಳಿಗೆಯ ಗ್ರಾಮದವರೆಗೂ ಕುಪ್ಪಟೂರಿನವರೆಗೂ ಸೀಮೆಯ ಸಂಬಂಧವಾಗಿ ಕದನವು ನಡೆಯುತ್ತದೆ. ಅದರಲ್ಲಿ ಕುಪ್ಪಟೂರು ಕೀರ್ತಿಯಣ್ಣ ವೀರಾವೇಶದಿಂದ ಹೋರಾಡಿ ಮಡಿದಿರುವುದನ್ನು ಸಾರುತ್ತದೆ.

೩. ಕ್ರಿ.ಶ. ೧೩ನೇ ಶತಮಾನದ ಶಾಸನವು ಯಡವುನಾಡಿನ ಗಡಿಯ ಹೋರಾಟದಲ್ಲಿ ಮಡಿದ ಚಿಕ್ಕನಾಯಕನ ಸ್ಮರಣೆಗಾಗಿ ನಿಲ್ಲಿಸಿದುದಾಗಿದೆ.

೪. ಹಾಸನ ಜಿಲ್ಲೆ ಕೋರಮಂಗಲದ ಶಾಸನವು ದುದ್ದಗ್ರಾಮದ ಗಡಿಯ ವಿಷಯದಲ್ಲಿ ಬಿಟ್ಟಿ ಯೋಜನ ಮಕ್ಕಳಾದ ಒಮ್ಮೋಜ ಮತ್ತು ಮಸಣೋಜರು ಪರಾಕ್ರಮದಿಂದ ಹೋರಾಡಿ ಮಡಿದವರ ಸ್ಮರಣೆಗಾಗಿ ನಿಲ್ಲಿಸಲಾಗಿರುವುದನ್ನು ಸಾರುತ್ತದೆ.

೫. ಜಂಬೂರು ಮತ್ತು ಹೊಸವೂರುಗಳ ನಡುವೆ ಗಡಿಯುದ್ಧವು ನಡೆದಾಗ ಈಸವೂರಿನ ತಳವಾರನಾದ ಮಾಳ ಎಂಬುವವನು ಅನೇಕರನ್ನು ಕೊಂದು ಮಡಿದಿರುವುದನ್ನು ೧೦೮೯ರ ಶಾಸನವು ತಿಳಿಸುತ್ತದೆ.

೬. ಕ್ರಿ.ಶ. ೧೧೩೬ರ ಶಾಸನವು ದಾಳಿಗೌಡ ಎಂಬಾತನು ಎರಡು ಹಳ್ಳಿಗಳ ಜೊತೆಯಲ್ಲಿ ಗಡಿಗಾಗಿ ಕಾದು ತನ್ನ ಊರ ಗಡಿಯಲ್ಲಿ ಮಡಿದಿರುವುದನ್ನು ಹೇಳುತ್ತದೆ.

ಒಂದು ಹಳ್ಳಿಗೂ ಮತ್ತೊಂದು ಹಳ್ಳಿಗೂ ಸೀಮಾ ಸಂಬಂಧದ ಕಾಳಗಗಳು ನಡೆದಾಗ ಅಕ್ಕಪಕ್ಕದ ಹಳ್ಳಿಯವರು ಪ್ರವೇಶ ಮಾಡಿ ಹೊಲ–ಮೇರೆಗಳ ನಿಷ್ಕರ್ಷೆ ಮಾಡುತ್ತಿದ್ದರು. ಇದಕ್ಕೆ ಬಹುಶಃ ಎರಡೂ ಹಳ್ಳಿಯವರೂ ಒಪ್ಪುತ್ತಿದ್ದರೆಂದು ತಿಳಿಯುತ್ತದೆ. ಈ ರೀತಿಯ ತೀರ್ಮಾನಗಳು ಅನವಶ್ಯಕ, ಉದ್ದೇಶಪೂರ್ಣ ರಕ್ತಪಾತಗಳನ್ನು ನಿಲ್ಲಿಸಿವೆ.

**೪. ಊರಳಿವು:**

ಭಾರತೀಯ ಯುದ್ಧ ತಂತ್ರಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಯುದ್ಧದಲ್ಲಿ ಗೆದ್ದ ದೊರೆಗಳು ತಾವು ಆಕ್ರಮಣ ಮಾಡಿ ಗೆದ್ದ ಅರಸನ ಸಾಮ್ರಾಜ್ಯವನ್ನು ಲೂಟಿ ಮಾಡುತ್ತಿದ್ದದ್ದು,

ಕೆಲವೊಮ್ಮೆ ಗ್ರಾಮಗಳನ್ನು ನಾಶ ಮಾಡುತ್ತಿದ್ದ ಅಂಶ ತಿಳಿಯುತ್ತದೆ. ಶತ್ರುರಾಜರ ರಾಜ್ಯವನ್ನು ಲೂಟಿ ಮಾಡುವಾಗ ತುರುಗಳನ್ನು ಕದಿಯುತ್ತಿದ್ದರು. ಫಸಲನ್ನು ಧ್ವಂಸ ಮಾಡುತ್ತಿದ್ದರು. ಹೆಂಗಸರ ಮಾನಭಂಗ ಮಾಡುತ್ತಿದ್ದರು. ಇಂತಹ ಕೃತ್ಯಗಳನ್ನು ನಮ್ಮ ಜನ 'ಊರಳಿವು' ಎಂಬುದಾಗಿ ಗುರುತಿಸುತ್ತಿದ್ದರು. ಯುದ್ಧಾನಂತರ ಗೆದ್ದ ಪಕ್ಷದವರು ಸೋತ ಪಕ್ಷದವರ ಗ್ರಾಮಗಳ ಮೇಲೆ ದುರಾಕ್ರಮಣ ಮಾಡುವ ಒಂದು ವಿಷಮ ಪರಿಸ್ಥಿತಿಯಾಗಿದೆ. ಊರುಗಳನ್ನು ಯಾವುದೇ ಕಾರಣದಿಂದ ನಾಶಗೊಳಿಸಲು ಬರುತ್ತಿದ್ದವರನ್ನು ತಡೆದು, ಅವರೊಡನೆ ಹೋರಾಡಿ, ಊರಿನ ನಾಶವನ್ನು ವೀರನು ತಡೆಯುತ್ತಿದ್ದನು. ಇಂಥಹ ಹೋರಾಟದಲ್ಲಿ ಮಡಿದವರ ಸ್ಮರಣೆಗಾಗಿ ನಿಲ್ಲಿಸಿದ ಕಲ್ಲುಗಳೇ 'ಊರಳಿವು' ಶಾಸನಗಳಾಗಿವೆ.

ಇವುಗಳ ಶಿಲ್ಪವನ್ನು ಸರಳವಾಗಿ ಪ್ರತ್ಯೇಕವಾಗಿ ಗುರುತಿಸುವುದಕ್ಕೆ ಆಗುವುದಿಲ್ಲ. ಇತರ ವೀರಗಲ್ಲುಗಳ ಮೇಲಿರುವಂತಹ ಶಿಲ್ಪವೇ ಶಿಲ್ಪಿಯು ಇಲ್ಲಿ ಕೆತ್ತಿರುತ್ತಾನೆ. ವಿಷಯದ ಪಠ್ಯದಿಂದಲೇ ಅದರ ಪ್ರಕಾರವನ್ನು ಗುರುತಿಸಬಹುದಾಗಿದೆ. ಕೆಲವೊಂದು ಉದಾಹರಣೆಗಳು....

೧. ಬಿವನ ಎಂಬ ವೀರನು ತನ್ನ ಗ್ರಾಮವನ್ನು ಮುತ್ತಿದ ಕಳ್ಳರೊಂದಿಗೆ ಹೋರಾಡಿ ಯಮನು ಉಂಡು ಕಾರಿದಂತೆ ಶತ್ರುಗಳನ್ನು ಕೊಂದು ಹಾಕುತ್ತಾನೆಂದು ಗೆಂಡ್ಲ ಗ್ರಾಮದ ಶಾಸನವು ಹೇಳುತ್ತದೆ. ಕೊನೆಯಲ್ಲಿ ಬಿವನನು ಮಡಿಯುತ್ತಾನೆ.

೨. ವಿಕ್ರಮಾದಿತ್ಯರ ಕಾಲದಲ್ಲಿ ಕಾಡುವಟ್ಟಿ ಮುತ್ತರಸನು ಕೊಯತೂರಿನ ಮೇಲೆ ದಂಡೆತ್ತಿ ಬಂದನು. ಅಜ್ಜವಾಗರ ಮಗನಾದ ಕಣ್ಣನಾರಾಯಣನ್ ಎನ್ನುವವನು ಕಾಡುವಟ್ಟಿಯ ಆಳು, ಮನೆಗೆ, ಗ್ರಾಮಕ್ಕೆ ಕನ್ನಹಾಕಿದ ಒಂಬತ್ತು ಜನ ಶತ್ರುಗಳನ್ನು ಕೊಂದು ತಾನೂ ಸಾಯುತ್ತಾನೆ. ಅದಕ್ಕೆ ಹೊಸಕೆರೆಯಲ್ಲಿ ಒಂದು ಖಂಡುಗ ಗದ್ದೆಯನ್ನು 'ಕಲ್ನಾಡಾಗಿ' ಕೊಟ್ಟುದರ ಉಲ್ಲೇಖವಿದೆ.

೩. "ಮಲ್ಲಿಗೆಯ ಗ್ರಾಮದ ಮೇಲೆ ಶತ್ರುಗಳು ದಾಳಿ ಮಾಡಿದಾಗ ಚಿಕ್ಕಣ್ಣನ ಮಗನು ಶತ್ರುಗಳೊಂದಿಗೆ ಹೋರಾಡಿ ಸತ್ತನು. ಅವನ ಸ್ಮರಣೆಗಾಗಿ ಊರಳಿವು ಶಾಸನವು ೧೨ನೇ ಶತಮಾನದಲ್ಲಿ ನಿಲ್ಲಿಸಲಾಯ್ತು"[೧೦]. ಎಂಬುದು ತಿಳಿದುಬರುತ್ತದೆ.

೪. ಗಂಗರ ಅರಸ ಪೆರ್ಮಾನಡಿಯ ಆಜ್ಞೆಯಂತೆ ಮಹಾರಾಜನೊಬ್ಬನು ಪುಲಿನಾಡಿನ ಮೇಲೆ ಆಕ್ರಮಣ ಮಾಡುತ್ತಾನೆ. ಅವರ ಸೈನ್ಯದಲ್ಲಿದ್ದ ಕಾಡುವಟ್ಟಿ ಮತ್ತು ವೂಡುವ ಎಂಬುವವರು ಪೆರ್ಮಾಳ ಎಂಬ ಊರನ್ನು ಆಕ್ರಮಿಸುತ್ತಾರೆ. ಇದನ್ನು ಕೇಳಿದ ವೀರಚೂಡಾಮಣಿ ಬಾಣದೊರೆಯು ಸೈನ್ಯವನ್ನು ಎದುರಿಸಿ ಸೋಲುತ್ತಾನೆ. ಆಗ ವೀರಬೋಳಾಮಣಿಯನ್ನು ವಿರೋಧಿಸುತ್ತಿದ್ದ ನಾಯಕರ ಕದನದ ಕೋಲಾಹಲದಲ್ಲಿ ತೇಜುಮಾನಿ ಎಂಬ ವೀರನು ಕತ್ತಿಯಿಂದ ಹೋರಾಡಿ ಸಾಯುತ್ತಾನೆ. ದೊರೆಯು ಅವನ ಮೇಲಿನ ಪ್ರೀತಿಯಿಂದ ಎಲೆಮೆಂಡಲವನ್ನು ಕಲ್ನಾಡಾಗಿ ಇತ್ತು ಗೌರವಿಸುತ್ತಾನೆ. ಇದನ್ನು ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಪಲಮನೇರ್ ತಾಲ್ಲೂಕಿನ ಕಲಕತ್ತೂರ ಶಾಸನವು ವಿವರಿಸುತ್ತದೆ.

೫. ಒಂದು ಊರಳಿವು ಕಲ್ಲಿನಲ್ಲಿ "ಜನಗನ ಮಗ ಸೊಳೆಂಬ ಗಾವುಂಡ ಎಂಬುವವನು ಒಲ್ಲದ ಊರಳಿವಿನೊಳೆ ಕಾದು ಸತ್ತಂತೆ' ಎಂದು ಹೇಳಲಾಗಿದೆ (ಕ್ರಿ.ಶ. ೧೦೭೦ರ ಶಾಸನ).

೬. ಪೆಗ್ಗಡೆನಾಯಕನೆಂಬುವವನು ಕಲ್ಗುಂಡಿಪುರದ ಊರನ್ನು ರಕ್ಷಿಸುವಾಗಿ ಆ ಕದನದಲ್ಲಿ ಸತ್ತನೆಂದು ಕ್ರಿ.ಶ. ೮೯೬ರ ಕಲ್ಗುಂಡಿ ಶಾಸನ ತಿಳಿಸುತ್ತದೆ.

೭. ಕಳ್ಳರ ಕೊಳ್ಳಿಯ ಬಾಧೆ ತಡೆಯಲು ವೀರರು ಹೋರಾಡುತ್ತಿದ್ದರು. ಅಂದರೆ ಗ್ರಾಮಕ್ಕೆ ಬೆಂಕಿಹಚ್ಚಲು ಬಂದವರನ್ನು ಅವರು ತಡೆಯುತ್ತಿದ್ದರು. ಇಂಥಹ ಕದನದಲ್ಲಿ ಮಡಿದ ವೀರನಿಗಾಗಿ ಊರಳಿವು ಕಲ್ಲು ನಿಲ್ಲಿಸುತ್ತಿದ್ದರು ಎಂದು ಕ್ರಿ.ಶ. ೧೧೦೩ರ ಶಾಸನವು ತಿಳಿಸುತ್ತದೆ.

೮. ಕ್ರಿ.ಶ. ೭೫೦ರ ಶಾಸನವು ಹೀಗೆ ಹೇಳುತ್ತದೆ–ಕೆಲವೊಮ್ಮೆ ರಾಜರೇ ಬಂದು ಪಕ್ಕದಲ್ಲಿದ್ದ ಶತ್ರು ರಾಜರ ಗ್ರಾಮಗಳನ್ನು ನಾಶಪಡಿಸುತ್ತಿದ್ದರು. ಆಗ ಗ್ರಾಮದ ವೀರರು ಅವರನ್ನು ತಡೆಯಲು ಪ್ರಯತ್ನಿಸುತ್ತಿದ್ದರು. ಅಂಥಹ ಸಂದರ್ಭದಲ್ಲಿ ವೀರರು ಮೃತರಾಗುತ್ತಿದ್ದರು.

೯. ಗಂಗರಾಜ ಕುಮಾರ ದುರ್ವಿನೀತನು ಗ್ರಾಮವೊಂದನ್ನು ನಾಶಗೊಳಿಸಲು ಬಂದಾಗ ಆ ಗ್ರಾಮದ ಎಪ್ಪತ್ತು ವೀರರು ಒಂದುಗೂಡಿ ಪ್ರತಿಭಟಿಸಿ ಊರನ್ನು ಕಾಪಾಡಿದರು ಎಂಬುದನ್ನು ಕ್ರಿ.ಶ. ೮೦೦ರ ಶಾಸನವು ತಿಳಿಸುತ್ತದೆ.

೧೦. ಸಾದೇವನೆಂಬುವವನು ಗ್ರಾಮದ ಮರ್ಯಾದೆ ಮೀರಿ ಅದನ್ನು ನಾಶಪಡಿಸಲು ಬಂದಾಗ, ಆ ಊರಿನ ಗಣರಮ್ಮ ಎಂಬ ವೀರನು ಅದನ್ನು ಎದುರಿಸಿ ಹೋರಾಡಿ ಮಡಿದುದನ್ನು ಕ್ರಿ.ಶ. ೮೮೮ರ ಶಾಸನ ತಿಳಿಸುತ್ತದೆ.

೧೧. ಮಹಾಮಾಂಡಲಿಕ ಭೂತಾರ್ಯನು ರೋಣ ಗ್ರಾಮದ ಜನರನ್ನು ಗ್ರಾಮದ ಸುಂಕವನ್ನು ಕೊಡುವಂತೆ ಒತ್ತಾಯ ಮಾಡುತ್ತಾನೆ. ಅದು ಅಗ್ರಹಾರವಾದುದರಿಂದ ಗ್ರಾಮಸ್ಥರು ವಿರೋಧಿಸುತ್ತಾರೆ. ಅವರಲ್ಲಿ ಪಂಪಯ್ಯನೆಂಬುವವನು ಮಹಾಮಾಂಡಲಿಕನಿಗೆ 'ಒಂದು ಅಕ್ಕಿಯ ಕಾಳೂ ಕೊಡುವುದಿಲ್ಲ'ವೆಂದು ಹೇಳಿ ಹೋರಾಟಕ್ಕೆ ನಿಂತುಕೊಳ್ಳುತ್ತಾನೆ. ವೀರಾವೇಶದಿಂದ ಹೋರಾಡಿ ಪಂಪಯ್ಯನು ಮಡಿಯುತ್ತಾನೆ. ಅವನ ಸ್ಮರಣೆಗಾಗಿ ಕ್ರಿ.ಶ. ೯೪೨ರಲ್ಲಿ ವೀರಗಲ್ಲನ್ನು ನೆಡಲಾಯಿತು.

**೫. ನೀರಲ್ಲಿ ಸತ್ತವರು:**

ಜನರನ್ನು ಒಂದು ದಡದಿಂದ ಮತ್ತೊಂದು ದಡಕ್ಕೆ ಸಾಗಿಸುವಲ್ಲಿ ತಮ್ಮ ಸಾಹಸವನ್ನು ತೋರಿಸಿ, ನೀರಿನಲ್ಲಿ ಮಡಿದಿರಬಹುದಾದ ವೀರರ ಎರಡು ವೀರಗಲ್ಲುಗಳು ದೊರೆಯುತ್ತವೆ. ಆದರೆ ಅವುಗಳ ಮೇಲೆ ಶಾಸನ ಇಲ್ಲವಾದ್ದರಿಂದ ಆ ಬಗ್ಗೆ ಖಚಿತವಾಗಿ ಏನನ್ನೂ ಹೇಳಲಾಗುವುದಿಲ್ಲ. ಈ ವೀರಗಲ್ಲುಗಳು ಹಂಪೆಯಿಂದ ತುಂಗಭದ್ರಾ ನದಿಯನ್ನು ದಾಟಿ ಆನೆಗೊಂದಿಗೆ ಹೋಗುವ ದಾರಿಯಲ್ಲಿ ಇವೆ. ಇಂದಿಗೂ ಅಂಬಿಗರು ಅವುಗಳನ್ನು ವಿಶೇಷ ಸಂದರ್ಭಗಳಲ್ಲಿ ಆರಾಧಿಸುತ್ತಾರೆ. ನಿಂತ ಇಬ್ಬರು ವೀರರು ತಮ್ಮ ಹುಟ್ಟುಗಳನ್ನು ಹಿಡಿದಿರುವಂತೆ ಶಿಲ್ಪದ ವಿವರಗಳನ್ನು ಬಿಡಿಸಲಾಗಿದೆ. ಈ ರೀತಿಯ ವೀರಗಲ್ಲುಗಳು ಅಪರೂಪವೆಂದೇ ಹೇಳಬಹುದು. ಪ್ರಸ್ತುತ ಸಂದರ್ಭದಲ್ಲಿ ನೌಕಾಯುದ್ಧದಲ್ಲಿ ಮಡಿದ ವೀರರ ಶಿಲ್ಪದ ವಿವರಗಳನ್ನು ಒಳಗೊಂಡ ಗೋವೆಯಲ್ಲಿನ ವೀರಗಲ್ಲುಗಳನ್ನು ಸ್ಮರಿಸಬಹುದು.

**೬. ಬೇಟೆಯಲ್ಲಿ ಮಡಿದ ವೀರರು:**

ಭಾರತದಲ್ಲಿ 'ಬೇಟೆ' ಪದ್ಧತಿಯು ಎರಡು ರೀತಿಯಲ್ಲಿ ಗುರುತಿಸಬಹುದು. ಒಂದು ಜೀವನ ನಿರ್ವಹಣೆಯ ಸಲುವಾಗಿಯೋ ಅಥವಾ ಸ್ವರಕ್ಷಣೆಯ ಸಲುವಾಗಿ ಮತ್ತೊಂದು ಅರಸು ಮನೆತನದವರು ವಿಹಾರಾರ್ಥವಾಗಿ, ಮೋಜಿಗಾಗಿ ಆಡುತ್ತಿದ್ದ ಮೃಗಯಾ ವಿಹಾರ.... ಮೊದಲನೆಯ ರೀತಿಯ ಬೇಟೆಯ ಬಗ್ಗೆ ವೀರಗಲ್ಲುಗಳಿಂದ ಮಾಹಿತಿ ದೊರೆತರೆ, ಕಾವ್ಯಗಳಿಂದ ಎರಡನೆಯ ಸ್ತರದ ಬೇಟೆಯ ವಿವರಗಳು ದೊರೆಯುತ್ತವೆ. ಭಾರತದಲ್ಲಿ ರಾಜ್ಯವಾಳಿದ ಹಲವಾರು ಅರಸುಗಳಿಗೆ ಬೇಟೆಯೆಂಬುದು ಬಹಳ ಪ್ರಿಯವಾದ ಮತ್ತು ತಮ್ಮ ಶಸ್ತ್ರಪ್ರಯೋಗ ಪರಿಣಿತಿಯ ಪ್ರೌಢಿಮೆಯನ್ನು ಪ್ರಕಾಶಪಡಿಸುವ ಕ್ರೀಡೆಯಾಗಿತ್ತು.

ಬೇಟೆಯನ್ನಾಡುವ ವಿಧಾನಗಳ ಬಗ್ಗೆ ವಿವರವಾದ ಮಾಹಿತಿಯನ್ನು ನೀಡುವ ಅಥವಾ ವಿವರಿಸುವ ಯಾವ ಶಾಸ್ತ್ರ ಗ್ರಂಥಗಳೂ ಬಂದಿಲ್ಲ. ಆದರೂ ಪ್ರಾಚೀನ ಕರ್ನಾಟಕದ ಜನ ಬೇಟೆಯಾಡುವ ಸುವ್ಯವಸ್ಥಿತ ಕ್ರಮವನ್ನು ಅರಿತಿದ್ದರು ಎಂಬುದು ಪಂಪನ ಕಾವ್ಯದಿಂದ ತಿಳಿದುಬರುತ್ತದೆ. ಕರ್ನಾಟಕದ ವೀರಗಲ್ಲುಗಳನ್ನು ಪರಿಶೀಲಿಸಿದಾಗ ಮುಖ್ಯವಾಗಿ ಕಾಡುಹಂದಿ ಮತ್ತು ಹುಲಿಯೊಡನೆ ಹೋರಾಡಿ ಸತ್ತ ವೀರರ ವೀರಗಲ್ಲುಗಳು ದೊರೆಯುತ್ತವೆ. ಇವು ಸ್ವರಕ್ಷಣೆಗಾಗಿ ಮಾಡಿದ ಬೇಟೆಗಳು. ಆನೆಗಳ ಬೇಟೆಯ ಬಗ್ಗೆ ಶಾಸನಗಳಿಂದ ಸ್ವಲ್ಪಮಟ್ಟಿಗೆ ಮಾಹಿತಿ ದೊರೆಯುತ್ತದೆ.

**ಹಂದಿಯ ಬೇಟೆಯ ವೀರಗಲ್ಲುಗಳು:**

ಹಂದಿಯ ಬೇಟೆ ಕರ್ನಾಟಕದ ಅರಸರಿಗೆ ಬಹು ಪ್ರಿಯವಾದ ಬೇಟೆಯಾಗಿತ್ತು. ರಾಷ್ಟ್ರಕೂಟ ಅರಸ ಗೋವಿಂದನು ಬೇಟೆಯಾಡುವುದರ ಸಲುವಾಗಿಯೇ ಹಂದಿಗಳನ್ನು ಮೇಯಿಸಿದ್ದನೆಂದೂ, ಒಮ್ಮೆ ತಾನು ರಾಮತೀರ್ಥಕ್ಕೆ ಬೇಟೆಯಾಡಲು ಹೋದಾಗ ಅಲ್ಲಿನ ಶಿವಧಾರಿ ಎಂಬ ಗೊರವನಿಗೆ, ಹಿಂದೆ ಕೀರ್ತಿವರ್ಮನೆಂಬ ಅರಸನು ಕೊಟ್ಟ ದತ್ತಿಯನ್ನು ಪುನರುಜ್ಜೀವಿಸಿದನೆಂದು ಒಂದು ತಾಮ್ರ ಶಾಸನದಿಂದ ತಿಳಿಯುತ್ತದೆ. ಹಂದಿಯ ಬೇಟೆಯಲ್ಲಿ ಮಡಿದ ವೀರರ ಬಗ್ಗೆ, ಬೇಟೆಯಾಡಿದ ವಿಧಾನದ ಬಗ್ಗೆ ವೀರಗಲ್ಲುಗಳ ಪಾಠದಿಂದ ಮಾಹಿತಿ ಕಡಿಮೆ ಲಭ್ಯವಾಗಿದೆ. ಕ್ರಿ.ಶ. ೧೧೪೪ರ ಒಂದು ವೀರಗಲ್ಲಿನಿಂದ ಅಗಸರ ಗೊರವನೆಂಬುವನು

ಹಂದಿಯನ್ನು ಇರಿದು ಸತ್ತನೆಂಬ ವಿಷಯ ತಿಳಿಯುತ್ತದೆ. ಕ್ರಿ.ಶ. ೧೨೪೯ರ ವೀರಗಲ್ಲು ಒಂದರಿಂದ ಬೋವೋಜನೆಂಬುವವನು ಬೇಟೆಗೆ ಹೋದಲ್ಲಿ ಹಂದಿ ಮೇಲೆ ಹಾಯ್ದು ಸತ್ತನೆಂಬ ವಿಷಯ ತಿಳಿಯುತ್ತದೆ.

ಕ್ರಿ.ಶ. ಸು. ೧೦೧೨-೧೪ರ ವೀರಗಲ್ಲಿನಿಂದ ಕನ್ನಾಲ ಎಂಬ ಗ್ರಾಮದ ಪಲ್ಲವಗಾವುಂಡ ಎಂಬ ಬೇಟೆಗಾರನ ನಾಯಿ ಮಾದಕೇಸರಿ ಎಂಬುದು ಹಂದಿಯೊಡನೆ ಹೋರಾಡುವಲ್ಲಿ ಸತ್ತ ವಿಷಯ ತಿಳಿಯುತ್ತದೆ.  ಮಡಕಶಿರಾ ತಾಲ್ಲೂಕಿನ ಒಂದು ಶಾಸನದಿಂದ ತಣ್ಣೂರು ಮತ್ತು ಚೋರಿಗ ಗಿರಿಯನ್ನಾಳುತ್ತಿದ್ದ ಅರಸನ ಪೊಣಿಗ ಎಂಬ ನಾಯಿ ಹಂದಿಯೊಡನೆ ಹೋರಾಡಿ ಸತ್ತ ವಿಷಯ ತಿಳಿಯುತ್ತದೆ. ನಾಯಿಗಳು ಬೇಟೆಯಾಡುವಲ್ಲಿ ತಮ್ಮ ಒಡೆಯರಿಗೆ ನೆರವಾಗುತ್ತಿದ್ದ ರೀತಿ ವೀರಗಲ್ಲುಗಳ ಶಿಲ್ಪದಿಂದಲೂ ತಿಳಿಯುತ್ತದೆ. ಆತಕೂರು ಮತ್ತು ಯಲಹಂಕದ ವೀರಗಲ್ಲುಗಳ ಶಿಲ್ಪವನ್ನು ನೋಡಿದರೆ ಹಂದಿ ಮತ್ತು ನಾಯಿಗಳು ಹೋರಾಡುತ್ತಿರುವ ವಿವರಗಳು ದೊರೆಯುತ್ತವೆ. ನಾಯಿಗಳು ಬೇಟೆಗಾರರಿಗೆ ಬೇಟೆಯಲ್ಲಿ ಸಹಕರಿಸುತ್ತಿದ್ದುದರಿಂದಲೇ ಅವುಗಳ ಮೇಲಿನ ವಿಶ್ವಾಸಕ್ಕೆ ವೀರಗಲ್ಲುಗಳನ್ನು ಹಾಕಿಸಿರುವುದು ತಿಳಿಯುತ್ತದೆ.

**ಹುಲಿಯ ಬೇಟೆ:**

ಭಾರತದಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಹುಲಿಯ ಬೇಟೆ ಪ್ರಚಲಿತವಿತ್ತು. ಗುಪ್ತರ ಕಾಲದ ಕೆಲವು ನಾಣ್ಯಗಳ ಮೇಲೆ ಹುಲಿಯೊಡನೆ ಹೋರಾಡುತ್ತಿರುವ ಚಿತ್ರಗಳನ್ನು ಗಮನಿಸಬಹುದು. “ಹುಲಿಯನ್ನು ಬೇಟೆಯಾಡಿ ಬಂದವನಿಗೆ ಕೊಡವ ಸಮಾಜದಲ್ಲಿ ವಿಶೇಷವಾದ ಗೌರವವುಂಟು”[೧೧]. ತಮ್ಮ ತಮ್ಮ ಸಮಾಜದ ವೀರರಿಗೆ ವಿಶೇಷ ಗೌರವ ನೀಡಲಾಗುತ್ತಿತ್ತೆ ಎಂಬುದರ ಕಡೆಗೆ ಈ ಕೊಡವ ವೀರನನ್ನು ಗೌರವಿಸಿದ ಸಂಗತಿ ಬೆಳಕು ತೋರುತ್ತದೆ. ಆದರೆ ಇಂತಹ ಹೆಚ್ಚಿನ ನಿದರ್ಶನಗಳು ದೊರಕದಿರುವುದರಿಂದ ಈ ಬಗ್ಗೆ ಖಚಿತವಾಗಿ ‘ಹೀಗೆ’ ಎಂದು ಹೇಳುವಂತಿಲ್ಲ.  ಕ್ರಿ.ಶ. ೭೫೧ರ ಒಂದು ವೀರಗಲ್ಲಿನಿಂದ ವ್ಯಕ್ತಿಯೊಬ್ಬನು ಹುಲಿಯನ್ನು ಇರಿದು ತಾನೂ ಸತ್ತನೆಂಬುದಾಗಿ ತಿಳಿದುಬರುತ್ತದೆ. ಕ್ರಿ.ಶ. ೮೫೫ರ ವೀರಗಲ್ಲು ಒಂದರಿಂದ ‘ತಮ್ಮಣಾವುಣ್ಣ’ ಎಂಬುವವನು ಹುಲಿಯನ್ನು ಕೊಂದು ತಾನೂ ಸತ್ತ ಕಾರಣ ಗಂಗಪೆರ್ಮಾಡಿ ಅವನ ಪರಾಕ್ರಮವನ್ನು ಮೆಚ್ಚಿ ೫ ಕಳಿನಿಯಷ್ಟು ಭೂಮಿಯನ್ನು

ದತ್ತಿಯಾಗಿ ಬಿಟ್ಟ ವಿಷಯ ತಿಳಿಯುತ್ತದೆ. ಇದೇ ರೀತಿ ೯೪೬ರ ವೀರಗಲ್ಲು 'ಗಾತಿಪುಲಿ' ಎಂಬುವನು ಹುಲಿಯನ್ನು ಕೊಂದು ಸತ್ತ ಕಾರಣ ಅವನ ಮನೆಯವರಿಗೆ ಭೂಮಿ ದತ್ತಿ ಬಿಟ್ಟಿರುವುದನ್ನು ತಿಳಿಸುತ್ತದೆ.

ಬಾಗಳಿಯಲ್ಲಿರುವ ಕಲ್ಯಾಣದ ಚಾಲುಕ್ಯರ ಕಾಲದ ವೀರಗಲ್ಲೊಂದರ ಶಿಲ್ಪ ಹುಲಿಯನ್ನು ಬೇಟೆಯಾಡುತ್ತಿದ್ದ ಬಗ್ಗೆ ಸ್ವಾರಸ್ಯಕರವಾದ ಮಾಹಿತಿಯನ್ನು ಒದಗಿಸುತ್ತದೆ. ವೀರನೊಬ್ಬನು ಹುಲಿಯನ್ನು ನೇರವಾಗಿ ಎದುರಿಸುತ್ತಿದ್ದರೆ, ಅವನ ಹಿಂಬದಿಯಲ್ಲಿ ಮತ್ತೊಬ್ಬನು ಮರದ ಮೇಲಿಂದ ಬಾಣವನ್ನು ಹುಲಿಯತ್ತ ಗುರಿಯಿಟ್ಟು ಬಿಡುತ್ತಿರುವಂತೆ ಶಿಲ್ಪದಲ್ಲಿ ವಿವರವನ್ನು ಬಿಡಿಸಲಾಗಿದೆ. ಹುಲಿಯನ್ನು ನೇರವಾಗಿ ಎದುರಿಸುವುದಲ್ಲದೇ ಅದನ್ನು ನೇರವಾಗಿ ಎದುರಿಸುವ ಮುನ್ನ ಈ ರೀತಿಯ ವಿಧಾನಗಳಿಂದ ಸಾಯಿಸಲು ಪ್ರಯತ್ನಿಸುತ್ತಿದ್ದರೆಂದು ತೋರುತ್ತದೆ. ಅತ್ತಿಗನಹಾಳು ಎಂಬ ಗ್ರಾಮದೊಳಕ್ಕೆ ಬಂದ ಪಂಟ ಹುಲಿಯನ್ನು 'ನಾಯಗರಾಮ' ಎಂಬುವವನು ಎದುರಿಸಿ ಅದನ್ನು ಕೊಂದು ತಾನೂ ಮಡಿದ ವಿಷಯವನ್ನು ವೀರಗಲ್ಲೊಂದು ತಿಳಿಸುತ್ತದೆ.

"ಹುಲಿಯೊಡನೆ ಹೋರಾಡಿ ಮಡಿದ ವೀರಗೀತೆಗಳು ಲಭಿಸುತ್ತವೆ. ಅವುಗಳು ಬಹುಪಾಲು ದನಕರುಗಳಿಗೆ ತೊಂದರೆಯನ್ನು ನೀಡುತ್ತಿದ್ದ ಹುಲಿಗಳನ್ನು ಕೊಂದು ಮಡಿದ ವೀರರನ್ನು ಹೊಗಳುತ್ತವೆ. ಅಂತಹ ಹೋರಾಟವೊಂದರಲ್ಲಿ ಮಡಿದ 'ಯರ್ರಪ್ಪ' ಎಂಬುವವನ ಬಗ್ಗೆ ಒಂದು ಜಾನಪದ ಗೀತೆ"[೧೨] ಹೀಗಿದೆ:

ಬಿದ್ದನಲ್ಲ ಈರ ಬಿದ್ದನಲ್ಲ ಸೂರ
ಬಿದ್ದ ಸಂದನೋರ ಮಗ ನೀರ। ವೀರಣ್ಣ
ಬಿದ್ದು ಕೀರುತಿಯ ಪಡೆದಾನೆ॥
ಈರಣ್ಣ ಮಾಡುವ ತಾವಾs ಯ್ಯಾರ್‍ಯಾರು ಮಡುದವರೆ
ಕಾಳಿಂಗನೆಂಬೋ ಸಲಗೆತ್ತು। ಜೂಲನಾಯಿ
ಮೂವರೊಂದಾಗಿ ಮಡುದವರೆ॥

**ಆನೆಯ ಬೇಟೆ:**

ಆನೆಗಳು ಕಾಡಿನಿಂದ ಒಂಟೊಂಟಿಯಾಗಿ ಹೊರಬಂದು ಜನರನ್ನು, ಬೆಳೆಗಳನ್ನು ನಾಶಪಡಿಸುತ್ತಿದ್ದ ವಿಷಯ ಶಾಸನಗಳಿಂದ ತಿಳಿದು ಬರುತ್ತದೆ. ಅಂಥಹ ಮದಗಜಗಳೊಂದಿಗೆ ಹೋರಾಡಿ, ಯುದ್ಧಕಾಲದಲ್ಲಿ ಅಲ್ಲದೆ ಇತರ ಸಮಯಗಳಲ್ಲಿಯೂ ಹೋರಾಡಿ ಮಡಿದ ವೀರರ ಬಗ್ಗೆ ಶಾಸನಗಳಲ್ಲಿ ವಿವರಗಳು ದೊರೆಯುತ್ತವೆ. ಕ್ರಿ.ಶ. ೧೪೦೭ರ ಶಾಸನದಿಂದ ಚೀಲಗೌರದರಸ ಎಂಬುವನ ಮೇಲೆ ಆನೆಯು ಬಂದಾಗ ಬೊಂಮಣ್ಣನೆಂಬುವನು ತನ್ನ ಪ್ರಾಣವನ್ನು ಕಾಪಾಡಿದ ಕಾರಣ ಆತನಿಗೆ ಚೀಲಗೌರದರಸನು ಉಂಬಳಿಯನ್ನು ಬಿಟ್ಟ ವಿಷಯ ತಿಳಿಯುತ್ತದೆ.

ಮದೋನ್ಮತ್ತ ಗೂಳಿಗಳು ಸಹ ಜನರಿಗೆ ತೊಂದರೆಯುಂಟು ಮಾಡುತ್ತಿದ್ದವು. ಅಂಥ ಸಮಯಗಳಲ್ಲಿ ಅವುಗಳನ್ನು ಎದುರಿಸುವುದೂ ವೀರತನವೆಂದೇ ಪರಿಗಣಿತವಾಗುತ್ತಿತ್ತು. ಜನಗಳನ್ನು ತನ್ನ ಕೊಂಬಿನಿಂದ ಇರಿದು ಕೊಲ್ಲುತ್ತಿದ್ದ ಗೂಳಿಯೊಂದನ್ನು ಭೂಮಾದಸೆಟ್ಟಿ ಎಂಬುವವನು ಮತ್ತು ಆತನ ಮಗ ನಾದಿಯಣ್ಣನೆಂಬುವನೂ ಇರಿಯುತ್ತಾರೆ. ಆ ಪ್ರಯತ್ನದಲ್ಲಿ ಅವರು ಸಾಯುತ್ತಾರೆ. ಅವರಿಗೆ ಬಂಮಯ್ಯ ಮತ್ತು ನಾಗಯ್ಯ ಎಂಬುವರು 'ವೀರಗಲ್ಲ'ನ್ನು ನಿಲ್ಲಿಸಿರುವುದು ತಿಳಿಯುತ್ತದೆ.

**೭. ತುರುಗಾಳಗ:**

ಮಾನವನು ತನ್ನ ಜೀವನ ನಿರ್ವಹಣೆಗಾಗಿ ವ್ಯವಸಾಯವನ್ನು ಅವಲಂಬಿಸಿದಾಗ, ಅವನಿಗೆ ಹಲವಾರು ರೀತಿಯಲ್ಲಿ ನೆರವಾದ ಪ್ರಾಣಿಯೆಂದರೆ ಅದು ಗೋವು. ಒಂದು ಸಮಾಜದ ಆರ್ಥಿಕ ವ್ಯವಸ್ಥೆಯು ಬಲಗೊಳ್ಳಬೇಕಾದರೆ ಈ ಜೀವಧನಗಳ ಅವಶ್ಯಕತೆಯಿತ್ತು. ಈ ಕಾರಣಕ್ಕಾಗಿಯೇ ಹಿಂದಿನ ಕಾಲದಲ್ಲಿ ಗೋವುಗಳು ಸಂಪತ್ತಿನ ಪ್ರತೀಕವಾಗಿದ್ದವು. ಒಂದು ಗುಂಪಿನ ಜೀವಧನಗಳನ್ನು ಮತ್ತೊಂದು ಗುಂಪಿನ ಜನ ಅಪಹರಿಸಿದಾಗ ಅವರನ್ನು ಎದುರಿಸಿ ದನಗಳನ್ನು ಹಿಂತಿರುಗಿಸುವುದು ವೀರತನದ ಮೌಲ್ಯವಾಗಿತ್ತು. ಯುದ್ಧ ಮಾಡುವುದಕ್ಕಾಗಿಯೋ, ಒಂದು ಗ್ರಾಮ ಅಥವಾ ಪ್ರಭುತ್ವ ಸಂಪತ್ತಿನ ಹರಣಕ್ಕಾಗಿಯೋ ಇನ್ನಾವುದೇ ಕಾರಣಕ್ಕಾಗಿ ಶತ್ರುಗಳು ಆಕಳನ್ನು ಹಿಡಿದು ಅಪಹರಿಸುತ್ತಿದ್ದರು. ಅಪಹರಣ ಮಾಡಿದವರನ್ನು ಎದುರಿಸುವಲ್ಲಿ

ಹೋರಾಟ ನಡೆಯುತ್ತಿತ್ತು. ಅಂತಹ ಹೋರಾಟದಲ್ಲಿ ಮಡಿದವರ ಸ್ಮರಣೆಗಾಗಿ ನಿಲ್ಲಿಸುತ್ತಿದ್ದ ಕಲ್ಲುಗಳೇ ತುರುಗೋಳ್ ಶಾಸನಗಳಾಗಿವೆ.

**ಸ್ವರೂಪ:**

೧. ಕಲ್ಲಿನ ಮೇಲೆ ವೀರನ ಚಿತ್ರ ಬಿಡಿಸಿ, ಅವನ ಪಕ್ಕದಲ್ಲಿ ಚಿಕ್ಕದಾದ ಆಕೃತಿಯಲ್ಲಿ ದನಗಳನ್ನು ಚಿತ್ರಿಸುವುದು.

೨. ಒಂದೇ ಹಂತದಲ್ಲಿ ಆರಂಭದ ತುರುಗೋಳ್ ಕಲ್ಲುಗಳು ರಚನೆಗೊಂಡವು. ನಂತರ ಅದರಲ್ಲಿ ೧–೪ ಹಂತಗಳವರೆಗೆ ಅಂತಸ್ತುಗಳು ಕಾಣಿಸಿಕೊಂಡವು. ಆಗ ಒಂದು ಚೌಕಟ್ಟಿನಲ್ಲಿ ವೀರನನ್ನು ಚಿತ್ರಿಸಿ, ಇನ್ನೊಂದು ಚೌಕಟ್ಟಿನಲ್ಲಿ ಸಾಲಾಗಿ ನಿಂತಿರುವ ದನಗಳನ್ನು ಚಿತ್ರಿಸುವುದು ನಡೆಯಿತು.

೩. ವೀರನು ಕೈಯಲ್ಲಿ ಚೂರಿಗಳನ್ನು ಹಿಡಿದಂತಿರುವ ಶಿಲ್ಪ, ಹಾಗೆಯೇ ಅವನ ಮೈಗೆಲ್ಲ ಬಾಣಗಳು ನೆಟ್ಟಿರುವುದು.  ಕಲ್ಲಿನ ಒಂದು ಮೂಲೆಯಲ್ಲಿ ದನಗಳ ಶಿಲ್ಪ ಇರುವುದು.

೪. ಕೆಲವು ಕಲ್ಲುಗಳಲ್ಲಿ ದನಗಳೊಂದಿಗೆ ಎಮ್ಮೆಯ ಶಿಲ್ಪಗಳೂ ಇರುವುದನ್ನು ಕಾಣಬಹುದು.

೫. ಮಡಿದವರ ಹೆಣಗಳನ್ನು ತುಳಿದುಕೊಂಡು ದನಗಳು ಹೋಗುತ್ತಿರುವಂತೆ ಶಿಲ್ಪಗಳಿರುವುದು.

೬. ಕುದುರೆಯ ಮೇಲೆ ಕುಳಿತ ವೀರನ ಚಿತ್ರ. ಅದರ ಹಿಂದೆ ದನಗಳಿರುವುದು.

೭. ಗೋವುಗಳನ್ನು ಅಪಹರಿಸಲು ಬಂದವನ ತಲೆಯನ್ನು ಕತ್ತರಿಸುವ ಶಿಲ್ಪ.

ಹೀಗೆ ವೈವಿಧ್ಯಮಯವಾಗಿ ‘ತುರುಗೋಳ್’ ಶಿಲ್ಪಗಳು ಸಂಶೋಧಕರು ಸಂಶೋಧಿಸಿದ್ದಾರೆ. ಒಟ್ಟಿನಲ್ಲಿ ಕಲ್ಲಿನ ಮೇಲೆ ದನಗಳ ಚಿತ್ರವಿದ್ದರೆ ಅದನ್ನು ‘ತುರುಗೋಳ್’ ವೀರಗಲ್ಲಿನ ಪ್ರಕಾರವೆಂದು ಭಾವಿಸಬೇಕು.

ವೀರನಾದವನು ತನ್ನ ಸ್ವಂತ ಗ್ರಾಮದ ಹಸುಗಳಿಗೆ ಹೋರಾಡಿದವನು, ಹೋರಾಡುವವನಲ್ಲ. ಕೇವಲ ಸ್ವಯಂಪ್ರೇರಿತನಾಗಿ ಹೋರಾಡಿ ಸತ್ತವನು. ಈ ಸ್ವಯಂಪ್ರೇರಣೆಗೆ

ಯಾವ ಮನೋಧರ್ಮ ಕಾರಣವಾಗಿತ್ತು ಎಂಬುದನ್ನು ರನ್ನನು ತನ್ನ ಕೃತಿ 'ಗದಾಯುದ್ಧ'ದಲ್ಲಿ ಹೇಳಿದ್ದಾನೆ.

ಕ್ರಿ.ಶ. ೧೦೫೮ರ ವೀರಗಲ್ಲಿನಿಂದ ಮುಡಿಗೆರೆಯನ್ನು ಆಕ್ರಮಿಸಿ ತುರುಗಳನ್ನು ಹಿಡಿದು ಹೆಣ್ಣುಮಕ್ಕಳ ಮಾನಾಪಹರಣ ಮಾಡುತ್ತಿದ್ದಾರೆಂದು ಹುಯ್ಯಲಿಡುತ್ತಿದ್ದುದನ್ನು ಕೇಳಿದ ಮಾಚಗಾವುಣ್ಣ ಎಂಬುವವನು ಸ್ವಲ್ಪವೂ ತಡಮಾಡದೇ ಅಲ್ಲಿಗೆ ಹೋಗಿ ಶತ್ರು ಪಕ್ಷದವರನ್ನು ಸೆದೆಬಡೆದು ತುರುಗಳನ್ನು ಹಿಂತಿರುಗಿಸಿದ ವಿಷಯ ತಿಳಿಯುತ್ತದೆ. "ಕ್ರಿ.ಶ. ೧೧೮೭ರ ಒಂದು ವೀರಗಲ್ಲು, ಸೊರಬವನ್ನು ಶತ್ರುಗಳು ಮುತ್ತಿ ಆ ಊರಿನ ಹಸುಗಳನ್ನು ಹೊಡೆದುಕೊಂಡು ಹೋಗುತ್ತಿರುವಾಗ ಕಾಮಗೌಡ ಎಂಬುವವನು 'ಪರೋಪಕಾರಾರ್ತ್ಥಮಿದಂ ಶರೀರಮೆಂಬ ವಾಕ್ಯಾರ್ತ್ಥಮಂ ನೆನೆದು ಮೆರೆವಾಳಿಯನೆರಪುವೆನೆಂದು ಹೋಗಿ' ತುರುಗಳನ್ನು ಹಿಂತಿರುಗಿಸಿ ಸಾಯುತ್ತಾನೆಂಬ ವಿಷಯ ತಿಳಿಸುತ್ತದೆ"[೧೩]. ಪರೋಪಕಾರ ಎಂಬುದು ಇಂದಿನ ಆಧುನಿಕ ಸಮಾಜದಲ್ಲಿ ಕೇವಲ ಬಾಯಿ ಮಾತಿನಲ್ಲೆ ವ್ಯಕ್ತವಾಗುತ್ತದೆ. ಆದರೆ ೧೨ನೇ ಶತಮಾನದ ಕರ್ನಾಟಕದ ಸಮಾಜದಲ್ಲಿ ಪರೋಪಕಾರಕ್ಕಾಗಿ ತಮ್ಮ ಶರೀರ ಎಂಬ ಉದಾತ್ತ ನಿಲುವು ವ್ಯಕ್ತವಾಗುತ್ತದೆ.

ತಮ್ಮ ಊರಿನ ತುರುಗಳನ್ನು ಬೇರೆಯವರು ಸವಾಲು ಎಸೆದೋ ಅಥವಾ ಕಳ್ಳತನಕ್ಕಾಗಿಯೋ ಅಪಹರಿಸಿದಾಗ, ತುರುಗಳನ್ನು ಕಾಯುತ್ತಿದ್ದ ಗೋಪಾಲಕರಿಗೆ ಮತ್ತು ಆ ಸ್ಥಳದ ವೀರರಿಗೆ ಮನಸ್ಥಿತಿ ಹೇಗಿರುತ್ತಿತ್ತು, ಸ್ವಾಭಿಮಾನದ ಉತ್ಸಾಹ ಹೇಗೆ ವ್ಯಕ್ತವಾಗುತ್ತಿತ್ತು ಎಂಬುದರ ವಾಸ್ತವ ಚಿತ್ರವನ್ನು ಪಂಪನು ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಬಹು ಸಮರ್ಥವಾಗಿ ನೀಡಿದ್ದಾನೆ. ತುರುಗಾಳಗಗಳಲ್ಲಿ ಹೋರಾಡಿ ಸತ್ತ ವೀರರನ್ನು ತುಳಿದು ತುರುಗಳು ಶತ್ರುಗಳತ್ತ ಹೊರಟಾಗ ಮತ್ತೆ ಇತರ ವೀರರು ಅವುಗಳನ್ನು ಹಿಂತಿರುಗಿಸಿದ ವಾಸ್ತವಿಕ ವರ್ಣನೆ ಕುರುಗೋಡು ಶಾಸನದಲ್ಲಿ ಬರುತ್ತದೆ. ಕಾಳರಸ ಎಂಬುವವನು ತನ್ನ ಪ್ರಭುವಿನ ಆಜ್ಞೆಯ ಮೇರೆಗೆ ಕುರುಗೋಡನ್ನು ಆಕ್ರಮಣ ಮಾಡಿ ತುರುಗಳನ್ನು ಅಪಹರಿಸುವಾಗ, ಅದೇ ಊರಿನ ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬ ಇಬ್ಬರು ಅಣ್ಣತಮ್ಮಂದಿರು ಹೋರಾಡಿ

ಸಾಯುತ್ತಾರೆ. ಬನವಾಸಿಯ ಒಂದು ವೀರಗಲ್ಲಿನ ಶಿಲ್ಪದಲ್ಲಿ ತುರುಗಾಳಗದಲ್ಲಿ ಮಡಿದ ವೀರರ ಹೆಣಗಳನ್ನು ತುರುಗಳು ತುಳಿದುಕೊಂಡು ಹೋಗುತ್ತಿರುವಂತೆ ವಿವರಗಳನ್ನು ಬಿಡಿಸಲಾಗಿದೆ.

ತುರುಗಾಳಗದಲ್ಲಿ ಭಾಗವಹಿಸದೆ ಮೌನವಾಗಿದ್ದ ವೀರರಿಗೆ ಸಮಾಜವು ತಿರಸ್ಕಾರದಿಂದ ನೋಡುತ್ತಿತ್ತು. ತನ್ನ ರಾಜ್ಯದ ತುರುಗಳನ್ನು ಶತ್ರುಗಳು ಹೊಡೆದುಕೊಂಡು ಹೋದಾಗ ಆ ರಾಜ್ಯದ ಮಂತ್ರಿ ಅದಕ್ಕೆ ಯಾವ ರೀತಿಯ ಪ್ರತಿಭಟನೆಯನ್ನು ತೋರಿಸುವುದಿಲ್ಲ. ಅವನು ಮನೆಗೆ ಹೋದಾಗ ಕೈಕಾಲುಗಳಿಗೆ ನೀರು ಕೊಡುವುದರ ಬದಲು ಅವನ ಹೆಂಡತಿ ಅರಿಶಿನ, ಕುಂಕುಮ ಬಳೆಗಳನ್ನು ನೀಡುತ್ತಾಳೆ. ಊಟಕ್ಕೆ ಕುಳಿತಾಗ ಅವನ ತಾಯಿ ಒಡೆದ ಹಾಲನ್ನು ಬಡಿಸುತ್ತಾಳೆ. ಈ ರೀತಿಯ ವಿಚಿತ್ರ ವರ್ತನೆಗಳು ತನ್ನ ಷಂಡತನಕ್ಕೆ ಹಾಕಿದ ಪುರಸ್ಕಾರವೆಂದು ಬಗೆದು ತನ್ನ ಗಂಡಸುತನವನ್ನು ಮೆರೆಯಲು ನೇರವಾಗಿ ಶತ್ರುಗಳೊಡನೆ ಹೋರಾಡಿ ಹಸುಗಳನ್ನು ಹಿಂತಿರುಗಿಸುವ ಪ್ರಯತ್ನ ಮಾಡುತ್ತಾನೆ ಎಂಬುದು ಜಾನಪದ ಗೀತೆಯೊಂದರಿಂದ ತಿಳಿದುಬರುತ್ತದೆ.

ಹಸುಗಳನ್ನು ಯಾರೇ ಆಗಲಿ, ಯಾವ ಕಾರಣಕ್ಕಾಗಿಯೇ ಆಗಲಿ ಅಪಹರಿಸಿದಾಗ ಅದನ್ನು ಹಿಂತಿರುಗಿ ಪಡೆಯುವುದರಿಂದ ತಮ್ಮ ಪರಾಕ್ರಮಕ್ಕೆ ಒಂದು ಅರ್ಥವಂತಿಕೆ ಬರುವುದಾಗಿ ಜನ ಭಾವಿಸಿದ್ದರು. ಈ ತುರುಗಾಳವು ಯಾವುದೇ ಮುನ್ಸೂಚನೆಯೂ ಇಲ್ಲದೆ ಆಕಸ್ಮಿಕವಾಗಿ ನಡೆಯುತ್ತಿದ್ದ ಒಂದು ರೀತಿಯ 'ಗ್ರಹಣ'ವೇ ಸರಿ. ಇದನ್ನು ಎದುರಿಸುವ ಸಲುವಾಗಿ ಯಾವುದೇ ನಿಶ್ಚಿತವಾದ ಪಡೆಯೂ ಕರ್ನಾಟಕದಲ್ಲಿ ಇರಲಿಲ್ಲ. ಈ ರೀತಿಯ ಕಾಳಗಗಳು ನಡೆದಾಗ, ಆ ಪ್ರದೇಶದ ವೀರರಾದವರು ಸ್ವಯಂಪ್ರೇರಿತರಾಗಿಯೋ, ಕೆಲವೊಮ್ಮೆ ಯಾರದೋ ಆಜ್ಞೆಯಂತೆ ಹೋರಾಟ ಮಾಡಿದವರೇ ಆಗಿರುತ್ತಾರೆ. ಇಂತಹ ಹೋರಾಟದಲ್ಲಿ ಸ್ವಯಂಪ್ರೇರಿತಳಾಗಿ ಹೋರಾಡಿ ಮಡಿದ ಹೆಣ್ಣುಮಗಳೊಬ್ಬಳ ವಿಷಯ ಕ್ರಿ.ಶ. ೧೦೪೧ರ ವೀರಗಲ್ಲೊಂದರಿಂದ ತಿಳಿಯುತ್ತದೆ. 'ಸರಕನೂರು' ಎಂಬ ಗ್ರಾಮದ ತುರುಗಳನ್ನು ಯಾರೋ ಅಪಹರಿಸಿದಾಗ, ಶತ್ರುಗಳನ್ನು ಅಟ್ಟಿಸಿಕೊಂಡು ಹೋದ 'ಮಾಚಗಾವುಂಡ' ಎಂಬುವನ ಮಗಳು 'ಲಕ್ಷ್ಮಮ್ಮ ಗಾವುಣ್ಡಿ' ತುರುಗಳನ್ನು ಹಿಂತಿರುಗಿಸಿ ಆ ಹೋರಾಟದಲ್ಲಿ ಸಾಯುತ್ತಾಳೆ. ಈ ನಿದರ್ಶನ ಸಾರುವಂತೆ, ತನ್ನ ಎದುರಿಗೆ ಸಾಗುತ್ತಿದ್ದ ಅನ್ಯಾಯವನ್ನು ಸಹಿಸದೆ ಹೆಣ್ಣುಮಗಳೊಬ್ಬಳು

ಹೋರಾಡಿರಬೇಕಾದರೆ, ಸ್ವಾಭಿಮಾನಿಗಳಾಗಿದ್ದ ಗಂಡಸರು ಸ್ವಯಂಪ್ರೇರಿತರಾಗಿ, ಇಂಥ ಹೋರಾಟಗಳಲ್ಲಿ ಪಾಲ್ಗೊಂಡು ಹೊಡೆದಾಡಿ ನ್ಯಾಯವನ್ನು ದೊರಕಿಸಿಕೊಡುತ್ತಿದ್ದರು.

ಪ್ರಾಚೀನ ಕರ್ನಾಟಕದಲ್ಲಿ ತುರುಗಾಳಗದಲ್ಲಿ ಮಡಿದ ಮತ್ತು ಇತರ ವೀರರ ಬಗ್ಗೆ ತುಂಬಾ ಗೌರವದ ಭಾವನೆ ಇತ್ತೆಂಬ ವಿಷಯ ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಿಂದ ತಿಳಿಯುತ್ತದೆ.  ಬ್ರಹ್ಮಶಿವನು ತುರುಗಾಳಗದಲ್ಲಿ ಮಡಿದ ವೀರರಿಗೆ ನಮಸ್ಕರಿಸುವ ಅವನ ನೆತ್ತರಿಂದ ಬೊಟ್ಟು ಇಟ್ಟುಕೊಳ್ಳುವ ಜನರ ಆಚರಣೆಯನ್ನು ಈ ರೀತಿ ವಿಡಂಬಿಸಿದ್ದಾನೆ.

"ತುರುಗಳುಗಳ್ದ ಪುಯ್ಯಲೊ
ಳೆರೆಯನ ಕಾರ್ಯದೊಳಮಣ್ಮಿ ಸತ್ತವನಂ ಕಂ
ಡೆರಗಿ ಬಳಿಕವನ ನೆತ್ತರೊ
ಳರಿವಿದೆ ಬೊಟ್ಟುನಿಟ್ಟುಕೊಳುವಮೂರ್ಢರ್"[೧೪]

ಬ್ರಹ್ಮಶಿವನ ಪ್ರಕಾರ ಆ ರೀತಿ ವೀರರಿಗೆ ನಮಸ್ಕಾರ ಮಾಡುವುದು, ಅವರ ರಕ್ತದಿಂದ ತಿಲಕವನ್ನು ಇಟ್ಟುಕೊಳ್ಳುವುದು ಮೂರ್ಖತನದ ಪರಮಾವಧಿಯಾಗಿದೆ. ಅದು ಏನೇ ಇರಲಿ, ಮುಖ್ಯವಾಗಿ ಗಮನಿಸಬೇಕಾದುದು ಅಂದಿನ ಜನತೆಗೆ ಈ ರೀತಿಯ ಕಾಳಗಗಳಲ್ಲಿ ಮಡಿದ ವೀರರ ಬಗ್ಗೆ ಇದ್ದ ಗೌರವ. ಸ್ವಯಂಪ್ರೇರಿತರಾಗಿಯೊ, ಜೋಳದ ಋಣ ತೀರಿಸುವ ಸಲುವಾಗಿಯೋ ತಮ್ಮ ಪ್ರಾಣವನ್ನು ಲೆಕ್ಕಿಸದೆ ಹೋರಾಡಿ ಮಡಿದ ವೀರರ ಬಗ್ಗೆ ಜನತೆಗೆ ಗೌರವ ಇರುವುದು ಸಹಜವೇ ಆಗಿದೆ.

ಕಳ್ಳತನವನ್ನು ಉದ್ದೇಶವಾಗಿಟ್ಟುಕೊಂಡು ಬಂದು ತುರುಗಳನ್ನು ಅಪಹರಿಸಿದವರ ವಿರುದ್ಧ ಹೋರಾಡಿ ಮಡಿದ ವೀರರ ಅನೇಕ ನಿದರ್ಶನಗಳು ದೊರೆಯುತ್ತವೆ. "ಪೊಲ್ಲೆಯೂರಿನ ತುರುಗಳನ್ನು ಕಳ್ಳರು ಅಪಹರಿಸಿಕೊಂಡು ಹೋದಾಗ ಚೋಳಚಾರಿ ಎಂಬುವನು ಕಳ್ಳರನ್ನು ಹಿಂಬಾಲಿಸಿ, ಆ ಕಳ್ಳರಲ್ಲಿ ಒಬ್ಬನನ್ನು ಕೊಂದು ತುರುಗಳನ್ನು ಹಿಂದಿರುಗಿಸುವಲ್ಲಿ ತಾನೂ ಸಾಯುತ್ತಾನೆ".  ಕೆಂಕೆರೆಯ ಮಹಾಜನಗಳ ತುರುಗಳನ್ನು ಕಳ್ಳರು ಅಪಹರಿಸಿಕೊಂಡು ಹೋಗುವಾಗ ಆದ ಹುಯ್ಯಲನ್ನು ಕೇಳಿ ಅದೇ ಊರಿನ 'ಮರಿಯ' ಮತ್ತು 'ಮಾದಿಗೌಡ' ಎಂಬ ಇಬ್ಬರು ವೀರರು ಹೋರಾಡಿ ತುರುಗಳನ್ನು ಹಿಂತಿರುಗಿಸಿ ಸಾಯುತ್ತಾರೆ.

ಈ ರೀತಿ ತುರುಗಳನ್ನು ಅಪಹರಿಸಿಕೊಂಡು ಹೋದಾಗ ಕಳ್ಳರನ್ನು ಹಿಂಬಾಲಿಸಿ ತುರುಗಳನ್ನು ಹಿಂತಿರುಗಿಸಿದ ವೀರರ ಬಗ್ಗೆ ಕೆಲವೊಂದು ವೀರಗೀತೆಗಳು ಪ್ರಸ್ತುತದಲ್ಲಿರುವುದನ್ನು ಗಮನಿಸಬಹುದು. "ತಮ್ಮ ದನಗಳು ಕಳೆದುಹೋದ ವಿಚಾರವನ್ನು ತನ್ನ ಮಗನಿಗೆ ತಿಳಿಯಲು ಗ್ವಾಲಣ್ಣನ ತಾಯಿ ಗ್ವಾಲಣ್ಣನನ್ನು ಹುಡುಕಿಕೊಂಡು ಹೋಗಿ ಅವನಿಗೆ

"ದನ ಹೋಗಿ ಆರು ದಿವಸ ಆರು ಹೋಗಿ ಮೂರು ದಿವಸ
ಆತಪ್ಪ ಗ್ವಾಲಣ್ಣ ಇಚಾರ ಇಲ್ಲಲ್ಲಕ
ಸ್ವಲ್ಪಾನ ಈಚಾರ ಇಲ್ಲಲ್ಲೊ ಗ್ವಾಲಣ್ಣ"

ಎಂಬುದಾಗಿ ತಿಳಿಸುತ್ತಾಳೆ" ಈ ವಿಚಾರವನ್ನು ಕೇಳಿದ ಕೂಡಲೇ ಗ್ವಾಲಣ್ಣ ಮನೆಗೆ ಹೋಗಿ ಬುತ್ತಿಯನ್ನು ಕಟ್ಟಿಕೊಂಡು ತನ್ನ ದನಗಳನ್ನು ಹುಡುಕುತ್ತಾ ಹೋಗುತ್ತಾನೆ. ಆಗ ಅವನಿಗೆ ದಾರಿಹೋಕರು

"ಅಲ್ಲಿಲ್ಲ ಇಲ್ಲಿಲ್ಲ ಕುರಿಗುಡ್ಡದ ಬ್ಯಾಡು
ಕರಿಗುಡ್ಡದ ಬ್ಯಾಡರು ಹೇಳ್ಳಿಟ್ಟ ಹಿಡಿಗ್ವಾಡಿ
ಹೇಳ್ಳಿಟ್ಟಿ ಹಿಡಿಗ್ವಾಡಿ ಹೊಗಿಸ್ಯಾರೋ ಗ್ವಾಲಣ್ಣ"

ಎಂಬುದಾಗಿ ತಿಳಿಸುತ್ತಾರೆ. ಅವರಿಂದ ತಮ್ಮ ದನಗಳ ಸುಳಿವನ್ನು ತಿಳಿದ ಗ್ವಾಲಣ್ಣ ಬೇಡರ ಕೋಟೆಗೆ ಹೋಗುತ್ತಾನೆ.

"ಹೋದವನೆ ಗ್ವಾಲಣ್ಣ ಪಕ್ಕನೆ ಒದ್ದಾನೆ
ಪಕ್ಕನ ಒದ್ದಾನೆ। ಬಾಗಿಲ ಮುರದಾನೆ
ಬಾಗಿಲು ಮುರದಾನೆ। ಬಳಿಯಾಕ ಹೋಗ್ಯಾನೆ

ದನಗಳು ನೋಡ್ತಾವ। ಸುತ್ತಾಲು ಮುತ್ಯಾವ
ಅಲ್ಲಿಂದ ಗ್ವಾಲಣ್ಣ ನದಗಳನ್ನು ಹೊಡಕಂಡು
ದನಗಳ್ನ ಹೊಡಕೊಂಡು ಬರುತಾನೆ ಗ್ವಾಲಣ್ಣ"

ಹೀಗೆ ತನ್ನ ದನಗಳನ್ನು ಹಿಂತಿರುಗಿಸಿಕೊಂಡು ಬರುತ್ತಿರುವಾಗ ಅವನನ್ನು ಬೇಡರು ಹಿಂಬಾಲಿಸಿ ಬಂದು ಅವನೊಂದಿಗೆ ಹೋರಾಡುತ್ತಾರೆ. ಅವರನ್ನೆ ಕಂಡಕೂಡಲೇ ಗ್ವಾಲಣ್ಣ,

"ನಿಂತಾನೆ ಹೋಗ್ಯಾನೆ। ಬ್ಯಾಡರ್‍ನ ಹಿಡಿದಾನೆ
ಬ್ಯಾಡರ ಹಿಡಿದಾನೆ। ಕಾಲ್ಮ್ಯಾಲೆ ಕಾಲಿಟ್ಟು
ಕಾಲ್ಮ್ಯಾಲೆ ಕಾಲಿಟ್ಟು। ಬೆನ್ನೀಗೆ ಕಟ್ಯಾನೆ
ಅಲ್ಲಿಂದ ಹೊಲದಾಗ। ಹೋಗ್ಯಾನೆ ಗ್ವಾಲಣ್ಣ
ಹೊಲದಾಗೆ ಹೋಗ್ಯಾನೆ। ಕಾಯ್‌ಕುಳ್ಳ ಆಯ್ದಾನೆ
ಕಾಯ್‌ಕುಳ್ಳ ಆಯ್ದಾನೆ। ಕಿಚ್ಚನ್ನ ಕಾಣಿಸ್ಯಾನೆ"[೧೫]

ಹೀಗೆ ಗ್ವಾಲಣ್ಣ ಬೇಡರನ್ನು ಸದೆಬಡೆದು ದನಗಳೊಡನೆ ತನ್ನ ಊರಿಗೆ ಹಿಂದಿರುಗುತ್ತಾನೆ. ಈ ಸಂತೋಷಕ್ಕಾಗಿ ತನ್ನ ಊರಿನವರನ್ನೆಲ್ಲಾ ಕರೆಯಿಸಿ ಅವರಿಗೆ ಔತಣವನ್ನು ಮಾಡುತ್ತಾನೆ.  ಎಲ್ಲರದೂ ಊಟ ಆದ ಮೇಲೆ ಗಾಯಗೊಂಡ ಗ್ವಾಲಣ್ಣ ತನ್ನ ತಾಯಿಯ ತೊಡೆಯ ಮೇಲೆ ಮಲಗಿ ಅಸುನೀಗುತ್ತಾನೆ.

**ರಾಜಕೀಯ ಉದ್ದೇಶ:**

ಕರ್ನಾಟಕದ ವೀರಗಲ್ಲುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ರಾಜಕೀಯ ಉದ್ದೇಶದಿಂದ ಮಡಿದ ತುರುಗಾಳಗಳಲ್ಲಿ ಮಡಿದ ವೀರರ ವೀರಗಲ್ಲುಗಳೇ ಹೆಚ್ಚು. ಕಾರಣ, 'ಗೋಗ್ರಹಣ' ಭಾರತೀಯ ಉದ್ಧತಂತ್ರದಲ್ಲಿ ಯುದ್ಧಾರಂಭದ ಪಾತ್ರವನ್ನು ವಹಿಸುತ್ತಲೇ ಬಂದಿದೆ. ತುರುಗಳನ್ನು ಅಪಹರಿಸಲು 'ದಾಳಿಮಾರ್ಗ'ವನ್ನು ಅನುಸರಿಸುತ್ತಿದ್ದರೆಂಬುದು ತಿಳಿದುಬರುತ್ತದೆ. ಶತ್ರುರಾಜರ ತುರುಗಳನ್ನು ಅಪಹರಿಸುವುದರ ಮೂಲಕ ಅವರ ಮೇಲೆ ಸವಾಲು ಎಸೆದು ಅವರನ್ನು ಕೆಣಕಿ ಯುದ್ಧಕ್ಕೆ ಆಹ್ವಾನವನ್ನೀಯುವುದಕ್ಕಾಗಿ ಈ ತುರುಗಾಳಗಳನ್ನು ಆರಂಭಿಸುತ್ತಿದ್ದರು. ಆಗ ತಮ್ಮ ಗೌರವವನ್ನು ಉಳಿಸಿಕೊಂಡು ಸ್ವರಕ್ಷಣೆ ಮಾಡಿಕೊಳ್ಳುವುದಕ್ಕಾಗಿ ಅವರು ಹೋರಾಡುತ್ತಿದ್ದರು.

ಕ್ರಿ.ಶ. ೧೨೦೫ರ ವೀರಗಲ್ಲಿನಲ್ಲಿ ಹೊಯ್ಸಳ ವೀರಬಲ್ಲಾಳನ ಅಧೀನದಲ್ಲಿದ್ದ ಲಕ್ಷ್ಮೀಧರ ದಂಡನಾಯಕನು ಹನ್ನೊಂದು ನಾಡನ್ನು ಆಳುತ್ತಿರುವಾಗ ಅವನು ನೇಮಿಸಿದ್ದ ಲಕ್ಕಯ್ಯ ಎಂಬುವನ ನಾಯಕತ್ವವನ್ನು ಆ ಹನ್ನೊಂದು ನಾಡಿನ ಜನರು "ಬಲ್ಲದಿರ್ದೊಡೆ", ಲಕ್ಕಯ್ಯನು ಆ ಹನ್ನೊಂದು ನಾಡಿನ ಅರವಳ್ಳಿಯ ತುರುಗಳನ್ನು ಸೆರೆಹಿಡಿದು ಆ ಊರಿನ ಬಲ್ಲಗವುಡನನ್ನು ಕೊಂದು "ದಂಡ ಮುನ್ನೂರು ಹೊನ್ನನ್ನು ಕೊಂಡು", ಸತ್ತ ಬಲ್ಲಗವುಡನ ಮನೆಯವರಿಗೆ ದತ್ತಿ

ಬಿಟ್ಟ ವಿಷಯವಿದೆ. "ಕ್ರಿ.ಶ. ೧೨೪೪ರ ವೀರಗಲ್ಲಿನ ಪ್ರಕಾರ ಬೋಗೆಯ ದಂಣ್ಣಾಯಕ ಮತ್ತು ಸೋವಿ ದಂಣ್ಣಾಯಕರಿಗೆ ವಿವಾದವಾಗುತ್ತದೆ. ಆಗ ಸೋವಿದೇವನು ಚಿಕ್ಕಕೊಲೆ ಎಂಬ ಗ್ರಾಮವನ್ನು ಆಕ್ರಮಣ ಮಾಡಿ ತುರುಗಳನ್ನ ಹಿಡಿಯುತ್ತಾನೆ. ಈ ಸೋವಿದೇವನನ್ನು ಎದುರಿಸಿ ಮಡಿದ ವೀರನ ವೀರಗಲ್ಲೊಂದು ದೊರೆಯುತ್ತದೆ"[೧೬]. ಇದು ರಾಜಕೀಯ ದ್ವೇಷಕ್ಕೆ ಗೋವುಗಳ ಅಪಹರಣ ಅದನ್ನು ವಿರೋಧಿಸಿ ಹೋರಾಡಿ ಮಡಿದ ವೀರನ ವಿವರ ತಿಳಿಸುತ್ತದೆ.

**ತುರುಗಳನ್ನು ಅಪಹರಿಸಿದವರಿಗೂ ವೀರಗಲ್ಲುಗಳು:**

ತುರುಗಾಳಗವು ಮುಖ್ಯವಾಗಿ ಸ್ವರಕ್ಷಣಾ ಯುದ್ಧ. ಸಹಜವಾಗಿಯೇ ಇಂತಹ ಹೋರಾಟದಲ್ಲಿ ತುರುಗಳನ್ನು ಹಿಂದಿರುಗಿಸುವಲ್ಲಿ ಹೋರಾಡುವ ವೀರರ ಬಗ್ಗೆ ಗೌರವ ಭಾವನೆಯಿತ್ತು. ಅದರೊಂದಿಗೆ ಗೋಗ್ರಹಣವನ್ನು ಮಾಡಿದವರ ಮೇಲೂ ಗೌರವದ ಭಾವನೆ ಕಾಣುತ್ತೇವೆ. ತುರುಗಳನ್ನು ಕಳ್ಳತನದಿಂದ ಅಪಹರಿಸಿಕೊಂಡು ಹೋದವನನ್ನು ಹೊಗಳಿರುವುದು ಎಲ್ಲಿಯೂ ಕಂಡು ಬರುವುದಿಲ್ಲ. ಆದರೆ ಅರಸರ ಆಜ್ಞೆಯಂತೆ ಶತ್ರುಪಕ್ಷದ ರಾಜ್ಯದ ಮೇಲೆ ದಾಳಿ ಮಾಡಿ ಕೆಚ್ಚಿನಿಂದ ತುರುಗಳನ್ನು ಹಿಡಿದು, ಸವಾಲು ಎಸೆದು ಶತ್ರು ತಮ್ಮ ಮೇಲೆ ಬೀಳುವಂತೆ ಮಾಡಿ, ಆಗ ಅವರೊಡನೆ ಹೋರಾಡಿ ಸತ್ತ ವೀರರನ್ನು ಹೊಗಳಿರುವ ವೀರಗಲ್ಲುಗಳು ಅಪರೂಪವಾಗಿಯಾದರೂ ದೊರೆಯುತ್ತವೆ. ತಮಿಳಿನ ಸಂಗಮ್ ಸಾಹಿತ್ಯ ಕೃತಿಗಳಿಂದ ತುರುಗಳನ್ನು ವಿರತನದಿಂದ ಅಪಹರಿಸುವ ವೀರರನ್ನು ಗೌರವಿಸುತ್ತಿದ್ದರೆನ್ನುವುದು ವ್ಯಕ್ತವಾಗುತ್ತದೆ.

ತುರುಗಳನ್ನು ಶತ್ರುಗಳಿಂದ ಹಿಂದಿರುಗಿಸುವಲ್ಲಿ ಮಾಡಿದ ವೀರರ ಅಸಂಖ್ಯಾತ ವೀರಗಲ್ಲುಗಳು ದೊರೆಯುತ್ತವೆ. ಆದರೆ, ತುರುಗಳನ್ನು ಹಿಡಿಯಲು ಹೋಗಿ ಮಡಿದ ವೀರರ ವೀರಗಲ್ಲುಗಳು ದೊರೆಯುವುದು ತೀರಾ ಅಪರೂಪ... ಕ್ರಿ.ಶ. ೧೧೫೨ರ ಒಂದು ವೀರಗಲ್ಲು ತುರುಗಳನ್ನು ಅಪಹರಿಸಲು ಹೋಗಿ ಮಡಿದ ವೀರನ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೨೦೫ರ ವೀರಗಲ್ಲಿನಿಂದ ಲಕ್ಕಯ್ಯ ಎಂಬುವನು ಅರವಳ್ಳಿಯನ್ನು ಮುತ್ತಿ ತುರುಗಳನ್ನು ಸೆರೆ ಹಿಡಿದ ವಿಷಯ ತಿಳಿಯುತ್ತದೆ. ಕ್ರಿ.ಶ. ೧೩೦೫ರ ವೀರಗಲ್ಲು ತನ್ನ ಅರಸನ ಆಜ್ಞೆಯ ಮೇರೆಗೆ ಬೀರೆಯನಾಯ್ಕ ಎಂಬುವನು ಒಂದು ಗ್ರಾಮವನ್ನು ಮುತ್ತಿ ತುರುಗಳನ್ನು ಹಿಡಿದುಕೊಂಡು

ಬರುತ್ತಿದ್ದ ಸಮಯದಲ್ಲಿ ಆ ಊರಿನವರು 'ಅಡ್ಡಹಾಯ್ದುದಲ್ಲಿ" ಅವರೊಡನೆ ವೀರತ್ವದಿಂದ ಹೋರಾಡಿ ಮಡಿದಿರುವುದನ್ನು ಸಾರುತ್ತದೆ.

ತುರುಗಳು ಒಂದು ಸಮಾಜದ 'ಜೀವಧನ'ವೂ ಧರ್ಮದ ಸಂಕೇತವೂ ಆಗಿದ್ದುದರಿಂದ ಅದನ್ನು ಅಪಹರಿಸಿದರೆ ಸುಮ್ಮನಿರುವುದು ಹೇಡಿತನವೆಂದು ಪರಿಗಣಿಸಲಾಗಿತ್ತು.

**ಕಳ್ಳತನದ ಸಲುವಾಗಿ:**

ತುರುಗಳನ್ನು ಕಳ್ಳರು ಬಹುಬೇಗ ಓಡಿಸಿಕೊಂಡು ಹೋಗುತ್ತಿದ್ದರು. ಆಗ ಗ್ರಾಮಸ್ಥರು ಕಳ್ಳರ ಬೆನ್ನುಹತ್ತಿ ಹೋಗಿ ಹೋರಾಡಿ ತುರುಗಳನ್ನು ಹಿಂದಕ್ಕೆ ತರುತ್ತಿದ್ದರು. ಏಚನಾಯಕ ಎಂಬುವನು ತನ್ನ ಊರಿನ ಹಿರಿಯರ ಆಜ್ಞೆಯಂತೆ "ತುರುವಂ ಕೊಂಡು ಪೋಪಕಳ್ಳರಂ ಪಲರಂ ಕೊಂದು ತುರುಪ ಮಗುಳ್ಚೆ" ಸಾಯುತ್ತಾನೆ. ಕೆಂಕೆರೆಯ ಮಹಾಜನಗಳ ತುರುಗಳನ್ನು "ಕಳ್ಳರು ಕೊಂದು ಹೋಹಲ್ಲಿ ಹುಯ್ಯಲಂ ಕೇಳ್ದು ಎಯ್ದಿ ಕಾದಿ" ಹಲವರನ್ನು ಕೊಂದು ತುರುಗಳನ್ನು ಹಿಂತಿರುಗಿಸಿ ಇಬ್ಬರು ವೀರರು ಮಡಿದ ವಿಷಯ ವೀರಗಲ್ಲು ಒಂದರಿಂದ ತಿಳಿದುಬರುತ್ತದೆ.

೧. ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹರೂರು ತಾಲ್ಲೂಕಿನ ಮಾಚಿನಾಯಕನ ಪಲ್ಲವರ ಶಾಸನವು ಮಹೇಂದ್ರ ರಾಜನು ಆಳುತ್ತಿದ್ದಾಗ ಚೆಂಚುರಿನ ಗೌಡನ ಮಗ ಹಾಗೂ ಮುನೆನಲ್ಲೂರ ಕಾಣಂದ ಪೂಲಮ್ಮ ತುರುಗೋಳ್‌ನಲ್ಲಿ ಮಡಿದಂತೆ ತಿಳಿದು ಬರುತ್ತದೆ.

೨. ಪಲ್ಲವ ವಂಶದ ನೊಳಂಬಾಧಿರಾಜ ಓಕಾದೇಕಮಲ್ಲನೆಂದು ಹೆಸರಾದ ಬೆಳಚೋರನ ಮಗ ಶಂಭುತುಂಗನ ಆಳ್ವಿಕೆಯಲ್ಲಿ ರಾಜಪರಿವಾರದ ಗೋವುಗಳನ್ನು ಹಿಡಿದಾಗ ಅವುಗಳನ್ನು ನಿಲ್ಲಿಸಲು ಸರಸತ್ತಿ ಕರಕನ್ನದ ಪೋಚಯ್ಯನ ಮಗ ಮಾಚಯ್ಯನು ಹೋರಾಡಿ ಮಡಿದುದನ್ನು ೧೦ನೇ ಶತಮಾನದ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹರವೂರು ತಾಲ್ಲೂಕಿನ ಪೊಮ್ಮಡಿ ಶಾಸನವು ತಿಳಿಸುತ್ತದೆ.

೩. ಬಳಲದ ಗೋವುಗಳ ಮೇಲೆ ಆಕ್ರಮಣವಾದಾಗ ಕಾಂಚೀವರದ ಕೊಡವೂರಿನ ತಿಂಮಗೌಡರ ಹೆಂಡತಿ ವಲಯಮ್ಮನ ಮಗ ಚಿಣ್ಣಮ್ಮನು ಹೋರಾಡಿ ಸತ್ತಿರುವುದನ್ನು ೯ನೇ ಶತಮಾನದ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹರೂರ ತಾಲ್ಲೂಕಿನ 'ವಮ್ಮುಡಿ ಶಾಸನ'ವು ತಿಳಿಸುತ್ತದೆ.

ತುರುಗಳನ್ನು ಕಳ್ಳರೋ, ಅರಸರೋ ಕದ್ದುಕೊಂಡು ಹೋದಾಗ ಅದು ಊರಿನ ಜನರ ಮೇಲೆ ಬೀರುವ ಪರಿಣಾಮ ಕುರಿತು ಜಾನಪದ ವೀರಗೀತೆಯೊಂದು ತಿಳಿ ಹೇಳುತ್ತದೆ. ಒಂದು ಊರಿನ ತುರುಗಳನ್ನು ಅಪಹರಿಸಿಕೊಂಡು ಹೋದಾಗ ಊರಿನ ಹೆಂಗಸರು ತಮ್ಮ ತಮ್ಮಲ್ಲಿಯೇ ಹೀಗೆ ಮಾತನಾಡಿಕೊಳ್ಳುತ್ತಾರೆ.

"ಎಂದಮ್ಮ ಆಯಿತವಾರ ಎಂದಮ್ಮ ಸ್ವಾಮಾರ
ಅಂಗಳ ಬಳಿಯಾಕ ಸಗಣಿಲ್ಲ। ಸಂದನೋರ
ಕಂದ ಕೊಂಡೋದಾ ತುರುಗಾಳ।
ನಾಳ್ಯಮ್ಮ ಆಯಿತವಾರ ಮುಂದ್ಯಮ್ಮ ಸ್ವಾಮಾರ
ಬಾಗಲು ಬಳಿಯಾಕ ಸಗಣಿಲ್ಲ। ಸಂದನೋರ
ಬಾಲ ಕೊಂಡೋದ ತುರುಗಾಳ।"[೧೭]

ಹಸುಗಳಿಲ್ಲದೆ ಅವರಿಗೆ ದಿನಗಳೂ ಗೊತ್ತಾಗುವುದಿಲ್ಲ. ಸೋಮವಾರ ಕರ್ನಾಟಕದ ಬಹುಭಾಗಗಳಲ್ಲಿ ದನಗಳನ್ನು ಪೂಜಿಸುತ್ತಾರೆ. ಆ ದಿನ ಅವುಗಳಿಂದ ಯಾವ ಕೆಲಸವನ್ನು ಮಾಡಿಸುವುದಿಲ್ಲ. ಮನೆಯ ಅಂಗಳ ಬಳಿಯುವದಕ್ಕೂ ಸಹ ಸಗಣಿ ಇಲ್ಲ. ಇನ್ನು ಹಾಲಿನ ಗತಿ, ಊರಿನ ಮಕ್ಕಳ ಗತಿ....? ಮುಂತಾದ ಪರಿಣಾಮಗಳನ್ನು ಜಾನಪದ ಕವಿ ನಮ್ಮ ಊಹೆಗೇ ಬಿಟ್ಟಿದ್ದಾನೆ. ತಮ್ಮ ಊರಿನ ದನಗಳನ್ನು ವೀರನಾದವನು ಹಿಂತಿರುಗಿಸಿಕೊಂಡು ಬಂದಾಗ ಆ ಊರಿನವರು ಅದೆಷ್ಟು ಸಂಭ್ರಮಿಸಿ ಅವನನ್ನು ಗೌರವಿಸುತ್ತಾರೆ ಎಂಬುದರ ಬಗ್ಗೆ ವೀರಗೀತೆಯೊಂದು ಹೀಗೆ ಹೇಳುತ್ತದೆ.

"ತುರುಗಾಳ ವಡಕೊಂಡು ತುರುಮಂದಿ ನಿಲ್ಲಿಸ್ಯಾನೆ
ಬಿರುದಿನೆಗ್ಗಾಳ ಇಡಿಸ್ಯಾನ ಬೆಳ್ಳನಾರು
ಬಾಲಾಗೆ ಈ ಬಿರುದು ಸಲುವೋದು
ಅವುಗಳ ಇಡಿತಂದು ವೋಣ್ಯಾಗ ನಿಲಿಸ್ಯಾನೆ
ದಾರದೆಗ್ಗಾಳ ಇಡಿಸ್ಯಾನೆ ಬೆಳ್ಳನಾರು
ಬಾಬಾಗೆ ಈ ಬಿರುದು ಸಲುವೋದು
ಆವು ಬಂದಾವು ಬಾರೆ ಅಡೆದೋಳೆ ಗಿರಿಯನ್ನ
ವೂವಿನರಿವಾಣದಾಕೆ ದವನಾತಿ-ದೂಪನಾಕಿ
ಆವಿಗಾರುತಿಯ ಬೆಳಗಮ್ಮ"[೧೮]

**೮. ಯುದ್ಧದಲ್ಲಿ ಮಡಿದ ವೀರರ ವೀರಗಲ್ಲುಗಳು:**

ಹಿಂದೆ ವಿವರಿಸಿದ ಶಾಸನ ಪ್ರಕಾರಗಳಿಗಿಂತಲೂ ಹೆಚ್ಚಿಗೆ ಸಿಕ್ಕುವ ವೀರಗಲ್ಲುಗಳು ಯುದ್ಧದ ಸಂದರ್ಭಗಳಲ್ಲಿ ಹೋರಾಡಿ ಮಡಿದವುಗಳಾಗಿವೆ. ಈ 'ಯುದ್ಧ' ಎನ್ನುವುದು ಮನುಷ್ಯ ಸ್ವಭಾವಕ್ಕೆ ಅಂಟಿಬಂದ ಹುಟ್ಟುಗುಣ. ವೇದ, ಪುರಾಣ, ಸಾಹಿತ್ಯ ಕೃತಿಗಳಲ್ಲಿ ಯುದ್ಧದ ಪರಿಣಾಮಗಳು; ಯುದ್ಧದಿಂದಾಗಿ ಒಬ್ಬ ಅರಸನ, ರಾಜ್ಯದ ಏಳಿಗೆ ಮತ್ತು ನಾಶ ಆಗಿರುವುದರ ಚಿತ್ರಗಳು ಕಂಡುಬರುತ್ತವೆ. ಯುದ್ಧದಿಂದಲೇ ತನ್ನ ಏಳಿಗೆ, ತನ್ನ ಶತ್ರುಗಳ ನಾಶ ಎಂಬುದಾಗಿ ಅಂದಿನ ಅರಸರು ಭಾವಿಸಿದಂತೆ ತೋರುತ್ತದೆ. ಆ ಯುದ್ಧಗಳ ಹಿಂದೆ ಕೆಲವು ಕಾರಣಗಳನ್ನು ಗುರುತಿಸಬಹುದು.

- ರಾಜ ಮನೆತನಗಳ ನಡುವೆ ಬೆಳೆದು ಬಂದ ಮತ್ಸರ
- ದಾಯಾದಿ ಅಥವಾ ತಂದೆ-ಮಕ್ಕಳ ನಡುವಿನ ವೈಮನಸ್ಸು
- ಅರಸನಾದವನಿಗೂ, ಸಾಮಂತ ಅರಸನಿಗೂ ಉಂಟಾದ ವೈಯಕ್ತಿಕ ಘರ್ಷಣೆಗಳು ಮತ್ತು ಪರಸ್ಪರರಲ್ಲಿ ಉಂಟಾದ ತಪ್ಪುಗ್ರಹಿಕೆಗಳು.
- ಕೆಲವೊಮ್ಮೆ ಅಧಿಕಾರಿಗಳ ಅಥವಾ ಅರಸರ ದೌರ್ಜನ್ಯವನ್ನು ಪ್ರತಿಭಟಿಸಿ ಅವರ ಮೇಲೆ ಸಿಡಿದೆದ್ದಿರುವುದು.
- ಇಡೀ ಭೂಮಂಡಲವೇ ಗೆಲ್ಲಬೇಕೆಂಬ ಮಹಾತ್ವಾಕಾಂಕ್ಷೆ.....

ಯುದ್ಧ ಎಂಬುದು ಮಾನವ ತನ್ನ ವೈಯಕ್ತಿಕ ಪ್ರತಿಷ್ಠೆ, ಅನುಕೂಲತೆಗಳನ್ನು ಹೆಚ್ಚಿಸಿಕೊಳ್ಳಲು ನಡೆಸಿದ ಪ್ರಯತ್ನದ ಫಲ. ಯುದ್ಧವೆಂಬುದು ಎರಡು ಪಕ್ಷಗಳ ಮಧ್ಯೆ ನಡೆಯುತ್ತದೆ. ಯಾವುದೇ ಯುದ್ಧವನ್ನು ಗಮನಿಸಿದಾಗ ಅದು ಎರಡೂ ಕಡೆಯವರ ದೃಷ್ಟಿಯಲ್ಲಿ ಪ್ರತಿಗಾಮಿಯಾಗಿರಲೂ ಸಾಧ್ಯ. ಪ್ರತಿಗಾಮಿ ಶಕ್ತಿಯೊಡನೆ ಪ್ರಗತಿಗಾಮಿಗಳು ಮಾಡಿದ ಹೋರಾಟವಾಗಿರಲಿಕ್ಕೂ ಸಾಧ್ಯವಿದೆ. ಯುದ್ಧಕ್ಕೆ ತೆರಳುವ ಮುಂಚೆ ವೀರರಾದವರು, ಉತ್ಸಾಹದಿಂದ ತಮಗೆ ತಮ್ಮ ಸ್ವಾಮಿಯ ಬಗ್ಗೆ ಇರುವ ವಿಶೇಷ ಅಭಿಮಾನದಿಂದ, ತಮ್ಮ ವೀರತನದ ಬಗ್ಗೆ ಇದ್ದ ಸ್ವಾಭಿಮಾನದಿಂದ ಪಂಥಗಳನ್ನು ತೊಡುತ್ತಿದ್ದರು. ಅಂದಿನ ವೀರರೂ, ಅರಸರೂ ತೊಡುತ್ತಿದ್ದ ಪ್ರತಿಜ್ಞೆಗಳಲ್ಲಿ ಕೆಲವನ್ನು ಗುರುತಿಸಬಹುದು.

- ಯುದ್ಧದಲ್ಲಿ ಜಯ ಪಡೆಯುವವರೆಗೆ ನಾನು ಯಾವುದೇ ರೀತಿಯ ಆಹಾರವನ್ನು ಸ್ವೀಕರಿಸುವುದಿಲ್ಲ.
- ಎಂತಹ ದುಃಸ್ಥಿತಿ ಒದಗಿ ಬಂದರೂ ರಣರಂಗದಿಂದ ಓಡಿ ಹೋಗುವುದಿಲ್ಲ.... ಕ್ರಿ.ಶ. ೯೪೦ರ ಶ್ರವಣಬೆಳಗೊಳದ ವೀರಗಲ್ಲು ಗಂಗರ ಅರಸನೊಬ್ಬನು ಲೆಂಕನಾದ ಬೊಯಿಗನೆಂಬುವನು ಯುದ್ಧಕ್ಕೆ ಹೊರಡುವ ಮುನ್ನವೇ ತನ್ನ ಮರಣವನ್ನು ನಿರ್ಧರಿಸಿ ಯುದ್ಧಕ್ಕೆ ಹೊರಡುತ್ತಾನೆ ಎಂಬುದನ್ನು ಸಾರುತ್ತದೆ. ಯುದ್ಧಕ್ಕೆ ಹೊರಡುವ ಮುನ್ನ ವೀರನಾದವನಿಗೆ ತಾಂಬೂಲವನ್ನು ಕೊಟ್ಟು ಅರಸರು ಕಳುಹಿಸುತ್ತಿದ್ದರೆಂಬ ಅಂಶ ವೀರಗಲ್ಲುಗಳ ಪಾಠದಿಂದ ತಿಳಿದುಬರುತ್ತದೆ. "ಕ್ರಿ.ಶ. ೧೩೧೦ರ ವೀರಗಲ್ಲಿನಿಂದ ವೀರಬಲ್ಲಾಳನು ಸಂಗಮನೆಂಬ ವೀರನನ್ನು ಯುದ್ಧಕ್ಕೆ ವೀಳೆಯನ್ನು ಕೊಟ್ಟು ಕಳುಹಿಸಿದನೆಂದು ತಿಳಿದುಬರುತ್ತದೆ"[೧೯]

ತಮ್ಮ ಮೊರೆಹೊಕ್ಕವರನ್ನು ಕಾಯುವುದು, ಅವರಿಗೆ ಜೀವದಾನ ಮಾಡುವುದು ವೀರನ ಪರಾಕ್ರಮಕ್ಕೆ ಮೆರಗು ನೀಡುವಂತದ್ದು ಎಂಬುದಾಗಿ ಅಂದಿನ ಜನಸಾಮಾನ್ಯರು, ವೀರರು ಹಾಗು ಅರಸರು ಭಾವಿಸಿದ್ದರು. ಕರ್ನಾಟಕದ ಶಾಸನಗಳಿಂದ "ರಣರಂಗದಲ್ಲಿ ಹುಲ್ಲು ಕಚ್ಚಿದವರನ್ನು, ಭೀತರನ್ನು, ನೀರನ್ನು ಹೊಕ್ಕವರನ್ನು, ಶಿವಲಿಂಗವನ್ನಪ್ಪಿದವರನ್ನು, ಹುತ್ತವೇರಿದವರನ್ನು ಕೊಲ್ಲಕೂಡದೆಂಬ ಯುದ್ಧ ನೀತಿಯಿದ್ದಿತು"[೨೦] ಎಂಬುದಾಗಿ ತಿಳಿಯುತ್ತದೆ.

ಇದಕ್ಕೆ ಪುಷ್ಠಿ ನೀಡುವಂತಿದೆ ಕ್ರಿ.ಶ. ೧೧೪೬ರ ವೀರಗಲ್ಲು ವೀರನು ಯುದ್ಧವನ್ನು ಮಾಡುತ್ತ, ಯುದ್ಧರಂಗದಲ್ಲಿ ತಾನು ಕಂಡ ಹುತ್ತವೇರಿದವರನ್ನು ಹುಲ್ಲು ಕಚ್ಚಿದವರನ್ನು ಕೊಲ್ಲದೆ ಅವರನ್ನು ಕಾಯ್ದು ಕಳುಹಿ, ತಾನು ಮುಂದುವರಿದು ಯುದ್ಧ ಮಾಡುತ್ತಾ ವೀರಮರಣವನ್ನು ಪಡೆದ ಸಂಗತಿಯು ತಿಳಿಯುತ್ತದೆ.

ಆಕ್ರಮಣಕಾರಿ ಆಯುಧಗಳಲ್ಲಿ ಪ್ರಧಾನವಾಗಿ ಪಾತ್ರವನ್ನು 'ಖಡ್ಗ' ವಹಿಸಿಸುತ್ತದೆ. ವೀರಗಲ್ಲುಗಳಲ್ಲಿ ಖಡ್ಗವನ್ನು ಕಡಿತಲೆ, ಖಡ್ಗ, ಕರವಾಳ್, ವಾಳ್, ಖಂಡೆಯ.... ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಖಡ್ಗದೊಂದಿಗೆ ಕಠಾರಿ, ಭರ್ಚಿ, ಚಾಕು, ಸಬಳ, ಕೊಸ್ತ, ಬಿಲ್ಲು–ಬಾಣಗಳು, ಕರ್ಕದೆ, ಸುರಿಗೆ, ಗುರಾಣಿ.... ಮುಂತಾದ ಆಯುಧಗಳನ್ನು ರಣರಂಗದಲ್ಲಿ ವೀರರು ಬಳಸುತ್ತಿದ್ದರು.

ಹೊಯ್ಸಳರ ಕಾಲದಲ್ಲಿಯ ಅನೇಕ ವೀರಗಲ್ಲುಗಳಲ್ಲಿ 'ಕುದುರೆಯ ದಳ' ಮತ್ತು 'ತುರಗ ಸಾಧನ' ಎಂಬ ಪದಗಳ ಬಳಕೆ ಕಾಣುತ್ತೇವೆ. ಯುದ್ಧವನ್ನು ಮಾಡುವಲ್ಲಿ ಹೆಚ್ಚಿನ ಸಂಖ್ಯೆ ಕುದುರೆಗಳನ್ನು ಬಳಸುತ್ತಿದ್ದರೆಂದು ತೋರುತ್ತದೆ. ಅದರೊಂದಿಗೆ ಆನೆಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಪಳಗಿಸಿಕೊಂಡು, ಅದನ್ನು ಯುದ್ಧದಲ್ಲಿ ತಮ್ಮ ಬಲದ ಪ್ರಧಾನ ಅಂಶವನ್ನಾಗಿ ಮಾಡಿಕೊಂಡಿದ್ದರು ಎಂಬುದು ತಿಳಿದುಬರುತ್ತದೆ. "ಹೊಯ್ಸಳ ವೀರಬಲ್ಲಾಳನ ಕಾಲದ ಒಂದು ವೀರಗಲ್ಲು ಒಂಟೆಯ ಪಡೆಯ ಪ್ರಮುಖನೊಬ್ಬನು ಸತ್ತ ವಿಷಯವನ್ನು ತಿಳಿಸುತ್ತದೆ"[೨೧]. ಇದರೊಂದಿಗೆ ಬಹು ಮುಖ್ಯವಾಗಿ ಕ್ರಿ.ಪೂ. ೬ನೇ ಶತಮಾನದಿಂದಲೇ ಕಾಲಾಳುಗಳ ದಶ ಪ್ರಮುಖವಾಗಿತ್ತು ಎಂಬುದು ಉಲ್ಲೇಖನೀಯ. ಆ ಕಾರಣಕ್ಕಾಗಿಯೇ ಅರಸನು ತಮ್ಮ ಸೈನ್ಯದಲ್ಲಿ ಬಹುಪಾಲು ಕಾಲಾಳುಗಳನ್ನು ನೇಮಿಸಿಕೊಳ್ಳುತ್ತಿದ್ದರು.

ಕೋಟೆ ಎಂಬುದು ಅಂದಿನ ರಾಜಕೀಯ ವ್ಯವಸ್ಥೆಯ ಮತ್ತು ಜನರ ರಕ್ಷಣೆಯ ಭಾರವನ್ನು ಹೊತ್ತಿತ್ತು. ಕೋಟೆಯ ಬಲದ ಮೇಲೆ ಆಡಳಿತ ವ್ಯವಸ್ಥೆಯ ಅಳಿವು–ಉಳಿವು ನಿರ್ಧರಿತವಾಗುತ್ತಿತ್ತು.

**ಹೋರಾಟಗಳಲ್ಲಿ ಮಡಿದ ವೀರರಿಗೆ ಕೊಡುತ್ತಿದ್ದ ದತ್ತಿ:**

ಸ್ವಪ್ರೇರಣೆಯಿಂದ, ತನ್ನೆದುರು ಆಗುತ್ತಿದ್ದ ಅನ್ಯಾಯವನ್ನು ಸಹಿಸದೆ ಹೋರಾಡಿ ಮಡಿದ, ವೃತ್ತಿಯಿಂದ ಯೋಧನಾಗಿದ್ದು, ಕರ್ತವ್ಯನಿರತನಾಗಿ ಮಡಿದ ವೀರನಿಗೆ ಅವನ ಆಶ್ರಯದಾತರೋ ಅಥವಾ ಊರಿನವರೋ ದತ್ತಿಯನ್ನು ನೀಡುತ್ತಿದ್ದರು. ಕಾರಣ, ಮಡಿದ ವೀರನ ಮನೆಯವರಿಗೆ ವೀರನ ಸಾವಿನಿಂದಾದ ನಷ್ಟವನ್ನು ತುಂಬಬೇಕು ಎನ್ನುವುದು. ಮತ್ತು ಅವನ ಸೇವೆಯನ್ನು ಅರಸನೋ, ಸಮಾಜವೋ ಗುರುತಿಸಿದೆ ಎಂಬುದನ್ನು ವ್ಯಕ್ತಪಡಿಸುವುದು. ಹೋರಾಟಗಳಲ್ಲಿ ಮಡಿದ ವೀರರಿಗೆ ದತ್ತಿಯನ್ನು ಬಿಡುತ್ತಿದ್ದವರನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದು. ಅದರಂತೆ,

- ಗ್ರಾಮದ ಮುಖ್ಯಸ್ಥರು ಗ್ರಾಮದ ಪರವಾಗಿ ಮತ್ತು ಇತರರು ವೈಯಕ್ತಿಕವಾಗಿ ವೀರರಿಗೆ ಬಿಟ್ಟ ದತ್ತಿಗಳು.
- ಅರಸರೋ, ಆಶ್ರಯದಾತರೋ ವೀರರಾದವರಿಗೆ ಬಿಟ್ಟ ದತ್ತಿಗಳು.

**ಗ್ರಾಮದ ಮುಖ್ಯಸ್ಥರು ಗ್ರಾಮದ ಪರವಾಗಿ ಬಿಟ್ಟ ದತ್ತಿಗಳು:**

ಒಂದು ಊರಿನ ಹಿತರಕ್ಷಣೆಗಾಗಿ ತನ್ನ ಪ್ರಾಣವನ್ನು ಲೆಕ್ಕಿಸದೆ ಹೋರಾಡಿ ಮಡಿದ ವೀರರಿಗೆ ಊರಿನ ಮುಖ್ಯಸ್ಥರು ಅಂದರೆ ಹಿರಿಯರು, ಮಹಾಜನರು, ಗೌಡರು... ದತ್ತಿಯನ್ನು ಬಿಟ್ಟ ವಿವರಗಳು ವೀರಗಲ್ಲುಗಳಿಂದ ದೊರೆಯುತ್ತವೆ. ಈ ವೀರರು ಸೀಮಾಸಂಬಂಧದ ಕಾಳಗದಲ್ಲಿ ಮಡಿದಿರಬಹುದು, ಕಳ್ಳರೊಡನೆ ಹೋರಾಡಿ ಮಡಿದಿರಬಹುದು, ದುಷ್ಟಮೃಗಳೊಡನೆ ಹೋರಾಡಿ ಮಡಿದಿರಬಹುದು, ಊರಳಿವಿನಲ್ಲಿ ಮಡಿದಿರಬಹುದು... ವೀರನಾದವನು ತಮ್ಮ ಗ್ರಾಮದ ಗೌರವವನ್ನು, ಸಂಪತ್ತನ್ನು, ನಾಲ್ಕು ಜನರ ಪ್ರಾಣವನ್ನು ಮತ್ತು ಮಾನವನ್ನು ಉಳಿಸಲು ಹೋರಾಡಿ ಸತ್ತಿದ್ದಾನೆ ಎಂಬುದಷ್ಟೇ ಅವರಿಗೆ ಮುಖ್ಯವಾಗುತ್ತಿತ್ತು.

ಹೊಸವೂರಿನವರಿಗೂ ಮತ್ತು ಜಂಬೂರಿನವರಿಗೂ ನಡೆದ ಸೀಮಾ ಸಂಬಂಧದ ಕಾಳಗದಲ್ಲಿ ಈಸೂರು ಎಂಬ ಮತ್ತೊಂದು ಗ್ರಾಮದ ಒಬ್ಬ ವ್ಯಕ್ತಿ ಹೊಸವೂರಿನವರ ಪರವಾಗಿ ಹೋರಾಡಿ ಸಾಯುತ್ತಾನೆ. ಆಗ ಆತನಿಗೆ ಊರಿನ ಜನರು ಜಮೀನನ್ನು ಕೊಡುತ್ತಾರೆ.

“ಇಂದಾವರದ ಸೀಮಾ ಸಂಬಂಧದ ಕಾಳಗದಲ್ಲಿ ಮಡಿದವರಿಗೆ ‘ಹೊನ್ನಕೊಟ್ಟ’ ವಿಷಯ ವೀರಗಲ್ಲೊಂದರಿಂದ ತಿಳಿದುಬರುತ್ತದೆ”[೨೨]. ತಮ್ಮ ಗ್ರಾಮದ ಸಲುವಾಗಿ ‘ಚಂಪುಗಭಡ’ನೆಂಬುವನು ಹೋರಾಡಿ ಮಡಿದಾಗ ಅವನಿಗೆ ‘ಮಾನ್ಯದ ಹೊಲ’ ಮತ್ತು ‘ಆಯಿದು ಕೊಳಗ’ ಗದ್ದೆಯನ್ನು ನೆತ್ತರು ತೊಡಿಗೆ ಮಾನ್ಯವಾಗಿ ಬಿಟ್ಟ ವಿಷಯ ಮತ್ತೊಂದು ವೀರಗಲ್ಲಿನಿಂದ ತಿಳಿದು ಬರುತ್ತದೆ.

ಗ್ರಾಮಗಳಿಗೆ ನುಗ್ಗಿ ದರೋಡೆಯನ್ನು ಮಾಡಿಕೊಂಡು ಹೋಗುತ್ತಿದ್ದ ಕಳ್ಳರ ಮೇಲೆ ಬಿದ್ದು, ಅವರೊಂದಿಗೆ ಹೋರಾಡಿ ಮಡಿದ ವೀರರ ಮನೆಯವರಿಗೂ ದತ್ತಿಯನ್ನು ಬಿಟ್ಟಿದ್ದಾರೆ. ಊರೊಳಗೆ ನುಗ್ಗಿ ಜನರಿಗೆ ಹಿಂಸೆಯನ್ನು ಮಾಡುತ್ತಿದ್ದ ದುಷ್ಟ ಪ್ರಾಣಿಗಳನ್ನು ಕೊಲ್ಲುವಾಗ ಹೋರಾಡಿ ಮಡಿದ ವೀರರಿಗೆ ಗ್ರಾಮಸ್ಥರು ದತ್ತಿಯನ್ನು ನೀಡಿದ್ದಾರೆ. ಕ್ರಿ.ಶ. ೯೪೬ರ ಒಂದು ವೀರಗಲ್ಲಿನಿಂದ ವೀರನೊಬ್ಬನು ಹುಲಿಯನ್ನು ಇರಿದು ತಾನೂ ಸತ್ತುದಕ್ಕಾಗಿ ಅವನಿಗೆ ದತ್ತಿಯನ್ನು ಬಿಟ್ಟ ವಿಷಯ ತಿಳಿಯುತ್ತದೆ.

ಊರಿನ ಹಸುಗಳನ್ನು ಯಾರಾದರೂ ಹಿಡಿದುಕೊಂಡು ಹೋದಾಗ ಅವುಗಳನ್ನು ಹಿಂತಿರುಗಿಸುವಲ್ಲಿ ಹೋರಾಡಿ ಸತ್ತ ವೀರರ ಮನೆಯವರಿಗೆ ದತ್ತಿಯನ್ನು ನೀಡಿರುವ ನಿದರ್ಶನಗಳು ವೀರಗಲ್ಲುಗಳಿಂದ ದೊರೆಯುತ್ತವೆ. ಬಲ್ಲದ ತುರುಗಳನ್ನು ‘ಕರಪುರನ್’ ಎಂಬುವನು ಸೆರೆ ಹಿಡಿದಾಗ ತುರುಗಳನ್ನು ಹಿಂತಿರುಗಿಸುವಲ್ಲಿ ವೀರನೊಬ್ಬನು ಹೋರಾಡಿ ಸಾಯುತ್ತಾನೆ. ಅದಕ್ಕಾಗಿ ಅವನಿಗೆ ದತ್ತಿಯನ್ನು ನೀಡುತ್ತಾರೆ. ಕೆಂಕೆರೆಯ ಮಹಾಜನಗಳ ಹಸುಗಳನ್ನು ಕಳ್ಳರು ಕೊಂಡು ಹೋಗುವಾಗ ಆದ ಗಲಭೆಯನ್ನು ಕೇಳಿ, ಹೋಗಿ ಕಳ್ಳರೊಡನೆ ಹೋರಾಡಿ ಮಾದಿಗೌಡ ಮತ್ತು ಮರಿಯ ಎಂಬುವರು ಸಾಯುತ್ತಾರೆ. ಆಗ ಇಬ್ಬರು ವೀರರಿಗೆ ವೀರಗಲ್ಲುಗಳನ್ನು ನೆಟ್ಟು “ಮಹಾಜನಂಗಳು ಮೆಚ್ಚಿ, ಕೊಡೆ ಕುದುರೆ ತುಂಬಟ ಸಹಿತ ವೀರಕೊಡಗಿ”ಯನ್ನು ನೀಡುತ್ತಾರೆ. ಆಲೂರಿನ ದನಗಳನ್ನು “ಕಲಿದೇವ ಠಕ್ಕನವರು ಕೊಂಡು ಹೋಗುತ್ತಿದ್ದಾಗ ಲೋಕನಾಯಕನ ಮಗನು” ಅವುಗಳನ್ನು ಹಿಂತಿರುಗಿಸಿ ಸಾಯುತ್ತಾನೆ. “ಮುತ್ತೂರು ದನಗಳನ್ನು ದಂಡನಾಯಕನಾದ ಕೇಸಿಯಯ್ಯ ಎಂಬುವವನು ಅಪಹರಿಸಿದಾಗ ಮುತ್ತೂರಿನ ಅಗಸರ ಜಾತಿಯ ಕಾಳಯ ಎಂಬುವನು ಹೋರಾಟ ಮಾಡಿ ಮೇಲಾಳನ್ನು

ತಿವಿದು, ತುರುಗಳನ್ನು ಹಿಂತಿರುಗಿಸಿ ಸಾಯುತ್ತಾನೆ.  ಅವನ ಈ ಪರಾಕ್ರಮಕ್ಕೆ ಮೆಚ್ಚಿದ ಸಮಸ್ತ ಪ್ರಜೆಗಳು ನೆರೆದು ಕೆರೆಯ ಕೆಳಗೆ ಗದ್ದೆಯನ್ನು ಕೊಡುತ್ತಾರೆ"[೨೩].

ಊರಿನ ಮೇಲೆ ಆಕಸ್ಮಿಕವಾಗಿ ಬೇರೆಯ ಅರಸರೋ ಅಥವಾ ವಿನಾಕಾರಣವಾಗಿ ಪೀಡಿಸುವ ಅಧಿಕಾರಿಗಳೋ ಬಂದು ಊರಿನಲ್ಲಿ ಗಲಭೆಯನ್ನು ಮಾಡಿದಾಗ ಅವರೊಡನೆ ಹೋರಾಡಿ ಮಡಿದ ವೀರರ ಪರಾಕ್ರಮವನ್ನು ಪುರಸ್ಕರಿಸಿ ದತ್ತಿಯನ್ನು ನೀಡಿರುವ ನಿದರ್ಶನಗಳು ಹಲವಾರುಂಟು. ಮುತ್ತೂರನ್ನು ಕಮ್ಮನವಳ್ಳಿಯ ಜಕ್ಕಸೆಟ್ಟಿ ಎಂಬುವನು ಆಕ್ರಮಿಸಿ ಊರನ್ನೇ ಹಾಳುಮಾಡಿ ಹೆಂಗಸರ ಮಾನಭಂಗವನ್ನು ಮಾಡುತ್ತಿದ್ದಾಗ ಕಮ್ಮಾರ ಜಾತಿಗೆ ಸೇರಿದ ಮಾಚ ಎಂಬುವನು ಹೋರಾಡಿ ಮಡಿಯುತ್ತಾನೆ. ಆಗ ಜಕ್ಕಗಾವುಂಡ ಮತ್ತು ಕಂಕಗಾವುಂಡ ಎಂಬುವರು ಮಾಚನ ಅಣ್ಣನಾದ 'ಹಳಿಗ'ನೆಂಬುವನಿಗೆ ಸಮಸ್ತ ಪ್ರಜೆಗಳೊಂದಿಗೆ ಕೂಡಿಕೊಂಡು ದತ್ತಿಯನ್ನು ನೀಡುತ್ತಾರೆ.

**ಯುದ್ಧದಲ್ಲಿ ಸತ್ತ ವೀರರಿಗೆ ಅವನ ಆಶ್ರಯದಾತ ಕೊಡುತ್ತಿದ್ದ ದತ್ತಿ:**

ತನ್ನ ಪರವಾಗಿ ಹೋರಾಡಿ ಸತ್ತ ವೀರನ ಮನೆಯವರ ಮುಂದಿನ ಜೀವನ ನಿರ್ವಹಣೆಗಾಗಿ ಅರಸನು ಹಣವನ್ನೋ ಸ್ಥಿರವಾದ ಆಸ್ತಿಯನ್ನೋ ಕೊಡುತ್ತಿದ್ದನು. ಅದು ರಾಜನ ಆದ್ಯ ಕರ್ತವ್ಯವೇ ಆಗಿತ್ತು. ಏಕೆಂದರೆ, ತನ್ನ ಹಿತದೃಷ್ಟಿಗಾಗಿ ತಮ್ಮ ಪ್ರಾಣವನ್ನು ಲೆಕ್ಕಿಸದೆ ಮಡಿದ ವೀರರ ಮನೆಯವರನ್ನು ಸಾಕುವುದು, ಅವರ ಜೀವನ ನಿರ್ವಹಣೆಗೆ ಸಹಾಯ ಮಾಡುವುದು ಒಂದು ರೀತಿಯ ಮಾನವೀಯ ಧರ್ಮ. ರಾಜನ ಪರವಾಗಿ ಹೋರಾಡಿ ಸಾಯುವುದರಿಂದ ತನ್ನ ಸಂಸಾರದವರಿಗೆ ಯಾವ ರೀತಿಯ ತೊಂದರೆಯೂ ಆಗುವುದಿಲ್ಲ; ತಾನು ನಂಬಿದ ಸ್ವಾಮಿ ತನ್ನ ಮನೆಯವರನ್ನು ತಾನು ಸತ್ತ ಮೇಲೆಯೂ ಸಾಕಿ ಸಲುಹುತ್ತಾನೆ ಎಂಬ ಭರವಸೆಯನ್ನು ಯೋಧರಲ್ಲಿ ತುಂಬುವ ಒಂದು ತಂತ್ರವೂ ಇರಬಹುದು. ಈ ರೀತಿ ಯುದ್ಧದಲ್ಲಿ ಹೋರಾಡಿದ ವೀರರ ಪರಾಕ್ರಮವನ್ನು ಅರಸನು ಬಹಿರಂಗವಾಗಿ ಪುರಸ್ಕರಿಸಿದರೆ ಅದರಿಂದ ಉಳಿದ ಯೋಧರು ಉತ್ಸಾಹ ಹೊಂದಿ, ತಮ್ಮ ಅರಸನಿಗೆ ತಮ್ಮ ಜೀವನವನ್ನೇ ಮುಡುಪಿಡಲು ಸಿದ್ಧರಿರುತ್ತಿದ್ದರು. ಈ ರೀತಿ ಯುದ್ಧದಲ್ಲಿ ಸತ್ತ ವೀರರಿಗೆ ದತ್ತಿಯನ್ನು ಬಿಡುವುದು, ಯುದ್ಧದಲ್ಲಿ ಹೋರಾಡಿ ಉಳಿದು ಬಂದ ವೀರರಿಗೆ ಕೊಡುವ ದತ್ತಿ ಅಥವಾ

ಇತರ ಮಾನ್ಯಗಳನ್ನು ಬಿಡುವುದಕ್ಕಿಂತಲೂ ಹೆಚ್ಚು ಪರಿಣಾಮಕಾರಿಯಾದುದು. ಮಡಿದ ವೀರರ ಬಗ್ಗೆ, ಯುದ್ಧಾನಂತರದಲ್ಲಿ ಜನತೆಗೆ ವಿಶೇಷವಾದ ಅನುಕಂಪ ಮತ್ತು ಅಭಿಮಾನ ಇರುತ್ತದೆ ಎಂಬುದು ಇದಕ್ಕೆ ಸ್ಪಷ್ಟ ಕಾರಣ.

"ಗಂಗರ ದುಗ್ಗುಮಾರ ಎರೆಯಪ್ಪನು ತನ್ನ ಯುದ್ಧವೊಂದರಲ್ಲಿ ಭಾಗವಹಿಸಿ ಮಡಿದ ವೀರನೊಬ್ಬನಿಗೆ ಒಂದು ಗ್ರಾಮವನ್ನು ಮತ್ತು ಮತ್ತೊಂದು ಊರಿನ ಗದ್ದೆಯ ಸ್ವಲ್ಪ ಭಾಗವೊಂದನ್ನು, ಮನೆಯೊಂದನ್ನು ಪ್ರಸಾದಿಸುತ್ತಾನೆ"[೨೪]. 'ನಾಗಗುಟ್ಟರಸ' ಎಂಬ ವೀರನು ಮಹಾವಲಿ ಬಾಣರಸನ ಪರವಾಗಿ ಯುದ್ಧವೊಂದರಲ್ಲಿ ಹೋರಾಡಿ ಮಡಿಯುತ್ತಾನೆ. ಆಗ ಅವನಿಗೆ ಸರ್ವಬಾಧಾ ಪರಿಹಾರವಾಗಿ ಬಾಣರಸನು ದತ್ತಿಯನ್ನು ಬಿಡುತ್ತಾನೆ. ಗಂಗರ ಕಾಲದ ಅಂದರೆ ೯-೧೦ನೇ ಶತಮಾನದ ವೀರಗಲ್ಲುಗಳನ್ನು ಗಮನಿಸಿದರೆ ಯುದ್ಧದಲ್ಲಿ ಸತ್ತ ವೀರನ ಅರ್ಹತೆಯನ್ನು ಗುರುತಿಸಿ ಅವನಿಗೆ ದತ್ತಿಯನ್ನು ಬಿಟ್ಟಿರುವುದು ಕಂಡುಬರುತ್ತದೆ.

ಭೂಮಿಯು ಸ್ಥಿರವಾದ ಉತ್ಪನ್ನವನ್ನು ನೀಡುವ ಆಸ್ತಿ. ಹೋರಾಡಿ ಮಡಿದ ವೀರರು ವ್ಯವಸಾಯವನ್ನು ಮುಖ್ಯ ಕಸುಬನ್ನಾಗಿ ಮಾಡಿಕೊಂಡಿದ್ದವರು. ಆದ್ದರಿಂದ, ಭೂಮಿಯನ್ನು ಅರಸನಿಂದ ಪಡೆಯುವುದು ಶ್ರೇಷ್ಠವೆಂದು ಜನ ಭಾವಿಸಿದ್ದಿರಬೇಕು. ಅರಸನಿಗೂ ಅದು ಸುಲಭವಾದ ವಿಚಾರವಾಗಿತ್ತು ಅನಿಸುತ್ತದೆ. ಈ ರೀತಿ ತಮ್ಮ ಪರವಾಗಿ ಹೋರಾಡಿ ಸತ್ತ ವೀರರಿಗಲ್ಲದೆ, ತಮ್ಮ ಪ್ರಮಾದದಿಂದ ವ್ಯಕ್ತಿಯೊಬ್ಬನು ಸತ್ತನೆಂದು ಅರಿತಾಗಲೋ, ಅನ್ಯಾಯದಿಂದ ವ್ಯಕ್ತಿಯು ಮರಣ ಹೊಂದಿದನೆಂದೋ ಅವನ ಮಕ್ಕಳಿಗೆ ಅರಸರು ದತ್ತಿಯನ್ನು ಬಿಟ್ಟ ವಿಚಾರವೂ ಶಾಸನಗಳಿಂದ ತಿಳಿಯುತ್ತದೆ. ಅನ್ಯಾಯವನ್ನು ಯಾರೇ ಮಾಡಿರಲಿ, ಜನ ಅದನ್ನು ಧೈರ್ಯವಾಗಿ ಎದುರಿಸುತ್ತಿದ್ದರು. ಕೆಲವರಾದರೂ ತಾವು ಮಾಡಿದ ತಪ್ಪನ್ನು ಒಪ್ಪಿಕೊಂಡು ತಮ್ಮ ತಪ್ಪಿನಿಂದಾದ ನೋವನ್ನು, ಕಷ್ಟವನ್ನು ಪರಿಹರಿಸುವ ಸಲುವಾಗಿ ಮಡಿದವರಿಗೆ ದತ್ತಿಯನ್ನು ಬಿಡುತ್ತಿದ್ದರೆಂಬುದು ತಿಳಿದುಬರುತ್ತದೆ. ಕ್ರಿ.ಶ. ೧೫೬೪ರ ಶಾಸನದಲ್ಲಿ ದೇವಪ್ಪಗೌಡ ಎಂಬುವನನ್ನು ಸಂಜರಕಾನನವರು ಅನ್ಯಾಯದಲ್ಲಿ ಕೊಂದಾಗ ಅರಸರು ದೇವಪ್ಪನ ಮಗನಾದ ಚಾಮರಸ ಒಡೆಯ ಎಂಬುವವನಿಗೆ ಗಣಿಗನೂರನ್ನು ರಕ್ತಕೊಡುಗೆಯಾಗಿ

ಕೊಡುತ್ತಾರೆ ಎಂದಿದೆ. ಹೀಗೆಯೇ ತಮ್ಮ ಪರವಾಗಿ ಹೋರಾಡದಿದ್ದರೂ, ತಮ್ಮ ರಾಜ್ಯದಲ್ಲಿ ಸುಖ–ಶಾಂತಿಯ ಸ್ಥಾಪನೆಗಾಗಿ ಹೋರಾಡಿ ಮಡಿದ ವೀರರಿಗೂ ದತ್ತಿಯನ್ನು ಬಿಡುತ್ತಿದ್ದರು.

ಕೆಲವೊಮ್ಮೆ ಅರಸರು ಮತ್ತು ಪ್ರಜೆಗಳು ಇಬ್ಬರೂ ಕೂಡಿ ದತ್ತಿಯನ್ನು ಬಿಡುತ್ತಿದ್ದುದಾಗಿ ವಿರಗಲ್ಲುಗಳಿಂದ ತಿಳಿದುಬರುತ್ತದೆ. ಹೋರಾಟವೊಂದರಲ್ಲಿ ಮಡಿದ ಮಾಚಗಾವುಂಡ ಎಂಬುವನಿಗೆ 'ಬಲ್ಲಾಳ ದೇವನುಂ ಕೂಸೆಜೆಯಂಣನುಂ ಇಂಗುಳದ ಅಶೇಷ ಮಹಾಜನಂಗಳುಂ ತಳಿಗೆನಾಡ ಸಾಯಿರಭೂಮಿ'ಯನ್ನು ವೀರದತ್ತಿಯಾಗಿ ಬಿಟ್ಟ ವಿವರಣೆ ವೀರಗಲ್ಲಿನ ಪಾಠವೊಂದರಿಂದ ತಿಳಿದು ಬರುತ್ತದೆ. ಕೆಲವೊಮ್ಮೆ ವೀರನು ಅರಸನ ಪರವಾಗಿ ಹೋರಾಡಿ ಮಡಿದಿದ್ದರೂ ಊರಿನ ಜನ ಅವನಿಗೆ ದತ್ತಿಯನ್ನು ಬಿಡುತ್ತಿದ್ದುದುಂಟು. ಅರಸನ ಪರವಾಗಿ ಹೋರಾಡಿ ಮಡಿದ ವೀರನೊಬ್ಬನಿಗೆ ಒಂದು ಊರಿನ 'ಊರೊಕ್ಕಲು ಮೂಜನಮುಂ' ದತ್ತಿ ಬಿಟ್ಟ ವಿಚಾರ ಶಾಸನವೊಂದರಲ್ಲಿದೆ.

ಯುದ್ಧವೆಂಬುದು ಸಾವಿನೊಂದಿಗೆ ಮಾಡುವ ಹೋರಾಟ. ಈ ಹೋರಾಟದಲ್ಲಿ ವೀರನ ಸಾವು, ಬುದಕು, ಯಾವದೂ ನಿಶ್ಚಿತವಲ್ಲ. ಇಂತಹ ಸಂದರ್ಭಗಳಲ್ಲಿ ಯೋಧರು ತಮ್ಮ ಸಂಸಾರದ ಬಗ್ಗೆ ಯೋಚಿಸುವಂತಾಗಬಾರದೆಂದು ಅವರ ಸಂಸಾರದ ನಿರ್ವಹಣೆಯ ಭಾರವನ್ನು ಅರಸರು ಹೊತ್ತುಕೊಳ್ಳುವುದರ ಜೊತೆಗೆ ವಿಶೇಷವಾದ ಉಡುಗೊರೆಗಳನ್ನು ಘೋಷಿಸುತ್ತಿದ್ದರು. ಯುದ್ಧರಂಗದಲ್ಲಿ ತಮ್ಮ ಸಂಸಾರದ ನೆನಪು ಬಂದು, ತಾವು ಯುದ್ಧದಲ್ಲಿ ಸಂಪಾದಿಸಿದ ಒಡವೆ, ವಸ್ತುಗಳನ್ನು ತಮ್ಮ ಹೆಂಡತಿಯ ಕೈಗೆ ಕೊಟ್ಟು 'ಸಲಹು ಮಕ್ಕಳನೆಂದು' ತಿಳಿಸಿದ ವೀರರ ಚಿತ್ರಣ ನಂಜಂಡನ ಕುಮಾರರಾಮನ ಸಾಂಗತ್ಯದಿಂದ ದೊರೆಯುತ್ತದೆ. ಯುದ್ಧದಲ್ಲಿ ಹೋರಾಡುತ್ತಿದ್ದ ವೀರರಿಗೆ ದತ್ತಿ, ಬಹುಮಾನಗಳನ್ನು ಸಾಮಾನ್ಯವಾಗಿ ಮೂಲ ಸಂದರ್ಭಗಳಲ್ಲಿ ನೀಡುತ್ತಿದ್ದರು. ಅಂದರೆ,

ಯುದ್ಧ ಪೂರ್ವದಲ್ಲಿ
ಯದ್ಧ ಸಮಯದಲ್ಲಿ
ಯುದ್ಧಾನಂತರದಲ್ಲಿ

ಈ ಮೂರು ಸಂದರ್ಭಗಳಲ್ಲಿ ಅರಸರು, ತಮ್ಮ ಆಶ್ರಿತರಿಗೆ, ಅವರ ಸೇವೆಯನ್ನು ಮನ್ನಿಸಿ ದತ್ತಿ, ಬಹುಮಾನಗಳನ್ನು ಕೊಡುತ್ತಿದ್ದರೆಂಬುದು ಶಾಸನಗಳಿಂದ ತಿಳಿದು ಬರುತ್ತದೆ.

ಕ್ರಿ.ಶ. ೧೮೧೭ರ ಒಂದು ಶಾಸನದಿಂದ ಸೇನೆಯಲ್ಲಿ ದುಡಿಯುತ್ತಿದ್ದ ಯೋಧನೊಬ್ಬನು ತನ್ನ ಆಶ್ರಯದಾತನನ್ನು 'ಉಂಬಳಿ' ದಯಪಾಲಿಸಬೇಕೆಂದು ಕೇಳಿಕೊಂಡ ವಿಷಯವೂ, ಆಶ್ರಯದಾತನು ಅವನ ಕೋರಿಕೆಯನ್ನು ಮನ್ನಿಸಿ ತನ್ನ ಕೈಕೆಳಗಿನವರ ಮೂಲಕ ಆ ವ್ಯಕ್ತಿಗೆ ಉಂಬಳಿಯನ್ನು ನೀಡಿದ ವಿವರಗಳು ದೊರೆಯುತ್ತವೆ. ಸ್ವಾಭಿಮಾನಿಗಳಾದ ವೀರರು ತಮಗೆ ಸಲ್ಲಬೇಕಾಗಿರುವ ಮನ್ನಣೆಯನ್ನಲ್ಲದೆ ಇತರೆ ಮನ್ನಣೆಗಳಿಗೆ ಕೈ ಚಾಚುವ ಆಸೆಬುರುಕರಾಗಿರಲಿಲ್ಲವೆಂಬ ಅಂಶ ಚಿತ್ರದುರ್ಗದ ಬಖೈರಿನಿಂದ ವ್ಯಕ್ತವಾಗುತ್ತದೆ.

ಯುದ್ಧದಲ್ಲಿ ವಿಜಯವನ್ನು ಸಂಪಾದಿಸುತ್ತಿದ್ದ ರಾಜನು, ತನ್ನ ವಿಜಯಕ್ಕೆ ಕಾರಣರಾದ ವೀರರನ್ನು ಪುರಸ್ಕರಿಸುತ್ತಿದ್ದನು. ಈ ರೀತಿಯ ಪುರಸ್ಕಾರ, ಮನ್ನಣೆಯನ್ನು ನೀಡುವುದರ ಮೂಲಕ ವೀರರಾದವರಿಗೆ ಅರಸನಲ್ಲಿ ಭರವಸೆ ಮೂಡುತ್ತಿತ್ತು. ಅರಸನು ಯುದ್ಧದಲ್ಲಿ ಸಂಪಾದಿಸಿದ ಸಂಪತ್ತನ್ನು ವೀರರ ಯೋಗ್ಯತಾನುಸಾರ ಅವರಿಗೆ ಹಂಚುತ್ತಿದ್ದರು. ಕನ್ನಡದಲ್ಲಿ ಉಪಲಬ್ದವಿರುವ ಅತ್ಯಂತ ಪ್ರಾಚೀನ ಶಾಸನ ಹಲ್ಮಿಡಿ ಶಾಸನದಿಂದಲೂ ಹೋರಾಟದಲ್ಲಿ ಗೆದ್ದ ವೀರನನ್ನು ಅರಸರು ಹೇಗೆ ಸತ್ಕರಿಸುತ್ತಿದ್ದರು ಎಂಬ ವಿಷಯ ತಿಳಿಯುತ್ತದೆ. ಗೆದ್ದ ಅರಸರು ತಮಗೆ ನೆರವು ನೀಡಿದ ವೀರರಿಗೆ ದತ್ತಿಯನ್ನು ಕೊಡುತ್ತಿದ್ದ ವಿಷಯ ಶಾಸನಗಳಿಂದಲ್ಲದೆ ಇತರ ಆಧಾರಗಳಿಂದಲೂ ತಿಳಿಯುತ್ತದೆ.

ವೀರಗಲ್ಲುಗಳ ಶಿಲ್ಪವು ವೀರನ ಚಿತ್ರವನ್ನು ಒಳಗೊಂಡಿರುವಂತಹದ್ದು. ವೀರನು ಕೈಯಲ್ಲಿ ಹೋರಾಟದ ಆಯುಧಗಳನ್ನು ಹಿಡಿದು ನಿಂತಂತೆ ಶಿಲ್ಪವು ಇರುತ್ತದೆ. ಅಥವಾ ವೀರನು ಹಲವರೊಡನೆ ಹೋರಾಟಕ್ಕೆ ತೊಡಗಿದಂತೆ ಶಿಲ್ಪವು ಇರಲೂಬಹುದು.

ಮಹಾಬಲಿ ಸೆಂಬಿಯನ್ ಎಂಬುವ ಬಾಣರಸನ ಮಗನಾದ ವಿಕ್ಕಿಯಣ್ಣ ಲಕ್ಕಿಗೂ ಪಲ್ಲವಧವನಿಗೂ ಉಂಟಾದ ಯುದ್ಧದಲ್ಲಿ ಲಕ್ಕಿ ಹಾಗೂ ಇನ್ನೊಬ್ಬ ವೀರನು ಸಾವನ್ನು ಅಪ್ಪುತ್ತಾರೆ. ಲಕ್ಕಿಯಣ್ಣನ ಅಣ್ಣನಾದ ಕುಂದಿಗ ಎಂಬುವವನು ಅವರ ಸ್ಮರಣೆಗಾಗಿ ವೀರಗಲ್ಲನ್ನು ನಿಲ್ಲಿಸುತ್ತಾನೆ.

ವೀರನಾದ ಮನ್ನೆಯ ಬಸವನಾಯಕನು ಸೊಗಲದಲ್ಲಿ ಮೂವತ್ತು ಜನ ವೈರಿಗಳನ್ನು ಎದುರಿಸಿ ಮೂವರನ್ನು ಕೊಂದು ವೀರಸ್ವರ್ಗ ಸೇರುತ್ತಾನೆ ಎನ್ನುವುದನ್ನು ಕ್ರಿ.ಶ. ೧೨೮೨ರ ಮಹಾರಾಷ್ಟ್ರದ ಅಂಗಮ್ ಶಾಸನವು ತಿಳಿಸುತ್ತದೆ. ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಸಿರ ತಾಲ್ಲೂಕಿನ ಅಗಳ ಶಾಸನವು ಬೊಲ್ಲಿಶೆಟ್ಟಿ ಸಂಗಯ್ಯನಾಯಕ ಎಂಬುವವನು ತಮ್ಮಡಿಯ ಹಳ್ಳಿಯ ಮೇಲೆ ಆಕ್ರಮಣ ಮಾಡಿದಾಗ, ಶತ್ರುಗಳನ್ನು ಎದುರಿಸಲು ಯುದ್ಧದಲ್ಲಿ ಭಾಗಿಯಾಗಿ, ಮಡಿದು ಸ್ವರ್ಗ ಸೇರಿರುವುದನ್ನು ತಿಳಿಸುತ್ತದೆ. ದೇವರಾಯ ಮಹಾರಾಯನು ಹಸ್ತಿನಾವತಿಯಲ್ಲಿ ಆಳುತ್ತಿರುವಾಗ ಅವನ ಪ್ರಧಾನನಾದ ಯಿರುಗಪ್ಪೊದೆಯರು ಚಂದ್ರಗುತ್ತಿ ಮತ್ತು ಗೋವೆಯನ್ನು ಆಳುತ್ತಿರುತ್ತಾರೆ. ಎಡೆನಾಡಿನ ಮುಖ್ಯವಾದ ಕುಪ್ಪೆ ಹಳ್ಳಿಯ ಮಳಲಗಡ್ಡೆಯ ಬೊಂಮಗವುಡನು ತನ್ನ ಗುರು ನಾಗದೇವಯ್ಯಗಳ ಪರವಾಗಿ ಬನವಾಸಿಯನ್ನು ಮುತ್ತಿ ಹೋರಾಟದಲ್ಲಿ ಸಾಯುತ್ತಾನೆ. ಅವನ ಮಕ್ಕಳಿಗೆ ನೆತ್ತರು ಕೊಡುಗೆಯಾಗಿ ನೀಡಿದ ಭೂಮಿದಾನದ ವಿಷಯವು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಮರಳುಗದ್ದೆ ಶಾಸನವು ತಿಳಿಸುತ್ತದೆ.

ಮಡಿದ ವೀರರಿಗಾಗಿ ಕೇವಲ ವೀರಗಲ್ಲುಗಳನ್ನು ಅಷ್ಟೇ ನಿಲ್ಲಿಸುತ್ತಿರಲಿಲ್ಲ. ಅದರ ಮೇಲೆ ಗುಡಿಗಳನ್ನು ಕಟ್ಟಿ ಉತ್ಸವ ಮಾಡಿದ ನಿದರ್ಶನಗಳಿವೆ. ವೀರಕುಮಾರ ರಾಮನ ಹೆಸರಿನಲ್ಲಿ ದೇವಾಲಯಗಳು ನಿರ್ಮಾಣವಾದ ಸಂಗತಿಯನ್ನು ಇಲ್ಲಿ ಸ್ಮರಿಸಬಹುದು. ಕಂಪಿಲರಾಯ ಮತ್ತು ಹರಿಹರದೇವಿಯರ ಮಗನಾದ ರಾಮನಾಥ ಗುಡಿಯನ್ನು ಗೋಪಾಲ ಮತ್ತು ಆಕೆಯ ತಮ್ಮ ರಾಮಣ್ಣ ಎಂಬುವವನು ಕಟ್ಟಿಸಿ ಅದರ ಪೂಜೆಗಾಗಿ ಗಂಟೆ, ಜಾಗಟೆ, ಹರಿವಾಣ, ಚಂಬು ಮತ್ತು ಹೊನ್ನು ದಾನವಾಗಿ ನೀಡಿದರು.

**ಆತ್ಮಬಲಿದಾನ–ವೀರಪ್ರಜ್ಞೆ:**

ಯುದ್ಧಗಳಲ್ಲಿ ಹೋರಾಟ ಮಾಡಿ ಮಡಿಯುವುದಾಗಲಿ, ಪ್ರಾಣಿಗಳೊಡನೆ ಕಾದಾಡಿ ಮರಣವನ್ನು ನೀಗುವುದಾಗಲಿ–ಇವು ಒಂದು ರೀತಿಯಲ್ಲಿ ಅಪಘಾತದ ಘಟನೆಗಳೇ. ಕೆಲವೊಮ್ಮೆ ಅಂತಹ ಘಟನೆಗಳಲ್ಲಿ ವೀರರು ಸಾಯಲೂಬಹುದು, ಬದುಕಿ ಉಳಿಯಲೂಬಹುದು. ಆದರೆ ಆತ್ಮ ಬಲಿದಾನದಂತಹ ಪದ್ಧತಿಯಲ್ಲಿ ತಮ್ಮ ಬದುಕನ್ನೇ

ತೃಣಕ್ಕಿಂತಲೂ ಕಡೆಯಾಗಿ ಪರಿಗಣಿಸಿ, ಪ್ರಾಣಾರ್ಪಣೆ ಮಾಡುವುದು 'ಮಹಾವೀರನ' ಲಕ್ಷಣವಾಗಿದೆ. ವೀರನಿಗಾಗಿ ನಿಲ್ಲಿಸಿದ ಕಲ್ಲುಗಳು ಬರೀ ವೀರಗಲ್ಲುಗಳಾದರೆ, ಆತ್ಮಬಲಿದಾನದಿಂದ ಮರಣವನ್ನು ಅಪ್ಪಿದವರಿಗಾಗಿ ನಿಲ್ಲಿಸಿದ ಕಲ್ಲುಗಳನ್ನು 'ಮಹಾವೀರಗಲ್ಲು'ಗಳೆಂದು ಕರೆಯಬಹುದಾಗಿದೆ.

ಕನ್ನಡ ಶಾಸನಗಳಲ್ಲಿ ಹಲವು ಪ್ರಕಾರದ ಆತ್ಮಬಲಿದಾನದ ರೀತಿಗಳು ಉಲ್ಲೇಖಗೊಂಡಿವೆ. ಅವುಗಳಲ್ಲಿ ಮುಖ್ಯವಾಗಿ ಮೊದಲಿಗೆ ಜೋಳವಾಳಿ, ವೇಳವಾಳಿ, ಲೆಂಕ ಕೀಳ್ಗುಂಟೆ, ಗರುಡ– ಇಂತಹ ಪರಿಕಲ್ಪನೆಗಳನ್ನು ಗುರುತಿಸಬಹುದು.

ಜೋಳವಾಳಿಗಳೆಂದರೆ ತಮಗೆ ಅನ್ನ ನೀಡಿ ಸಲುಹಿದವರ ಅನ್ನವ ಋಣವನ್ನು ತೀರಿಸುವುದಕ್ಕಾಗಿ ತಮ್ಮ ಸರ್ವಸ್ವವನ್ನು ಅರ್ಪಿಸಿಕೊಂಡವರು. ಅಂದರೆ ತಮ್ಮ ಒಡೆಯನಿಗೆ ಏನಾದರೂ ಸಂಕಟ ಒದಗಿದಲ್ಲಿ ತಮ್ಮ ಪ್ರಾಣವನ್ನು ಅರ್ಪಿಸಿ ಅಂತಹ ಸಂಕಟವನ್ನು ನಿವಾರಿಸಲು ಅವರು ಹೋರಾಟ ಮಾಡುತ್ತಿದ್ದರು. ಕ್ರಿ.ಶ. ೧೧೧೭ರ ಶಾಸನವು ವಿಷ್ಣುವರ್ಧನನು ತಲಕಾಡಿನ ಅದಿಯಮ್ಮನ ಮೇಲೆ ದಾಳಿ ಮಾಡಿದಾಗ ಅವನ ಸಾಹಣಿ ಬಾಸಯನು ನುಗ್ಗಿ ಹೋರಾಡಿ ಜೋಳವಾಳಿಯನ್ನು ಮೆರೆದು ಮಡಿಯುವುದನ್ನು ವಿವರಿಸುತ್ತದೆ. "ಶ್ರೀ ನರಸಿಂಹದೇವರ ರಾಣಿ ಬಮ್ಮಲದೇವಿಯು ಸ್ವರ್ಗಸ್ಥೆಯಾದಾಗ ಚಾಕಗಾವುಡ ಎಂಬಾತನು ಜೋಳವಾಳಿಯಾಗಿ ಮಡಿದು ಸುರಲೋಕ ಪ್ರಾಪ್ತವಾಗುತ್ತಾನೆ"[೨೫] (ಕ್ರಿ.ಶ. ೧೧೫೦ರ ಶಾಸನ), ಈ ಶಾಸನದಿಂದ ತಿಳಿದುಬರುತ್ತದೆ.

'ವೇಳದಾಳಿ' ಎಂದರೆ ತಮ್ಮನ್ನು ರಕ್ಷಿಸಿದ ರಾಜರುಗಳು, ಒಡೆಯರ ಸಮಯಕ್ಕೆ ಒದಗುವವರು. ಅವರು ತಮ್ಮ ಆಶ್ರಯದಾತರಿಗೆ ಏನಾದರೂ ಕೇಡು ಉಂಟಾದರೆ ತಮ್ಮ ಪ್ರಾಣವನ್ನು ಸ್ವಯಂ ಇಚ್ಛೆಯಿಂದ ಅರ್ಪಿಸಿಕೊಳ್ಳುತ್ತಿದ್ದರು. ಆತ್ಮಬಲಿ ನೀಡುತ್ತಿದ್ದರು. ತಮ್ಮ ರಾಜನು ಮಡಿದರೆ ತಾನೂ ಮಡಿಯುವುದಾಗಿ ಮೊದಲೇ ಪ್ರತಿಜ್ಞೆ ಮಾಡುತ್ತಿದ್ದರು. ಅದರಂತೆ ಅವರು ನಡೆದುಕೊಳ್ಳುತ್ತಲಿದ್ದರು.

೧. ಕ್ರಿ.ಶ. ೮೬೫ರ ಒಂದು ಶಾಸನದಲ್ಲಿ ತನ್ನ ಒಡೆಯನ ಸಲುವಾಗಿ ದೇಹತ್ಯಾಗ ಮಾಡಿದ ವೇಳವಾಳಿಯ ವರ್ಣನೆಯಿದೆ.

೨. ವೀರನಿಗೂ ವೇಳವಾಳಿಗಳು ಇರುತ್ತಿದ್ದರು. ವೀರನು ಮಡಿದರೂ ಆತನಿಗೆ ವೇಳವಾಳಿಯಾಗಿದ್ದವನೂ ಸಹಗಮನ ಪದ್ಧತಿಯಲ್ಲಿ ತಮ್ಮ ಪ್ರಾಣವನ್ನು ಅರ್ಪಿಸುತ್ತಿದ್ದನು.

೩. ಮೇವುಂಡಿ ಶಾಸನವು ಮೊಟ್ಟ ಮೊದಲಿಗೆ 'ವೇಳವಾಳಿ'ಯ ಕುರಿತು ನಿಖರವಾದ ಪ್ರಥಮ ಮಾಹಿತಿ ಒದಗಿಸುತ್ತದೆ.

೪. ಹೆಣ್ಣುಮಕ್ಕಳೂ 'ವೇಳವಾಳಿ'ತನವನ್ನು ಧರಿಸುತ್ತಿದ್ದರು ಎಂಬುದಕ್ಕೆ ಶಾಸನಗಳು ಆಧಾರವಾಗಿವೆ. ಒಂದು ಶಾಸನವು ನಾಗತ್ತರನ ಮರಣದ ವಿಚಾರವನ್ನು ಹೇಳುತ್ತ ಅವನ ಮಗಳು ಕೊಂಡಬ್ಬೆಯು ಕರ್ತವ್ಯ ವೇಳೆಗೊಡು ಸತ್ತಳ್ ಎಂದು ತಿಳಿಸುತ್ತದೆ.

೫. ಚಾಲುಕ್ಯ ದೊರೆಗೆ ಶಂಭ ಎಂಬುವವನು ವೇಳೆಗೊಂಡವನಾಗಿದ್ದನು. ಅವನು ತನ್ನ ಅರಸನ ಮರಣಾನಂತರದಲ್ಲಿ ಹಸನ್ಮುಖದಿಂದಲೇ ಅಗ್ನಿಯನ್ನು ಪ್ರವೇಶ ಮಾಡಿದಂತೆ ಕ್ರಿ.ಶ. ೯೦೦ರ ಒಂದು ಶಾಸನವು ತಿಳಿಸುತ್ತದೆ.

ಲೆಂಕರೆಂದರೆ ಸೇವಕರು, ಅವರು ಹೇಡಿಗಳಾಗಿರಲಿಲ್ಲ, ಮಹಾವೀರರಾಗಿದ್ದರು. ಒಬ್ಬ ಗರುಡನ ಹಿಂದೆ ನೂರಾರು ಲೆಂಕರು ಇರುತ್ತಿದ್ದರು. ಗರುಡನು ತನ್ನ ಪ್ರಾಣ ಕಳೆದುಕೊಂಡಾಗ ಈ ಲೆಂಕರು ತಮ್ಮ ಪ್ರಾಣವನ್ನು ಕಳೆದುಕೊಳ್ಳುತ್ತಿದ್ದರಂತೆ. ಇನ್ನು ಲೆಂಕರೊಡನೆ ಲೆಂಕಿಯರೂ ಇರುತ್ತಿದ್ದರೆಂಬುದು ವಿಶೇಷದ ಸಂಗತಿ. ತಮ್ಮ ಪತಿಯಾದ ಲೆಂಕನು ಮಡಿದಾಗ, ಅವನ ಸತಿ ಲೆಂಕಿಯು ಚಿತೆಯೇರಿ ಸಹಗಮನ ಮಾಡುತ್ತಿದ್ದಳು.

ಲೆಂಕರು ತಮ್ಮ ತಲೆಗಳನ್ನು 'ಸಿಡಿದಲೆ'ಯಾಗಿ ಅರ್ಪಿಸುತ್ತಿದ್ದರು. ಅವರು ರಾಜನ, ಅವನ ಪರಿವಾರದ ಸಂದರ್ಭದಲ್ಲಿ ಹಲವಾರು ಹರಕೆಗಳನ್ನು ಹೊರುತ್ತಿದ್ದರು. ರಾಜನ ರೋಗ ವಾಸಿಯಾಗಲು, ರಾಜದಂಪತಿಗಳಗೆ ಮಕ್ಕಳಾಗಲು, ರಾಜನಿಗೆ ಯುದ್ಧದಲ್ಲಿ ಜಯವು ಪ್ರಾಪ್ತಿಯಾಗಲು.... ಲೆಂಕರು ಹರಕೆ ಹೊರುತ್ತಿದ್ದರು. ಅವರ ಹರಕೆ ಈಡೇರಿದರೆ ತಮ್ಮ

ತಲೆಯನ್ನು 'ತೆಂಗಿನ ಸಿಡಿಗಾಯಿ'ಯಂತೆ ಒಡೆದುಕೊಂಡು, ಶಿರವನ್ನು ಕತ್ತರಿಸಿಕೊಂಡು ಪ್ರಾಣವನ್ನು ಅರ್ಪಿಸುತ್ತಿದ್ದರು. "ಕ್ರಿ.ಶ. ೯೧ರ ಶಾಸನದಲ್ಲಿ ಆಕಟೆ ಎನ್ನುವವನು ರಾಜನಿಗೆ ಮಗನಾಗಲಿಯೆಂದು ದೇವರಿಗೆ ಹರಕೆ ಹೊತ್ತು, ಅವನಿಗೆ ಮಗನಾದ ನಂತರ ತನ್ನ ತಲೆಯನ್ನು ಕತ್ತರಿಸಿಕೊಂಡು ಸ್ವರ್ಗಸ್ಥನಾದ ವಿಷಯವು ಬಂದಿದೆ"[೨೬].

'ಗರುಡ' ಎಂಬ ಗುಂಪಿನವರು ಆತ್ಮ ಬಲಿಯನ್ನು ಅರ್ಪಿಸುವ ಗುಂಪಿನ ವೀರರೇ ಆಗಿದ್ದಾರೆ. 'ಗರುಡ' ಎಂಬ ಪದವು ಮಹಾಶೌರ್ಯದ, ಧೈರ್ಯದ ಪ್ರತೀಕವಾಗಿದ್ದೀತು. ಜೊತೆಯಲ್ಲಿ ಸ್ವಾಮಿನಿಷ್ಠೆಯ ದ್ಯೋತಕವೂ ಆಗಿತ್ತು. ಗರುಡನಾಗತಕ್ಕವನು ಅರಸನ ಮುಂದೆ ತಾನು ಗರುಡನಾಗುವ ಭಾಷೆ ತೊಟ್ಟು, ಅದರ ದ್ಯೋತಕವಾಗಿ ತನ್ನ ಎಡಗಾಲಿಗೆ ಗರುಡ ಸಂಕೇತದಂತಿರುವ ಒಂದು ಒಡವೆಯನ್ನು ಧರಿಸುತ್ತಿದ್ದನು. ಅದನ್ನು ಸ್ವತಃ ಅರಸನೇ ತನ್ನ ಕೈಯಿಂದ ಗರುಡನಿಗೆ ತೊಡಿಸುತ್ತಿದ್ದನು. ಅದು ಬಂಗಾರದಿಂದ ಮಾಡಲ್ಪಡುತ್ತಿದ್ದಿತು. ಚಿನ್ನದ ಎಳೆಗೆ ಮುತ್ತುಗಳನ್ನು ಪೋಣಿಸಿ ಮಾಡುತ್ತಿದ್ದರು. ನಡು-ನಡುವೆ ಸಣ್ಣ-ಸಣ್ಣ ಗೊಂಬೆಗಳ ಗಂಟೆಗಳನ್ನು ಪೋಣಿಸುತ್ತಿದ್ದರು. ಗರುಡರು ಅದನ್ನು ಕಟ್ಟಿಕೊಂಡು ನಡೆದಾಡುವಾಗ 'ಝಣಝಣ' ಎನ್ನುವ ಸದ್ದು ಮಾಡುತ್ತಿತ್ತು. ಕಾಲಿನಲ್ಲಿ ಧರಿಸಿದ ಆ ಆಭರಣಕ್ಕೆ 'ಗಂಡ ಪೆಂಡೇರ' ಎಂದು ಕರೆಯುತ್ತಿದ್ದರು. ಅದರಿಂದಲೇ ವೀರರನ್ನು ಸಮಾಜವು 'ಗರುಡ'ರೆಂದು ಗುರುತಿಸುತ್ತಿದ್ದಿತು. ಗರುಡನಾದ ಪತಿಯೊಡನೆ ಅವನ ಸತಿಯೂ 'ಗರುಡ' ಭಾಷೆಗೆ ಒಳಗಾಗಬಹುದಿತ್ತು. ಗರುಡರಾಗಿ ಮಡಿದವರ ಸ್ಮರಣೆಗಾಗಿ ಅವರ 'ಗರುಡ' ಮೂರ್ತಿಗಳನ್ನು ಸ್ಥಾಪಿಸುವ ಪದ್ಧತಿ ಬೆಳೆಯಿತು. ಗರುಡಗಂಬಗಳು ತಲೆಯೆತ್ತಿದವು. ಶಾಸನವು ಇಂತಹ ಪದ್ಧತಿಗಳಿಗೆ ಧ್ವನಿಯಾಗಿದೆ.

**ಅಡಿಟಿಪ್ಪಣಿಗಳು:**

೧. ಶಾಸನಾನುಸಂಧಾನ, ಪು. ೧೨೨.

೨. ಕವಿರಾಜಮಾರ್ಗ, ಪು. ೫೯.

೩. ಶಾಸನ ಸಂಗ್ರಹ, ಪು. ೩೩೭.

೪. ಅದೇ, ಪು. ೮೦.

೫. ಅದೇ, ಪು. ೧೦೨.

೬. ಅದೇ, ಪು. ೧೦೫.

೭. ಶಾಸನಾನುಸಂಧಾನ, ಪು. ೧೩೭.

೮. ಪೆಣ್ಬುಯಲ್, ಪು. ೪.

೯. ಅದೇ, ಪು. ೧೮.

೧೦. ಶಾಸನಾನುಸಂಧಾನ, ಪು. ೧೩೩.

೧೧. ಕರ್ನಾಟಕ ವೀರಗಲ್ಲುಗಳು, ಪು. ೧೧೯.

೧೨. ಅದೇ, ಪು. ೧೨೨.

೧೩. ಅದೇ, ಪು. ೧೨೫.

೧೪. ಅದೇ, ಪು. ೧೨೭.

೧೫. ಅದೇ, ಪು. ೧೨೮.

೧೬. ಅದೇ, ಪು. ೧೨೯.

೧೭. ಅದೇ, ಪು. ೧೩೮.

೧೮. ಅದೇ, ಪು. ೧೩೮.

೧೯. ಅದೇ, ಪು. ೧೪೬.

೨೦. ಅದೇ, ಪು. ೧೪೬.

೨೧. ಅದೇ, ಪು. ೧೬೧.

೨೨. ಅದೇ, ಪು. ೧೭೩.

೨೩. ಅದೇ, ಪು. ೧೭೪.

೨೪. ಅದೇ, ಪು. ೧೭೬.

೨೫. ಶಾಸನಾನುಸಂಧಾನ, ಪು. ೧೫೫.

೨೬. ಅದೇ, ಪು. ೧೫೮.

# ಅಧ್ಯಾಯ–೬
# ಮೌಲ್ಯವಾಗಿ ದಾನ

ಭಾರತೀಯ ಧಾರ್ಮಿಕ, ಸಾಮಾಜಿಕ ಪರಂಪರೆಯಲ್ಲಿ 'ದಾನ' ಕ್ರಿಯೆಗೆ ಅತ್ಯಂತ ಮಹತ್ವದ ಸ್ಥಾನವಿದೆ. ಮೂಲತಃವಾಗಿ ದಾನ ಎಂಬುದು ಪುಣ್ಯದ ವಾಂಛೆಯಿಂದ ಆರಂಭವಾದರೂ ಕ್ರಮೇಣವಾಗಿ ಅದು ಬೆಳೆಯುತ್ತ 'ಪರಹಿತ, ಸಮಾಜಹಿತ, ಲೋಕಹಿತ ಕಾರ್ಯ'ವಾಗಿ ರೂಪಾಂತರವಾದುದನ್ನು ಗುರುತಿಸಬಹುದು. "ವೈದಿಕ ಪರಂಪರೆಯಲ್ಲಿ ಷೋಡಶ ದಾನಗಳು ಹೇಳಲ್ಪಟ್ಟಿವೆ. ತುಲಾಪುರುಷ, ಹಿರಣಗರ್ಭ, ಬ್ರಹ್ಮಾಂಡ, ಕಲ್ಪವೃಕ್ಷ, ಗೋಸಹಸ್ರ, ಕಾಮಧೇನು ಅಥವಾ ಹಿರಣ್ಯ ಕಾಮಧೇನು, ಹಿರಣ್ಯಾಶ್ವ, ಹಿರಣ್ಯಾಶ್ವರಥ, ಹೇಮ ಹಸ್ತಿರಥ, ಹೈಯ ದಾರಾದಾನ ವಿಶ್ವಚಕ್ರ, ಕಲ್ಪಲತ, ಸಪ್ತಸಾಗರ, ರತ್ನಧೇನು, ಮಹಾಭೂತಪತಿ, ಪಂಚಲಾಂಬ, ಲಕ ಇವೇ ದಾನಗಳು"[೧].

ಜೈನರು ಮುಖ್ಯವಾಗಿ ಆಹಾರದಾನ, ಅಭಯದಾನ, ಔಷಧದಾನ ಮತ್ತು ಶಾಸ್ತ್ರ ದಾನಗಳೆಂಬ ನಾಲ್ಕು ಪ್ರಕಾರಗಳಲ್ಲಿ ತುಂಬಾ ವಿಶ್ವಾಸವನ್ನು ಹೊಂದಿದ್ದರು. ಮುಂದೆ ಬಂದಂತ ವೀರಶೈವರು ತಮ್ಮ ಧಾರ್ಮಿಕ ಪರಂಪರೆಯಲ್ಲಿ 'ದಾನ'ಕ್ಕೆ ತುಂಬಾ ಪ್ರಮುಖ ಸ್ಥಾನವನ್ನು ನೀಡಿದರು. ಕಾಲಾಂತರದಲ್ಲಿ 'ದಾನ' ಮೌಲ್ಯವನ್ನು ವಿಕಾಸ ಮಾಡಿಕೊಂಡು ದಾಸೋಹ ಆಚರಣೆಯಾಗಿಸಿಕೊಂಡರು. ವೀರಶೈವ ಸಂಸ್ಕೃತಿಯ ಆರಂಭಿಕ ಹಂತದಲ್ಲಿ 'ದಾಸೋಹ' ಎನ್ನುವುದು ವ್ಯಷ್ಟಿ ಮಟ್ಟದಲ್ಲಿ ನಡೆಯುತ್ತ ಹನ್ನೆರಡನೆಯ ಶತಮಾನದ ಬಸವಾದಿ ಶರಣರ ಬದುಕಿನಲ್ಲಿ ಅದು ಸಮಷ್ಟಿರೂಪ ತಾಳಿ, ಸಮಾಜ ವ್ಯಾಪಿಯಾಯಿತು. ಸಾರ್ವತ್ರಿಕವಾಗಿ ಸಕಲರೂ ಅನುಸರಿಸಬಹುದಾದ ಮೌಲ್ಯವಾಯಿತು. ಹಣದ ಗಳಿಕೆಯ ಜೊತೆಗೆ ಅದರ ವಿನಿಯೋಗದ ಕಡೆಗೂ ಗಮನವನ್ನು ಕೊಡಬೇಕಾದುದು ಬಹಳ ಮುಖ್ಯವೆಂಬುದನ್ನು ಮನಗಂಡರು. ಈ ಲೋಕಸಂಸಾರದಲ್ಲಿ ತಾನೊಬ್ಬನೆಂಬ ಭಾವನೆಯಿಂದ ದುಡಿಮೆಯ ಫಲವನ್ನು ಸಮಾಜಕ್ಕೆ ಅರ್ಪಿಸಬೇಕು ಎಂಬುದು ಶರಣರ ನಿಲುವಾಗಿತ್ತು. ಗುರು, ಲಿಂಗ, ಜಂಗಮಕ್ಕೆ ಕ್ರಮವಾಗಿ ತನು, ಮನ, ಧನಗಳನ್ನು ಅರ್ಪಿಸಬೇಕು ಎಂಬ ತ್ರಿವಿಧ ದಾಸೋಹ, ಸಾಮಾಜಿಕ ವಿಷಮತೆಯ ಪರಿವರ್ತನೆಯಿಂದ ಹಿಡಿದು ಆಧ್ಯಾತ್ಮಿಕ ಅರ್ಪಣೆ ಅನುಸಂಧಾನಗಳವರೆಗೂ ಬೆಳೆಯುತ್ತದೆ. "ನಾನು ಇದನ್ನು ಅವನಿಗೆ ನೀಡುತ್ತಿದ್ದೇನೆ' ಎಂಬ

ಅಹಂಕಾರವು ಮಾಯವಾಯ್ತು. "ಅವನಿಂದ ನಾನು ಇದನ್ನು ಪಡೆಯುತ್ತಿದ್ದೇನೆ" ಎಂಬ ದೈನ್ಯತೆಯೂ ದೂರವಾಯಿತು. ಕೊಡು–ಕೊಳ್ಳುವಿಕೆಯಲ್ಲಿ 'ಶಿವನ ಸೊಮ್ಮು ಶಿವನಿಗೆ' ಎಂಬ ಭಾವವು ಮೂಡಿತು. ಆಧ್ಯಾತ್ಮಿಕ ನೆಲೆಯಲ್ಲಿ "ಎಲ್ಲವನ್ನು ನಮಗೆ ಕೊಟ್ಟವನು ದೇವನು. ಅವನು ಕೊಟ್ಟುದನ್ನು ಅವನ ಅಂಶಿಕರಾದ ಜೀವಿಗಳಿಗೆ ನೀಡುತ್ತಿದ್ದೇವೆ" ಎಂಬ ಭಾವವು ಗಟ್ಟಿಯಾಯಿತು. ಈ ಅರ್ಥದಲ್ಲಿಯೇ ಜೇಡರ ದಾಸಿಮಯ್ಯ ಶರಣರು ಹೇಳಿದರು.

"ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ
ಸುಳಿದು ಸೂಸುವ ಗಾಳಿ ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥಾ?"[೨]

ಅಸಂಗ್ರಹ ಪ್ರವೃತ್ತಿಯು ದಾನ ಅಥವಾ ದಾಸೋಹದ ಮೂಲವಾಯಿತು. ಎಲ್ಲವನ್ನು ತನಗೇ ಬೇಕೆಂದು ಇಟ್ಟುಕೊಳ್ಳದೆ ಸಂಗ್ರಹದಲ್ಲಿನ ಒಂದಿಷ್ಟು ಭಾಗವನ್ನು ಸಮಾಜದ ಶ್ರೇಯಕ್ಕಾಗಿ ಸಲ್ಲಬೇಕು ಎಂಬುದು ಸಾಮಾಜಿಕ ಜೀವಿಯು ತನಗೆ ತಾನೇ ಸ್ವಯಂ ಆಗಿ ಹಾಕಿಕೊಳ್ಳಬಹುದಾದ ನಿಯಮವಾಯಿತು.

ಕನ್ನಡ ಶಾಸನಗಳಲ್ಲಿ ಹಲವಾರು ಪ್ರಕಾರದ ದಾನಗಳು ಬರುತ್ತವೆ. ಸುಮಾರು ೯೫ ಪ್ರತಿಶತದಷ್ಟು ದಾನ ಶಾಸನಗಳನ್ನೇ ಕಾಣುತ್ತೇವೆ. ಇವು ಕರ್ನಾಟಕ ಸಂಸ್ಕೃತಿಯ ಒಂದು ಪ್ರಧಾನವಾದ ಅಂಶವನ್ನು ಎತ್ತಿ ತೋರಿಸುತ್ತದೆ. ಜೀವನದ ಮೌಲ್ಯಗಳಲ್ಲಿ ದಾನಕ್ಕೆ ಪ್ರಪ್ರಥಮ ಸ್ಥಾನವನ್ನಿತ್ತ ಧಾರ್ಮಿಕ ಸಂಸ್ಕೃತಿಯ ಸ್ವರೂಪ ಈ ಶಾಸನಗಳಲ್ಲಿ ಪ್ರತಿಬಿಂಬಿತವಾಗದೆ ದೇವಾಲಯಗಳನ್ನು ಕಟ್ಟಿಸುವುದು, ಅವುಗಳ ವ್ಯವಸ್ಥೆಗಾಗಿ ಮತ್ತು ಮಠಗಳಿಗಾಗಿ, ಮಹಾವ್ಯಕ್ತಿಗಳಿಗಾಗಿ, ಅಲ್ಲದೆ ಅನ್ನ ಸತ್ರಾದಿ ಧರ್ಮ ಕಾರ್ಯಗಳಿಗಾಗಿ, ವಿದ್ಯಾಕೇಂದ್ರಗಳಿಗಾಗಿ, ಕೆರೆಗಳಿಗಾಗಿ, ಬಾವಿಗಳಿಗಾಗಿ, ಅರವಟ್ಟಿಗೆಗಳಿಗಾಗಿ, ವೀರರಿಗಾಗಿ, ಮಹಾಸತಿಯರಿಗೆ ಹೀಗೆ ಹತ್ತು ಹಲವಾರು ದಾನ ದತ್ತಿಗಳನ್ನು ಕೊಡುವುದು, ಲೌಕಿಕ ಸಂಪತ್ತಿನ ಗಳಿಕೆಯ ಸಾರ್ಥಕತೆ ಎಂದು ಜನ ಭಾವಿಸಿದ್ದರು. ರಾಜ ಮಹಾರಾಜರಿಂದ ಹಿಡಿದು ಜನಸಾಮಾನ್ಯರವರೆಗೂ ಈ ಧಾರ್ಮಿಕ ಭಾವನೆ ಜೀವನ ಸಹಜಗುಣವಾಗಿ ಪರಿಣಮಿಸಿತ್ತು. ಅದರ ಫಲವಾಗಿಯೇ ಊರೂರಿಗೂ ದಾನ ಶಾಸನಗಳು ನಿಂತಿರುವುದನ್ನು ಕಾಣಬಹುದು.

ದಾನರೂಪದಲ್ಲಿ ಬಂಗಾರದ ನಾಣ್ಯಗಳು, ಗೋವುಗಳು, ಭೂಮಿಯನ್ನು ನೀಡುತ್ತಿದ್ದರು. ಎಲ್ಲ ದಾನಗಳಿಗಿಂತಲೂ ಅನ್ನದಾನವೂ ಅತ್ಯಂತ ಶ್ರೇಷ್ಠವಾದುದೆಂದು ಸಾಮಾಜಿಕರ ತಿಳುವಳಿಕೆಯಾಗಿತ್ತು. ಹೀಗಾಗಿಯೇ ಮಠ-ದೇವಾಲಯಾದಿಗಳೆಲ್ಲ 'ಪ್ರಸಾದ ವಿತರಣೆಯ ದಾಸೋಹದ ಕೇಂದ್ರಗಳಾಗಿ ಬೆಳೆದವು. ಹಲವಾರು ಶಾಸನಗಳು 'ಅನ್ನದಾನ'ದ ಮಹತ್ವವನ್ನು ಕೊಂಡಾಡಿವೆ.

ಹತ್ತನೆಯ ಶತಮಾನದಿಂದ ಈಚೆಗೆ ದಾನಶಾಸನಗಳ ರಚನೆಯ ಪದ್ಧತಿಯಲ್ಲಿ ಒಂದು ಅಚ್ಚುಕಟ್ಟಾದ ಕ್ರಮ ಏರ್ಪಟ್ಟಂತೆ ತೋರುತ್ತದೆ. ವಿಷಯ ನಿರೂಪಣೆಯಲ್ಲಿ ದಾನವನ್ನೀಯುವ ವಸ್ತುವಿನಲ್ಲಿ ಮತ್ತು ಉದ್ದೇಶಗಳಲ್ಲಿ ವೈವಿಧ್ಯವಿದ್ದರೂ ಶಾಸನದ ಪ್ರಾರಂಭದ ಬೆಳವಣಿಗೆ ಮತ್ತು ಮುಕ್ತಾಯಗಳಲ್ಲಿ ಒಂದು ವ್ಯವಸ್ಥಿತ ಕ್ರಮ ಗೋಚರವಾಗುತ್ತದೆ. ಜನಜೀವನದ ಅನುಭವ, ಮನೋಧರ್ಮ ಮತ್ತು ಧಾರ್ಮಿಕ ಭಾವನೆಯ ವಿಕಾಸದ ಚಿತ್ರಣವನ್ನು ಈ ಶಾಸನಗಳ ಬೆಳವಣಿಗೆಯಲ್ಲಿ ಕಾಣಬಹುದು. ದಾನವನ್ನು ನೀಡುವವನು ಚಕ್ರವರ್ತಿಯಾಗಿರದೇ ಬೇರೆಯವನಾಗಿದ್ದರೆ ಆ ವ್ಯಕ್ತಿಯ ಮತ್ತು ಅವನ ವಂಶದ ವರ್ಣನೆ ಬರುತ್ತದೆ. ಅನಂತರ ಶಾಸನದ ಕಾಲ ಉಕ್ತವಾಗುತ್ತದೆ. ಇದು ಶಕೆ ವರ್ಷಗಳಿರುತ್ತದೆ. ಹೆಚ್ಚಾಗಿ ಶಾಲಿವಾಹನ ಶಕೆ, ಕೆಲವು ಕಡೆ ವಿಕ್ರಮ ಶಕೆ ಬರುತ್ತದೆ. ವರುಷ, ತಿಂಗಳು, ದಿನಗಳನ್ನು ಹೇಳುವಂತೆ ನಿಖರವಾದ ರೀತಿಯಲ್ಲಿ ಕಾಲವನ್ನು ಶಾಸನಗಳು ಕೊಡುತ್ತವೆ. ಆದುದರಿಂದಲೇ ಇತಿಹಾಸದ ದೃಷ್ಟಿಯಿಂದ ಅವು ಅತ್ಯಂತ ಮಹತ್ವದವುಗಳಾಗಿ ಪರಿಣಮಿಸಿವೆ. ಇದಾದ ನಂತರ ಕೊಡಬೇಕಾದ ದಾನವನ್ನು ನಿರ್ದೇಶಿಸುವ ಭಾಗ ಇರುತ್ತದೆ. ಕೊಡುವ ದಾನ ಜಮೀನಾಗಿದ್ದರೆ ಅದರ ಗಡಿಗಳನ್ನು ಹೇಳುವುದು ಗ್ರಾಮವಾದರೆ ಅದರ ಸೀಮೆಗಳನ್ನು ನಿರ್ದೇಶಿಸುವುದು; ಸುಂಕದ ಹಣವಾದರೆ ಅದರ ವಿವರಗಳನ್ನು ಕೊಡುವುದು-ಹೀಗೆ ದಾನದ ಹಲವಾರು ಬಗೆಗಳನ್ನು ಕಾಣುತ್ತೇವೆ. ದಾನವನ್ನು ಕೊಡುವುದು ಯಾರಿಗೆ? ದೇವಾಲಯಕ್ಕೋ, ಸಂಸ್ಥೆಗೋ, ಮಠಕ್ಕೋ, ವ್ಯಕ್ತಿಗೋ ಮತ್ತು ದಾನವನ್ನು ಕೊಡುತ್ತಿರುವ ಕಾರಣವೇನು? ಪೂಜಾದಿ ಕಾರ್ಯಗಳಿಗೋ, ಅನ್ನಸತ್ರಕ್ಕೋ, ವಿದ್ಯಾದಾನಕ್ಕೋ..... ಎಂಬ ಅಂಶಗಳ ವಿವರಣೆ ಬರುತ್ತದೆ. ಕೊಡುವ ದಾನ ಯಾವುದೇ ಆಗಲಿ, ಯಾವುದಕ್ಕೇ ಆಗಿರಲಿ, ಅದರ ಸಂಪೂರ್ಣ ಸ್ವಾಮ್ಯ ಪಡೆದವರದಾಗಿರುತ್ತದೆ.

ಕೊಡುವ ದಾನವನ್ನು ವಿನಯದಿಂದ ಕೊಡುತ್ತಿದ್ದರು. 'ಕಾಲಂ ಕರ್ಚಿ' ಗೌರವಪೂರ್ವಕವಾಗಿ ಕೊಡುತ್ತಿದ್ದರು.

**ದಾನ ಶಾಸನಗಳ ಶಿಲ್ಪ**

ಕನ್ನಡ ಶಾಸನಗಳಲ್ಲಿ ಬಹುಸಂಖ್ಯಾತ ಶಾಸನಗಳು 'ದಾನಶಾಸನ'ಗಳೇ ಆಗಿವೆ. ಆದುದರಿಂದ ಅವುಗಳ ಶಿಲ್ಪ ಕುರಿತಂತೆ ಒಂದಷ್ಟು ವಿವರಗಳು...

ಸಂಶೋಧಕರು ದಾನಶಾಸನಗಳ ಶಿಲ್ಪವನ್ನು ಐದು ಪ್ರಕಾರವಾಗಿ ವಿಂಗಡಿಸಿದ್ದಾರೆ.

೧. ಜೈನದಾನ ಶಾಸನ ಶಿಲ್ಪ
೨. ಶೈವದಾನ ಶಾಸನ ಶಿಲ್ಪ
೩. ವೈಷ್ಣವದಾನ ಶಾಸನ ಶಿಲ್ಪ
೪. ಧರ್ಮ ಸಮನ್ವಯ ದಾನ ಶಾಸನ ಶಿಲ್ಪ
೫. ಗೋ ಸಹಸ್ರದಾನ ಶಾಸನ ಶಿಲ್ಪ

**೧. ಜೈನದಾನ ಶಾಸನ ಶಿಲ್ಪ:**

೧. ಶಾಸನ ಶಿಲ್ಪಿಯು ತೀರ್ಥಂಕರನು ನಿಂತ ಅಥವಾ ಕುಳಿತ ಭಂಗಿಯಲ್ಲಿ ಶಿಲ್ಪವನ್ನು ರೂಪಿಸುತ್ತಿದ್ದನು. ಶಾಸನದ ಅಗ್ರಭಾಗದಲ್ಲಿ ಎಡ-ಬಲಕ್ಕೆ ಸೂರ್ಯ-ಚಂದ್ರರ ಚಿತ್ರಗಳನ್ನು ಬಿಡಿಸಲಾಗಿರುತ್ತಿತ್ತು. ತೀರ್ಥಂಕರನ ತಲೆಯ ಮೇಲೆ ಮುಕ್ಕೊಡೆ ಇರುತ್ತಿತ್ತು. ಆ ಕೊಡೆಯ ಎರಡೂ ಪಕ್ಕಗಳಲ್ಲಿ ಚಾಮರಗಳ ಶಿಲ್ಪವು ಇರುತ್ತಿತ್ತು.

೨. ಶಾಸನ ಶಿಲ್ಪಿಯು ಶಾಂತ ಮುದ್ರೆಯಲ್ಲಿ ಕುಳಿತ ಜಿನಮೂರ್ತಿಯನ್ನು ರಚಿಸುತ್ತಿದ್ದರು. ಅವನ ತಲೆಯ ಮೇಲೊಂದು ಮುಕ್ಕೊಡೆ, ಅದರ ಎರಡೂ ಬದಿಗೆ ಚಾಮರಶಿಲ್ಪ ಶಾಸನದ ಮೇಲು ತುದಿಗೆ ಹೊಂದಿಕೊಂಡಂತೆ ಸೂರ್ಯ-ಚಂದ್ರರ ಚಿತ್ರಗಳು ಇರುತ್ತಿದ್ದವು.

೩. ಶಾಸನದ ಮೇಲೆ ಕುಳಿತ ಜಿನಮೂರ್ತಿ ಇರುತ್ತದೆ. ಎಡ-ಬಲಗಳಲ್ಲಿ ಆಕಳು-ಆನೆಗಳ ಶಿಲ್ಪವು ಬಿಡಿಸಲಾಗಿರುತ್ತಿತ್ತು.

೪. ಕೆಲವು ಶಾಸನಗಳಲ್ಲಿ ಎಡಕ್ಕೆ ಆನೆ, ಬಲಕ್ಕೆ ಆಕಳ ಶಿಲ್ಪಗಳು ಇರುತ್ತಿದ್ದವು.

೫. ಕೆಲವು ಸಲ ಶಾಸನವನ್ನು ತ್ರಿಕೋನ ಆಕಾರದಲ್ಲೂ ರಚಿಸಲಾಗುತ್ತಿತ್ತು. ಅಂತಹ ಶಾಸನದಲ್ಲಿ ಮೇಲ್ತುದಿಯಲ್ಲಿ 'ಯಾಳಿ'ಯ ಶಿಲ್ಪವನ್ನು ಕೆತ್ತಲಾಗಿರುತ್ತಿತ್ತು. ಎಡಭಾಗದಲ್ಲಿ ಆನೆ, ಬಲಭಾಗದಲ್ಲಿ ಕರುವಿಗೆ ಹಾಲು ಕುಡಿಸುತ್ತಿರುವ ಆಕಳ ಚಿತ್ರ ಇರುತ್ತಿತ್ತು. ಜಿನಮೂರ್ತಿಯು ಕಲಾತ್ಮಕವಾದ ಎತ್ತರದ ಪೀಠದ ಮೇಲೆ ಕುಳಿತಿರುತ್ತಿದ್ದನು. ಜಿನನ ಎಡ-ಬಲಗಳಲ್ಲಿ ಚಾಮರ ಹಿಡಿದು ಯಕ್ಷರು ನಿಂತಿರುತ್ತಿದ್ದರು. ಇವೆಲ್ಲ ಶಿಲ್ಪಗಳು 'ಉಬ್ಬುಶಿಲ್ಪ' ರೀತಿಯಲ್ಲಿರುತ್ತಿದ್ದವು.

೬. ಕೆಲವು ಶಾಸನಗಳು ಮೂರು ಮಂಟಪಗಳಾಗಿ ವಿಭಾಗಗೊಂಡಂತೆ ಇರುತ್ತವೆ. ಎಡ-ಬಲ ಮಂಟಪಗಳಲ್ಲಿ ಹಾಲು ಕುಡಿಸುತ್ತಿರುವ ಗೋವಿನ ಶಿಲ್ಪವಿದ್ದು, ನಡುವೆ ಜಿನಮೂರ್ತಿ ಇರುತ್ತದೆ.

೭. ಕೆಲವು ಶಾಸನಗಳಲ್ಲಿ ಮೂರು ಮಂಟಪಗಳಿದ್ದರೂ ಶಿಲ್ಪವು ಬೇರೆಯಾಗಿರುತ್ತದೆ. ಮಧ್ಯ ಮಂಟಪದಲ್ಲಿ ತಲೆಯ ಮೇಲೆ ಐದು ಹೆಡೆಗಳ ಸರ್ಪ ಹೊಂದಿದ ಜಿನಮೂರ್ತಿ ಇರುತ್ತದೆ. ಎಡಭಾಗದಲ್ಲಿ ಆಕಳು-ಕರು, ಬಲಭಾಗದಲ್ಲಿ ವ್ಯಾಸಪೀಠದ ಮುಂದೆ ಕುಳಿತಿರುವ ಶಿಷ್ಯ.

೮. ಕೆಲವು ಸಲ ಮಾನಸ್ತಂಭದ ಮೇಲೂ ದಾನ ಶಾಸನದ ಒಕ್ಕಣಿಕೆ ಇರುತ್ತದೆ. ಅದರ ಮೇಲೆ ಏಳು ಹೆಡೆಗಳುಳ್ಳ ಸರ್ಪದ ನೆರಳಿನಲ್ಲಿ ಜಿನನು ನಿಂತಂತೆ ಶಿಲ್ಪವನ್ನು ಕೆತ್ತಲಾಗಿರುತ್ತದೆ.

೯. ಎತ್ತರವಾದ ಪೀಠದ ಮೇಲೆ ಜಿನನು ಕುಳಿತಂತೆ ಇದ್ದು ಎಡ-ಬಲಕ್ಕೆ ಆಕಳು-ಸಿಂಹ ಇವುಗಳ ಚಿತ್ರವು ಕೊರೆಯಲಾಗಿರುತ್ತದೆ.

೧೦. ಎತ್ತರದ ಪೀಠದ ಮೇಲೆ ಕುಳಿತಿರುವ ಜಿನ, ಎರಡೂ ಬದಿಯಲ್ಲಿ ನಿಂತು ಚಾಮರ ಬೀಸುತ್ತಿರುವ ಯಕ್ಷರು, ಗಗನದಿಂದ ಪುಷ್ಪವೃಷ್ಟಿ ಮಾಡುತ್ತಿರುವ ಅಪ್ಸರೆಯರ ಶಿಲ್ಪಗಳು ಶಾಸನದ ಅಗ್ರಭಾಗದಲ್ಲಿ ಇರುತ್ತವೆ.

೧೧. ಇನ್ನು ಕೆಲವು ದಾನ ಶಾಸನಗಳಲ್ಲಿ ಎಡಭಾಗದಲ್ಲಿ ಕೈಮುಗಿದುಕೊಂಡ ಭಕ್ತನಿದ್ದಾನೆ. ಅವನಿಗೆ ಸೇವಕರು ಚಾಮರ ಬೀಸುತಲಿದ್ದಾರೆ. ಅದರ ಮೇಲೆಯೇ ಕರು-ಹಸುವನ್ನು ಚಿತ್ರಿಸಲಾಗಿದೆ.

**೨. ಶೈವದಾನ ಶಾಸನ ಶಿಲ್ಪ:**

೧. ಶೈವಶಾಸನಗಳಲ್ಲಿ ಶಿವಲಿಂಗದ ಶಿಲ್ಪವು ಇರುತ್ತದೆ. ಅದರ ಎಡ-ಬಲಗಳಲ್ಲಿ ಸೂರ್ಯ-ಚಂದ್ರರ ಚಿತ್ರವು ಇರಿಸಲಾಗಿರುತ್ತದೆ.

೨. ಕೆಲವು ಶಾಸನಗಳಲ್ಲಿ ಶಿವಲಿಂಗ ಮತ್ತು ಅದರ ಬದಿಯಲ್ಲಿಯೇ ಕರುವಿಗೆ ಹಾಲು ಕುಡಿಸುತ್ತಿರುವ ಗೋವಿನ ಶಿಲ್ಪವನ್ನು ಕೆತ್ತಲಾಗಿದೆ.

೩. ಕೆಲವು ಶಾಸನಗಳಲ್ಲಿ ಶಿವಲಿಂಗ ಮತ್ತು ಅದರ ಮುಂದೆ ನಂದಿಯ ಶಿಲ್ಪವನ್ನು ಕೊರೆಯಲಾಗಿದೆ.

೪. ಕೆಲವು ಶಾಸನಗಳಲ್ಲಿ ಚೌಕಾಕಾರದ ಸ್ತಂಭಗಳಂತಿದ್ದು, ಅದರಲ್ಲಿ ನಂದಿಯ ಶಿಲ್ಪವನ್ನು ಕೊರೆಯಲಾಗಿದೆ.

೫. ಕೆಲವು ಶಾಸನಗಳಲ್ಲಿ ಪೀಠದ ಮೇಲೆ ಕುಳಿತ ನಂದಿಯನ್ನು ಕೆತ್ತಲಾಗಿದೆ.

೬. ಕೆಲವು ಶಾಸನಗಳಲ್ಲಿ ಕಿರೀಟ ಧರಿಸಿದ ಶಿವಲಿಂಗ ಮತ್ತು ಎಡ-ಬಲ ಬದಿಗಳಲ್ಲಿ ನಂದಿ ಮತ್ತು ಕರುವಿಗೆ ಹಾಲು ಕುಡಿಸುವ ಆಕಳ ಶಿಲ್ಪವಿರುವುದನ್ನು ಕಾಣಬಹುದು.

೭. ಕೆಲವು ಶಾಸನಗಳು ಶಿವಲಿಂಗ, ಅದಕ್ಕೆ ಪೂಜೆ ಮಾಡುವ ಭಕ್ತ, ಎಡ-ಬಲಕ್ಕೆ ನಂದಿ-ಹಸು-ಕರು ಇಂತಹ ಶಿಲ್ಪಗಳಿವೆ. ಗೋಪುರದಂತೆ ಶಾಸನದ ಬಾಹ್ಯ ರಚನೆಯಿದೆ. ಒಳಗಡೆಯ ಮಂಟಪದಲ್ಲಿ ಲಿಂಗ-ಭಕ್ತರ ಶಿಲ್ಪಗಳಿವೆ. ಮಂಟಪದ ಮೇಲ್ಭಾಗದಲ್ಲಿ ಎಡ-ಬಲಕ್ಕೆ ಸೂರ್ಯ ಚಂದ್ರರ ಚಿತ್ರಗಳಿವೆ.

೮. ಇನ್ನು ಹಲವು ಶಾಸನಗಳಲ್ಲಿ ನಂದಿ ಮತ್ತು ಆಕಳುಗಳನ್ನು ಮಂಟಪದ ಒಳಗೆ ಚಿತ್ರಿಸಲಾಗಿದೆ.

೯. ಕೆಲವು ಶಾಸನಗಳಲ್ಲಿ ಮೂರು ಭಾಗ ಮಾಡಲಾಗಿದೆ. ಅದರ ಬಾಹ್ಯವು ಅರ್ಧವೃತ್ತದಂತಿದೆ. ನಡುವಿನ ಮಂಟಪದಲ್ಲಿ ಶಿವಲಿಂಗ ಮತ್ತು ಎಡ-ಬಲಕ್ಕೆ ಭಕ್ತರ ಪ್ರತಿಮೆಗಳಿವೆ. ಹಾಗೆಯೆ ಶಾಸನದ ಎಡಕ್ಕೆ ನಂದಿಯನ್ನು, ಬಲಕ್ಕೆ ಭಕ್ತರ ಚಿತ್ರವನ್ನು ಕೆತ್ತಲಾಗಿದೆ.

**೩. ವೈಷ್ಣವದಾನ ಶಾಸನ ಶಿಲ್ಪ:**

೧. ವೈಷ್ಣವ ಶಾಸನಗಳ ಮೇಲೆ ಶಂಕ-ಚಕ್ರದ ಚಿತ್ರಣ ಕಾಣಬಹುದು.

೨. ಕೆಲವು ಶಾಸನಗಳಲ್ಲಿ ವೈಷ್ಣವ ದೇವತೆಗಳ ಶಿಲ್ಪವನ್ನು ನೋಡಬಹುದು.

೩. ಕೆಲವು ಶಾಸನಗಳ ಮೇಲೆ ಗರುಡದ ಶಿಲ್ಪವಿರುವುದನ್ನು ಗುರುತಿಸಬಹುದು.

೪. ಕೆಲವು ಶಾಸನಗಳ ಮೇಲೆ ಶಂಕ-ಚಕ್ರ-ನಾಮದ ಚಿತ್ರಗಳಿವೆ.

**೪. ಧರ್ಮ ಸಮನ್ವಯ ಶಾಸನ ಶಿಲ್ಪ:**

೧. ಶೈವ-ವೈಷ್ಣವ ಧರ್ಮಗಳ ಸಮನ್ವಯವನ್ನು ಸಾರುವ ಒಂದು ಶಾಸನದಲ್ಲಿ ಎರಡು ಹಂತಗಳಿದ್ದು, ಮೇಲಿನ ಹಂತದಲ್ಲಿ ಭಕ್ತ-ಶಿವಲಿಂಗ-ನಂದಿಗಳ ಶಿಲ್ಪವನ್ನು ಕೆತ್ತಲಾಗಿದೆ. ಕೆಳಗಿನ ಹಂತದಲ್ಲಿ ಶಂಕ-ಚಕ್ರ-ವಾಮನನ ಶಿಲ್ಪವನ್ನು ಕಂಡರಿಸಲಾಗಿದೆ.

೨. ಕೆಲವು ಶಾಸನಗಳ ಮೂರು ಮಂಟಪಗಳನ್ನು ಹೊಂದಿದ್ದು, ಅದರಲ್ಲಿ ನಡುವೆ ಶಿವಲಿಂಗ, ಎಡ-ಬಲಕ್ಕೆ ಬ್ರಹ್ಮ-ವಿಷ್ಣುಗಳ ಶಿಲ್ಪವನ್ನು ಚಿತ್ರಿಸಲಾಗಿದೆ.

೩. ಕೆಲವು ಶಾಸನಗಳಲ್ಲಿ ಹಿರಣ್ಯಕಶ್ಯಪುವನ್ನು ಸಂಹರಿಸುತ್ತಿರುವ ಉಗ್ರ ನರಸಿಂಹನ ಶಿಲ್ಪವನ್ನು, ಒಂದು ಬದಿಗೆ ನಂದಿಯನ್ನು, ಇನ್ನೊಂದು ಬದಿಗೆ ಜೈನತೀರ್ಥಂಕರನ ಶಿಲ್ಪ ಕೆತ್ತಲಾಗಿದೆ.

೪. ಕೆಲವು ಶಾಸನಗಳಲ್ಲಿ ಶಿವಲಿಂಗ ಮತ್ತು ಕೇಶವನ ಶಿಲ್ಪಗಳಿವೆ.

೫. ಕೆಲವು ಶಾಸನಗಳಲ್ಲಿ ಮಂಟಪದ ಶಿಲ್ಪವಿದ್ದು ಅದರೊಳಗೆ ಶಿವಲಿಂಗ ಎಡಬಲಕ್ಕೆ ನಂದಿ ಮತ್ತು ಮೇಲ್ಭಾಗದಲ್ಲಿ ಗಣಪತಿ, ನಾರಾಯಣ, ರುದ್ರ, ಕಾರ್ತಿಕೇಯರ ಶಿಲ್ಪಗಳನ್ನು ಕೆತ್ತಲಾಗಿದೆ.

**೫. ಗೋ ಸಹಸ್ರದಾನ ಶಾಸನ ಶಿಲ್ಪ:**

೧. ಗೋದಾನ ಕಲ್ಲುಗಳು ಹೆಚ್ಚಾಗಿ ಕಪ್ಪು ಶಿಲೆಯ ಮೇಲೆ ಕೊರೆಯಲಾಗಿದೆ.

೨. ಆ ಶಾಸನಗಳ ಕಲ್ಲುಗಳು ಅರ್ಧ ವೃತ್ತಾಕಾರವಾಗಿದ್ದು, ಕಂಬದಂತೆ ೨–೪ ಅಡಿಗಳಷ್ಟು ಎತ್ತರವಾಗಿರುತ್ತವೆ.

೩. ಕೆಲವು ಕಲ್ಲುಗಳ ಮೇಲೆ ಕಳಸದ ಶಿಲ್ಪ ಕಾಣಬಹುದು.

೪. ಕೆಲವು ಶಾಸನಗಳ ಮೇಲೆ ಕಳಸದೊಂದಿಗೆ ಹೂ–ಬಳ್ಳಿಗಳಿವೆ.

೫. ಕೆಲವು ಶಾಸನಗಳು ಹೂ–ಬಳ್ಳಿಯೊಂದಿಗೆ ಆನೆಯ ಶಿಲ್ಪವನ್ನು ಹೊಂದಿವೆ.

೬. ಕೆಲವು ಶಾಸನಗಳು ಕಳಸ ಮತ್ತು ನೇಗಿಲು ಚಿತ್ರ ಹೊಂದಿವೆ.

೭. ಕೆಲವು ಕಲ್ಲಿನ ಮೇಲೆ ಬೇರೆ ಚಿತ್ರಗಳಿವೆ.

೮. ಗೋದಾನ ಶಾಸನದಲ್ಲಿ ಮೀನುಗಳ ಶಿಲ್ಪ ಕಾಣಬಹುದು.

**ಜೈನ ಶಾಸನಗಳು:**

೧. ಕ್ರಿ.ಶ. ೧೨೪೪ರ ಯಾದವರ ಕಾಲದ ಒಂದು ಶಾಸನವು ಸೇನಗಣದ ಮೂಲ ಸಂಘದ ಪೊಗರಿಚ್ಚಕ್ಕೆ ಸೇರಿದ ಧರ್ಮಸೇನ ತ್ರೈವಿದ್ಯದೇವನ ಶಿಷ್ಯ ಕಮಳಸೇನನ ವರ್ಣನೆ ಬಂದಿದ್ದು, ಅವನಿಗೆ ಹಗರಟಿಗೆ ನಾಡಿನಲ್ಲಿ ಭೂಮಿ ದಾನವಾಗಿ ನೀಡಿದ ವಿಷಯ ಬರುತ್ತದೆ.

೨. ಕ್ರಿ.ಶ. ೧೦೫೮ರ ಗೊಬ್ಬೂರ ಶಾಸನವು ಆ ಗ್ರಾಮದ ಮೂಲಿಗರು ಶ್ರೀ ಅಯ್ಯಣ್ಣ ರಾಜನ ಸಮ್ಮುಖದಲ್ಲಿ ಜಿನದೇವಾಲಯವೊಂದಕ್ಕೆ ಮೂಲಿಗದೆರೆ ಹಾಗೂ ಬೆಳೆಡಿರೆಯನ್ನು ಧಾರಾಪೂರ್ವಕವಾಗಿ ದತ್ತಿಬಿಟ್ಟ ವಿಷಯವು ಬರುತ್ತದೆ.

೩. ಕ್ರಿ.ಶ. ೧೧೩೮ರ ಸೇಡಂ ಶಾಸನವು ಮಹಾಚಂಡ ದಂಡನಾಯಕ ಕಾಳಮಯ್ಯ ಪ್ರಮುಖ ಅಶೇಷ ಮಹಾಜನಗಳು ಸೇಡಂ ದಕ್ಷಿಣ ದಿಬ್ಬಾಗದ ಆದಿದೇವ ಭಟ್ಟಾರಕರಿಗೆ ಹಾಗೂ ಅಲ್ಲಿ ನಡೆಯುವ ಜೀವದಯಾಷ್ಟಮಿ, ನಂದೀಶ್ವರಾಷ್ಟಮಿ... ಮುಂತಾದ ಪರ್ವಗಳಿಗೆ ಭೂದಾನ ಮಾಡಿದ ವಿಷಯ ಹೇಳಿದೆ.

೪. ಕ್ರಿ.ಶ. ೧೧೧೨ರ ಚಾಲುಕ್ಯ ಶಾಸನದಲ್ಲಿ ಬಿಜ್ಜಿಸೆಟ್ಟಿ ಮಾಡಿಸಿದ ಪಾರ್ಶ್ವನಾಥದೇವರಿಗೆ ೨೪ ಮೆತ್ತರು ಭೂಮಿದಾನ ನೀಡಿರುವ ವಿಚಾರವಿದೆ.

೫. ಕ್ರಿ.ಶ. ೧೨೮೨ರ ಶಾಸನವು ಪ್ರಭುಗಳು ಮತ್ತು ಸಮಸ್ತ ಪ್ರಜೆಗಳು ಬಸದಿಯೊಂದಕ್ಕೆ ಭೂಮಿಯನ್ನು ದತ್ತಿಯಾಗಿ ಬಿಟ್ಟ ವಿಷಯ ತಿಳಿಸುತ್ತದೆ.

೬. ಕ್ರಿ.ಶ. ೧೯೯ರ ಹುಣಸಿ ಹಡಲಗಿ ಶಾಸನದಲ್ಲಿ ದಂಡನಾಯಕ ಜೀವಣಯ್ಯಗಳ ಬಿನ್ನಪದಿಂದ ಚೌಧರೆ ರಕ್ಕಸಯ್ಯ ನಾಯಕನು ತನ್ನ ಪ್ರಭುತ್ವದ ಗೊಂಕನೂರಿನ ಕೆಲವು ಹಳ್ಳಿಗಳನ್ನು ಪಾಶ್ವನಾಥ ಹಾಗೂ ಶಾಂತಿನಾಥನ ಬಸದಿಗಳಿಗೆ ದಾನವಾಗಿ ಬಿಟ್ಟಂತೆ ಹೇಳಲಾಗಿದೆ.

೭. ಕ್ರಿ.ಶ. ೧೧೬೦ರ ಕಳಚೂರಿಯರ ಶಾಸನದಲ್ಲಿ ಕನ್ನಡಿಗೆಯೆಂಬಲ್ಲಿ ರವಿದೇವ ಚಂದಮಯ್ಯ ಎಂಬುವವರು ಬಸದಿಯೊಂದನ್ನು ಕಟ್ಟಿಸಿ ಅದಕ್ಕೆ ದಾನಬಿಟ್ಟಂತೆ ವಿವರಿಸಲಾಗಿದೆ.

೮. ಕ್ರಿ.ಶ. ೧೦೦೮ರ ಕಲ್ಯಾಣ ಚಾಲುಕ್ಯರ ಶಾಸನವೊಂದು ದೇಶಗಣ, ಕೊಂಡಕುಂದಾನ್ವಯ ಸೂತ್ರಾನುವರ್ತಿ ಜೈನಾಚಾರ್ಯ ಸಿಂಹಣಂದಿಗಳು ತಿಂಗಳು ಪರ್ಯಂತ ಸಲ್ಲೇಖನ ವ್ರತ ಕೈಗೊಂಡು ಮರಣವನ್ನಪ್ಪಿದಾಗ ಅವರ ಶಿಷ್ಯನಾದ ಕಲ್ಯಾಣ ಕೀರ್ತಿ ಗುರುಗಳ ಸ್ಮರಣಾರ್ಥವಾಗಿ ಶಾಂತಿನಾಥ ಜಿನ ತೀರ್ಥಂಕರ ಚೈತ್ಯಾಲಯವನ್ನು ಬಿಟ್ಟು ಕುಂದಿಯ ಬಿಟ್ಟದ ಮೇಲೆ ಕಟ್ಟಿಸಿದಂತೆ ಉಲ್ಲೇಖಿಸಲಾಗಿದೆ.

೯. ಕ್ರಿ.ಶ. ೧೦೭೬ರ ಅಡಕಿ ಶಾಸನದಲ್ಲಿ ಮಹಾಮಂಡಲೇಶ್ವರ ಮಿರಂಡೆನಾಡ ಏಚಪ್ರಭುಗಳು ಸೀರೆಯ ಕಾಳಸೆಟ್ಟಿ ಹಾಗೂ ಇನ್ನಿತರ ಜೈನ ವರ್ಗದ ಸೆಟ್ಟಿ ಸಮುದಾಯದವರು ಬಸದಿಯೊಂದನ್ನು ನಿರ್ಮಿಸಿ ದತ್ತಿಬಿಟ್ಟ ವಿಚಾರವನ್ನು ತಿಳಿಸಲಾಗಿದೆ.

೧೦.ಕ್ರಿ.ಶ. ೧೨೪೮ರ ಯಾದವ ಕನ್ನರದೇವನ ಶಾಸನದಲ್ಲಿ ಹಿರಿಯ ಅಗ್ರಹಾರದ ಮಹಾಜನಗಳು, ಮನ್ನೆಯರು, ಪ್ರಭುಗಳು ಸೇರಿ ಹಲಸೂರು ದೇಸಿಗಣದ ಇಂಗಳೇಶ್ವರದ ಬಳಿಯ ಪಾರ್ಶ್ವನಾಥದೇವರಿಗೆ ಮಾಣಿಕೇಶ್ವರದ ಕೋಲಲ್ಲಿ ಭೂಮಿಯನ್ನು ದಾನಕೊಟ್ಟಂತೆ ದಾಖಲಿಸಲಾಗಿದೆ.

೧೧. ಕ್ರಿ.ಶ. ೧೧೬೦ರ ಶಾಸನವೊಂದು ಶಾಂತಿಪಂಡಿತ ಎಂಬುವವನು ಇಂಗಳೇಶ್ವರದಲ್ಲಿ ಮಲ್ಲಿನಾಥ ಜಿನಾಲಯವನ್ನು ಕಟ್ಟಿಸಿದ ವಿಷಯವು ಬರುತ್ತದೆ.

೧೨. ಕ್ರಿ.ಶ. ೧೧೨೬ರ ಸೇಡಂ ಶಾಸನವು ಅಲ್ಲಿನ ೩೦೦ ಮಹಾಜನಗಳು ಹಾಗೂ ವಿಭುದೋತ್ತಮ ಬರ್ಮದೇವನು, ಪ್ರಭಾಚಂದ್ರ ತ್ರೈವಿಧ ಭಟ್ಟಾರಕರ ಸಮ್ಮುಖದಲ್ಲಿ ಶಾಂತಿನಾಥ ಚೈತ್ಯಾಲಯವನ್ನು ನಿರ್ಮಿಸಿ ಭೂಮಿಯನ್ನು ದಾನವಾಗಿ ಬಿಟ್ಟ ವಿಷಯವು ಹೇಳುತ್ತದೆ.

೧೩. ಕ್ರಿ.ಶ. ೧೧೨೪ರ ಸೇಡಂ ಶಾಸನವು ಸೇಡಿಂಬದ ಮುನೂರ್ವರು ಮಹಾಜನರು ಶಾಂತಿನಾಥ ಚೈತ್ಯಾಲಯವನ್ನು ಕಟ್ಟಿಸಿ ಅದಕ್ಕೆ 'ಬ್ರಹ್ಮಜಿನಾಲಯ'ವೆಂದು ಹೆಸರಿಟ್ಟು ಅಲ್ಲಿನ ಪರ್ವ ಉತ್ಸವಾದಿಗಳಿಗೆ ಜೀರ್ಣೋದ್ಧಾರ ಕಾರ್ಯಕ್ಕೆ ದತ್ತಿ ಬಿಟ್ಟ ವಿಷಯವು ಹೇಳಿದೆ.

೧೪. ಕ್ರಿ.ಶ. ೧೦೧೯ರ ಚಾಲುಕ್ಯ ಜಗದೇವಮಲ್ಲನ ಕಾಲದಲ್ಲಿ ಹುಟ್ಟಿದ ಈ ಶಾಸನದಲ್ಲಿ ದಾಸರಸನ ನಿವೇದನೆಯಂತೆ ಬಲ್ಲವರಸನು ಆನೆಯ ರೋವಿಗೆಯ ನಗಲೇಶ್ವರ ದೇವರ ಸೇವೆಗಾಗಿ, ಅಲ್ಲಿನ ತಪಸ್ವಿಗಳ ಆಹಾರಕ್ಕಾಗಿ, ಭಾಳಚಂದ್ರ ಪಂಡಿತರಿಗೆ ೧೫೦ ಮತ್ತರು ಭೂಮಿಯನ್ನು ದಾನವಾಗಿ ನೀಡುತ್ತಾನೆಂಬುದನ್ನು ಹೇಳಲಾಗಿದೆ.

೧೫. ಕ್ರಿ.ಶ. ೧೦೪೧ರ ಶಾಸನವು ಬಸದಿಯೊಂದಕ್ಕೆ ೨೦ ಮತ್ತರು ಭೂಮಿಯನ್ನು ದಾನವಾಗಿ ಬಿಟ್ಟ ವಿಚಾರವು ವಿವರಿಸುತ್ತದೆ.

೧೬. ಕ್ರಿ.ಶ. ೧೦೧೫ರ ಚಾಲುಕ್ಯ ಕಾಲದ ಶಾಸನವು ದೇವಣರಸನು ನಗರೇಶ್ವರ ದೇವರಿಗೆ ದಕ್ಷಿಣ ದಿಕ್ಕಿನ ಊರೊಡೆಯರ ಗೋವಣ ಹೊಲದಲ್ಲಿ ೬೦ ಮತ್ತರು ಭೂಮಿಯನ್ನು ದಾನವಾಗಿ ನೀಡಿದಂತೆ ಹೇಳಲಾಗಿದೆ.

೧೭. ಕ್ರಿ.ಶ. ೧೯೪ರ ಇಂಗಳಗಿ ಶಾಸನದಲ್ಲಿ ಚಾಳುಕ್ಯ ವಿಕ್ರಮಾದಿತ್ಯನ ರಾಣಿಯರಲ್ಲಿ ಒಬ್ಬಳಾದ ಜಕ್ಕಲದೇವಿಯು ಇಂಗಳಿಗೆಯಲ್ಲಿ ಜಿನ ಬಸದಿಯನ್ನು ಕಟ್ಟಿಸಿ ಅದರ ಉಪಾರ್ಜನೆಗಾಗಿ ಭೂಮಿಯನ್ನು ದಾನಬಿಟ್ಟ ವಿಚಾರವು ತಿಳಿಸಲಾಗಿದೆ.

೧೮. ಕ್ರಿ.ಶ. ೧೧ನೇ ಶತಮಾನಕ್ಕೆ ಸೇರಿದ ಈ ಶಾಸನವು ಪುರವಣಿಯ ೨೪ ಊರೊಡೆಯರು, ಪಂಚಮಠ ಸ್ಥಾನದ ಸಮ್ಮುಖದಲ್ಲಿ ಕಣ್ಣೂರು ಬಸದಿಗೆ ಮೃಗಾವತಿಯಜ್ಜಿ ಎಂಬುವಳು ೧೩ ಮತ್ತರು ಭೂಮಿಯನ್ನು ದಾನ ನೀಡಿದಂತೆ ತಿಳಿಸುತ್ತದೆ.

೧೯. ಕ್ರಿ.ಶ. ೧೨ನೇ ಶತಮಾನದ ಒಂದು ಶಾಸನವು ಜೈನಧರ್ಮದ ಯಕ್ಷಿಯರಾದ ಅಪರಜಿತ, ಮಹಾಮಾನಸಿ, ಅನಂತಮತಿ, ಚಕ್ರೇಶ್ವರಿ ಹಾಗೂ ಯಕ್ಷರಾದ ವೃಷಭ, ಪಾತಾಳ ಕುಬೇರ, ಶಾಂತಿನಾಥರ ಹೆಸರುಗಳನ್ನು ತಿಳಿಸುತ್ತ ಅವರಿಗೆಲ್ಲ ಭೂಮಿಯನ್ನು ದತ್ತಿ ಬಿಟ್ಟಂತೆ ಹೇಳುತ್ತದೆ.

**ಶೈವ–ವೀರಶೈವ ದಾನ ಶಾಸನಗಳು:**

೧. ಕ್ರಿ.ಶ. ೯೫೮ರ ಆಂದೇಲಿ ಶಾಸನದಲ್ಲಿ ಕನ್ನರದೇವನು ಆಳುತ್ತಿದ್ದಾಗ ಅವನ ಪ್ರದೇಶದಲ್ಲಿನ ನರಿಯುಂಬೊಳೆ ಎಳ್ಪತ್ತರದಲ್ಲಿದ್ದ ಆಂದೇಲಿಯ ಹೆಗ್ಗಡೆ ಗುಂಡಗೆಯ್ಯನ ಮಗ ಕೇಶಿಮಯ್ಯ ಹಾಗೂ ಇತರ ಮೂವರು ಕೂಡಿಕೊಂಡು ಗುಂಡಿಗೇಶ್ವರನೆಂಬ ಲಿಂಗವನ್ನು ಸ್ಥಾಪಿಸಿ ಅದಕ್ಕೆ ಆಂಚಧಾರ್ಕವಾಗಿ ಭೂಮಿಯನ್ನು ದಾನವಾಗಿ ನೀಡಿದಂತೆ ತಿಳಿಸಲಾಗಿದೆ.

೨. ಕ್ರಿ.ಶ. ೧೦೨೮ರ ಆಳಂದಿನ ಶಾಸನವು ಚಾಲುಕ್ಯ ತ್ರಿಭುವನ ಮಲ್ಲದೇವನ ಕಾಲದಲ್ಲಿ ರಾಣಿ ಚಂದಲದೇವಿಯ ಬಿನ್ನಪದಂತೆ ಯುವರಾಜ ಮಲ್ಲಿಕಾರ್ಜುನನು ದಂಡನಾಯಕ ಬಾಚರಸ ಹಾಗೂ ಸಾಮಂತ ಕಾಶಿದಾಸರ ಮುಖಾಂತರ ಅಲ್ಲಿನ ಸೋಮೇಶ್ವರ ದೇವರಿಗೆ, ಸ್ಥಾನಾಧಿಪತಿಗಳಾದ ಸೂರೇಶ್ವರ ಪಂಡಿತರಿಗೆ ಭೂಮಿ, ಮಾವಿನ ತೋಪು ಹಾಗೂ ಇತರ ಮಾರಾಟ ವಸ್ತುಗಳ ಮೇಲಿನ ತೆರಿಗೆಗಳನ್ನು ಬಾಧಾಪರಿ ಹಾರವಾಗಿ ಧಾರಾಪೂರ್ವಕವಾಗಿ ದಾನ ನೀಡಿದಂತೆ ತಿಳಿಸುತ್ತದೆ.

೩. ಕ್ರಿ.ಶ. ೧೦೫೩ರ ಕೆಂಬಾವಿ ಶಾಸನವು ಚಾಲುಕ್ಯ ಅರಸು ಒಂದನೆಯ ಸೋಮೇಶ್ವರನ ಕಾಲದಲ್ಲಿ ಅವನ ಮಹಾಮಂಡಲೇಶ್ವರನಾಗಿದ್ದ ರೇವರಸನ ರಾಣಿ ಮಾಲಿಯಬ್ಬರಸಿ ಎಂಬುವವಳು 'ಮಾಲಿಭೇಶ್ವರ' ಎಂಬ ದೇವರನ್ನು ಪ್ರತಿಷ್ಠಾಪಿಸಿ ಭೂಮಿಯನ್ನು ದಾನ ಬಿಟ್ಟಳೆಂದು ಹೇಳುತ್ತದೆ.

೪. ಚಾಲುಕ್ಯ ತ್ರೈಲೋಕ್ಯ ಮಲ್ಲನ ಕಾಲದ ಕ್ರಿ.ಶ. ೧೦೫೪ರ ದಿಗ್ಗಾವಿ ಶಾಸನವು ಅವನ ಮಹಾಮಂಡಲೇಶ್ವರನಾದ ಬಾಚರಸನು ಹಾಗೂ ಮಹಾಸಾಮಂತ ಯರಗರಸನು ಇಬ್ಬರು ಕೂಡಿ ದಿಗ್ಗಾವಿಯ ಸ್ವಯಂಭೂ ದೇವರಿಗೆ ದತ್ತಿ ಬಿಟ್ಟಂತೆ ಹೇಳುತ್ತದೆ.

೫. ಕ್ರಿ.ಶ. ೧೦೭೬ರ ವಡಗೇರಿ ಶಾಸನವು ಚಾಲುಕ್ಯ ವಿಕ್ರಮನ ಕಾಲದಲ್ಲಿ ದಾಲುಮೇಶ್ವರ ದೇವರಿಗೆ ಮತ್ತು ಸಿಂಹಪರಿಷೆಯ ಶೈವಗುರು ಸಂತತಿಗೆ ದತ್ತಿ ಬಿಟ್ಟ ವಿಚಾರವು ಉಲ್ಲೇಖ ಮಾಡುತ್ತದೆ.

೬. ಚಾಲುಕ್ಯ ತ್ರಿಭುವನಮಲ್ಲನ ಕಾಲದ ಕ್ರಿ.ಶ. ೧೦೭೬ರ ಶಾಸನವು ಬೈಚಬಾಳದ ರೆಬ್ಬೇಶ್ವರ ದೇವರು ಮತ್ತು ಎಳೆಮೇಲೆ ಸಿಂಹ ಪುರುಷೆಯ ತೇಜೋರಾಶಿ ಪಂಡಿತ ದೇವರಿಗೆ ಭೂಮಿಯನ್ನು ದಾನ ಬಿಡುವುದರೊಂದಿಗೆ ಬೈಸಬಾಳ ಗ್ರಾಮ ಪ್ರಭು ಸಾಮ್ಯದ ೧/೫ ಜೀವಿತ ಭಾಗವನ್ನು ದಾನವಾಗಿ ಕೊಟ್ಟಂತೆ ಹೇಳುತ್ತದೆ.

೭. ಕ್ರಿ.ಶ. ೧೦೭೮ರ ಚಾಲುಕ್ಯ ವಿಕ್ರಮಾದಿತ್ಯನ ಕಾಲದ ಏವೂರಿನ ಶಾಸನವು ವಿಕ್ರಮಾದಿತ್ಯನ ಪ್ರದಾನ ಹೇರಿಲಾಳ ಸಂಧಿವಿಗ್ರಹಿ ದಂಡನಾಯಕನಾಗಿದ್ದ ರವಿಯಣ್ಣ ಭಟ್ಟರು ಸ್ವಯಂಭು ದೇವಾಲಯದ ಅಂಗ-ರಂಗ ಭೋಗ, ವಕ್ಖಾಣಿಪರಿಗಿ, ವಿದ್ಯಾರ್ಥಿ

ತಪೋಧನರಿಗೆ ಅಭ್ಯಾಗತರಿಗೆ ಭೂಮಿಯನ್ನು ದತ್ತಿ ನೀಡಿದ ವಿಚಾರವು ಹೇಳುತ್ತದೆ. ಈ ದತ್ತಿಯನ್ನು ಸ್ವೀಕರಿಸಿದವರು ದೇವಾಲಯ ಸ್ಥಾನಾಧಿಪತಿಗಳಾಗಿದ್ದ ಎಳಮಲೆಯ ಸಿಂಹ ಪರಿಷೆಯ ಮಲಯಾಳ ಪಂಡಿತದೇವರ ಶಿಷ್ಯ ವಿರಿಂಚೆಯ ಚಿಕ್ಕದೇವರ ಪ್ರಶಿಷ್ಯ ಶ್ರೀಮದೀಶಾಸನರಾಶಿ ಪಂಡಿತ.

೮. ಕ್ರಿ.ಶ. ೧೦೮೫ರ ಗೊಬ್ಬೂರ ಶಾಸನವು ಚಾಲುಕ್ಯ ವಿಕ್ರಮಾದಿತ್ಯನ ಕಾಲದಲ್ಲಿ ಮಹಾಮಂಡಲೇಶ್ವರ ಜೋಯಿಮರಸನು ಕಲ್ಲಪ್ಪಯ್ಯಗಳ ಬಿನ್ನಹದಂತೆ ಹಳ್ಳಿಸಿಂತೆಯ ಗೊಬ್ಬೂರಿನ ಕಲಿದೇವರಿಗೆ ತ್ರಿಭೋಗಾಭ್ಯಂತರ ಸಿದ್ಧಿಯಿಂದ ಬಿಟ್ಟಂತೆ ಹೇಳುತ್ತದೆ.

೯. ಕ್ರಿ.ಶ. ೧೦೯೫ರ ಯಡ್ರಾಮಿ ಶಾಸನದಿಂದ ಚಾಳುಕ್ಯ ವಿಕ್ರಮಾದಿತ್ಯನ ಮಹಾಮಂಡಲೇಶ್ವರನಾಗಿದ್ದ ಚಾವುಂಡರಾಯನ ಮಗ ದಾಸಿರಾಜನು ಜನ್ನದ ಬಾವಿಯ ಸ್ವಯಂಭೂದೇವರ ಸನ್ನಿದಿಯಲ್ಲಿ ಬ್ರಾಹ್ಮಣರಿಗೆ ಮತ್ತು ಸತ್ರಕ್ಕೆ ಬಿಟ್ಟ ದತ್ತಿಯ ವಿಷಯವು ತಿಳಿದುಬರುತ್ತದೆ.

೧೦.ಕ್ರಿ.ಶ. ೧೧೦೦ರ ಹಿರೇಮುದನೂರಿನ ಶಾಸನವು ಚಾಲುಕ್ಯ ಅರಸು ವಿಕ್ರಮನ ಕಾಲದಲ್ಲಿ ಅವನ ಮಹಾಮಂಡಳೇಶ್ವರನಾಗಿದ್ದ ಲಕ್ಷ್ಮೀರಸ ಕುಮಾರ ಕಂಪದೇವರಸನು ಬ್ರಹ್ಮಪುರಿಯ ಅಗ್ಗಿಷ್ಟಿಗೆಯ ನಿಮಿತ್ತ ಭೂಮಿಯನ್ನು ದತ್ತಿಬಿಟ್ಟ ವಿಷಯವು ತಿಳಿಸುತ್ತದೆ.

೧೧. ಕ್ರಿ.ಶ. ೧೧೦೩ರ ಕಾಳಿಗೆಯ ಶಾಸನವು ಚಾಳುಕ್ಯ ವಿಕ್ರಮನ ಮಹಾಮಂಡಳೇಶ್ವರ ಕರ್ಣಭೂಪನು ಕಾಳೇಶ್ವರ ದೇವರಿಗೆ ಬಿಟ್ಟ ದತ್ತಿಯ ವಿಷಯವು ಉಲ್ಲೇಖಿಸುತ್ತದೆ.

೧೨. ಕ್ರಿ.ಶ. ೧೧೦೪ರ ಕುಕ್ಕನೂರಿನ ಶಾಸನವು ಗಂಗಾಧರಯ್ಯ ನಾಯಕರ ಮಗ ಈಶ್ವರಯ್ಯ ಮತ್ತೆ ಅವರ ತಮ್ಮ ಶ್ರೀಪತಿ ನಾಯಕರು ಕುಕ್ಕನೂರಿನ ಸಾಸಿರ್ವರಿಂದ ಭೂಮಿಯನ್ನು ಪಡೆದು, ಅದನ್ನು ಸರ್ವ ನಮಸ್ಯವಾಗಿ ಮೂಲಸ್ಥಾನದ ದೇವರಿಗೆ ಹಾಗೂ ಸರಸ್ವತಿದೇವಿಗೆ ದತ್ತಿಬಿಟ್ಟ ವಿಚಾರವು ಹೇಳುತ್ತದೆ.

೧೩. ಕ್ರಿ.ಶ. ೧೧೦೫ರ ಕಮ್ಮರವಾಡಿ ಶಾಸನವು ಅಹಿಹಯ ಮನೆತನದ ಮಹಾಮಂಡಲೇಶ್ವರ ಬಿಬ್ಬರಸನು ಅಲ್ಲಿನ ಸೋಮನಾಥ ದೇವರಿಗೆ ದತ್ತಿ ಬಿಟ್ಟ ವಿಷಯವು ನಿರೂಪಿಸುತ್ತದೆ.

೧೪. ಕ್ರಿ.ಶ. ೧೧೦೮ರ ಇಟ್ಟಿಗೆಯ ಶಾಸನವು ಚಮೂಪನಾದ ಮಹಾದೇವನು ಕಟ್ಟಿಸಿದ ಮಹಾದೇವೇಶ್ವರನ ಅಂಗ-ರಂಗಭೋಗ ಹಾಗೂ ವೇದ-ವೇದಾಂಗೋಪಾಂಗ ಶಿಕ್ಷಣ, ಸತ್ರಾದಿಗಳಿಗೆ ಇಟ್ಟಿಗೆಯ ೪೦೦ ಬ್ರಾಹ್ಮಣರ ಸಮ್ಮುಖದಲ್ಲಿ ವಿಕ್ರಮಾದಿತ್ಯ ಚಕ್ರವರ್ತಿಯು ದತ್ತಿ ಬಿಟ್ಟ ವಿಚಾರವು ದಾಖಲಿಸಿದೆ.

೧೫. ಕ್ರಿ.ಶ. ೧೧೨೦ರ ಮಣ್ಣೂರ ಶಾಸನವು ಶಿವಾಲಯದ ಧರ್ಮವನ್ನು ಕಾಪಾಡಲು ಗಂಗರಾಸಿಜೀಯರು ಇರಿದುಕೊಂಡು ತಮ್ಮ ಪ್ರಾಣತ್ಯಾಗ ಮಾಡಿದ ಬಗೆಗೆ ಹೇಳುತ್ತದೆ. ಆ ದೇವಾಲಯಕ್ಕೆ ಆತ್ಮಬಲಿದಾನದ ಕಾರಣದಿಂದ ಹಲವಾರು ದತ್ತಿಗಳನ್ನು ಬಿಡಲಾಯ್ತು.

೧೬. ಕ್ರಿ.ಶ. ೧೧೨೬ರ ನಾಲವಾರದ ಶಾಸನವು ವಿಕ್ರಮಾದಿತ್ಯನ ಮಂಡಲೇಶ್ವರನಾಗಿದ್ದ ಕಾಚರಸನ ಸಮ್ಮುಖದಲ್ಲಿ ಗ್ರಾಮದ ಮೂಲಸ್ಥಾನದೇವರ ಕಳಸ ನಿರ್ಮಾಣ ಹಾಗೂ ಅಲ್ಲಿನ ಅನ್ನದಾನಕ್ಕಾಗಿ ಭೂಮಿಯನ್ನು ದತ್ತಿ ಬಿಟ್ಟ ವಿಚಾರವು ತಿಳಿಸುತ್ತದೆ.

೧೭. ಕ್ರಿ.ಶ. ೧೧೩೪ರ ನಿಂಬರಗಿ ಶಾಸನದಲ್ಲಿ ಚಾಲುಕ್ಯ ಭೂಲೋಕಮಲ್ಲನ ಪ್ರಧಾನರು ಮಡಿಹಾಳದ ಕೋಟಿ ಶಂಕರ ದೇವಸ್ಥಾನಕ್ಕೆ ದತ್ತಿ ಹಾಕಿಸಿಕೊಟ್ಟ ವಿಚಾರವು ತಿಳಿಸಲಾಗಿದೆ.

೧೮. ಕ್ರಿ.ಶ. ೧೧೬೭ರ ಚಿನಮಳ್ಳಿಯ ಶಾಸನವು ಆತನೂರಿನ ಕುಲಗೌಡ ರಾಮರಸ ಅಂಕಲಗೆಯ ಶೋಭರಸ, ಸಿಂಧನೂರಿನ ಕಲರಸ-ಇವರೆಲ್ಲ ಮಹಾಮಂಡಲೇಶ್ವರ ಮನ್ನಯ ಅಹವಮಲ್ಲರ ಸಮಕ್ಷಮದಲ್ಲಿ ಚಿನಮಳ್ಳಿ ಗ್ರಾಮದ ಸ್ವಯಂಭೂ ಮಲ್ಲಿಕಾರ್ಜುನ ದೇವರ ಅಂಗ-ರಂಗ ಭೋಗಕ್ಕಾಗಿ, ಅಲ್ಲಿಯ ಸ್ಥಾನಾಧಿಪತಿಗಳಾಗಿದ್ದ ವೀರ ಕೇದಾರ ದೇವರ ಪುತ್ರ ಕೇತಿದೇವಯ್ಯರಿಗೆ ಬೀರಜವಾಡವನ್ನು ದತ್ತಿಯಾಗಿ ನೀಡಿದ ವಿಷಯವು ದಾಖಲಿಸಿದೆ.

೧೯. ಕ್ರಿ.ಶ. ೧೧೭೮ರ ಇಟ್ಟಿಗೆಯ ಶಾಸನವು ಕಳಚುರಿ ಸಂಕಮನ ಅಧೀನ ವಡ್ಡವ್ಯವಹಾರಿಯಾಗಿದ್ದ ನಾಗದೇವಯ್ಯನು ಇಟ್ಟಿಗೆಯ ಮಹಾಗ್ರಹಾರದ ನಾಲ್ಕುನೂರ್ವರಿಂದ ದ್ರವ್ಯದಾನವನ್ನು ಧಾರಾಪೂರ್ವಕವಾಗಿ ಪಡೆದು ಸ್ವಯಂಭು ತ್ರಿಕೋಟೇಶ್ವರ ದಏವರ ಸ್ಥಾನಿಕಾಚಾರ್ಯ ಸೋಮೇಶ್ವರ ಪಂಡಿತರ ಕಾಲನ್ನು ತೊಳೆದು ಮಹಾದೇವೇಶ್ವರ ದೇವರಿಗೆ ದಾನ ನೀಡಿದ ಸಂಗತಿಯನ್ನು ತಿಳಿಸುತ್ತದೆ.

೨೦. ಕ್ರಿ.ಶ. ೧೧೮೧ರ ಹೊಡಲ ಶಾಸನವು ಕಳಚುರಿಯ ಸಂಕಮ ಚಾಲುಕ್ಯ ತ್ರಿಭುವನಮಲ್ಲ ಸೋಮೇಶ್ವರ ಹಾಗೂ ಯಾದವ ಸಿಂಗಣರ ಆಳ್ವಿಕೆಗೆ ಒಳಪಟ್ಟಿದ್ದ ಸಾಮಾಂತಾಧಿಪತಿಗಳು ಹೊಡಲಗ್ರಾಮದ ಪ್ರಸನ್ನ ರಾಮನಾಥ ದೇವರಿಗೆ ಆಯಾ ಕಾಲದಲ್ಲಿ ನೀಡಿದ ೬ ದತ್ತಿಗಳ ವಿಷಯವನ್ನು ತಿಳಿಸಿದೆ.

೨೧. ಕ್ರಿ.ಶ. ೧೬೦೦ರ ಹಲಕರಟಿ ಶಾಸನವು ವೀರಭದ್ರ ಸಂಪ್ರದಾಯದ ಗುರು–ಶಿಷ್ಯ–ಪ್ರಶಿಷ್ಯ ವರ್ಗಕ್ಕೆ ದತ್ತಿ ನೀಡಿದ ವಿಚಾರವು ತಿಳಿಸುತ್ತದೆ. ಇದೊಂದು ವೀರಶೈವಪರವಾದ ಶಾಸನವಾಗಿದೆ.

೨೨. ಕ್ರಿ.ಶ. ೧೧೯೦ರ ಯಾದವ ದೊರೆ ಭಿಲ್ಲಮನ ಕಾಲದ ಈ ಶಾಸನದಲ್ಲಿ ತರ್ದವಾಡಿ ನಾಡಿನ ಮಹಾಮಂಡಲೇಶ್ವರವೀರ ಬಂದುಗಿ ದೇವರಸ, ಮಹಾಪ್ರಧಾನಿ ಮಾಯಿದೇವ ದಣ್ಣಾಯಕ ಮೊದಲಾದವರು ಅಭಿನವ ಶ್ರೀಶೈಲವೆಂದು ಖ್ಯಾತಿ ಪಡೆದ ಸೊನ್ನಲಗೆಯ ಕಪಿಲಸಿದ್ಧ ಮಲ್ಲಿಕಾರ್ಜುನನ ದೇವರ ಸೇವೆಗಾಗಿ ಚೊರಗಿ ಎಂಬ ಗ್ರಾಮವನ್ನು ದಾನವಾಗಿ ನೀಡಿದ ವಿಷಯ ಒಂದಿದ್ದು, ಇದೊಂದು ವೀರಶೈವ ಪರವಾದ ಶಾಸನವಾಗಿದೆ.

೨೩. ಯಾದವ ಕನ್ನರದೇವರ ಕಾಲದ ಶಾಸನವಾಗಿರುವ ಇದರಲ್ಲಿ ಸಿದ್ಧರಾಮದೇವರಿಗೆ ದತ್ತಿಬಿಟ್ಟ ವಿಚಾರವೇ ಹೇಳಲಾಗಿದೆ. ಕಪಿಲಸಿದ್ಧ ಮಲ್ಲಿನಾಥನ ಸ್ತುತಿಯಿಂದಲೇ ಶಾಸನವು ಆರಂಭವಾಗಿದೆ. ಇದೊಂದು ವೀರಶೈವ ದತ್ತಿ ಹೇಳುವ ಶಾಸನವಾಗಿದೆ.

೨೪. ಕ್ರಿ.ಶ. ೧೧೬೨ರ ಶಾಸನದಲ್ಲಿ ಆರಂಭದ ಸ್ತುತಿಯಾಗಿ “ನೆಲವಿಗೆಯ ಸಾತಯ್ಯಗಳ ದಿವ್ಯಪಾದಕ್ಕೆ ಶರಣು” ಎಂಬ ವಾಕ್ಯವು ಬಂದಿರುವುದರಿಂದ ಇದೊಂದು ವೀರಶೈವ

ದಾನ ಶಾಸನವಾಗಿದೆ. ಇದರಲ್ಲಿ ಕಳಚುರಿ ತ್ರಿಭುವನಮಲ್ಲನ ಪ್ರಧಾನಿಯಾದ ಲಕ್ಷ್ಮೀದೇವ ದಂಡನಾಯಕನು ೩೬ ಬಾಡವನ್ನು ಆಳುತ್ತಿರುವಾಗ ಬುಯ್ಯಾರದ ಕೂಡಲಕ್ಕೆ ನದಿ ಸ್ನಾನಕ್ಕಾಗಿ ಬಂದಾಗ ಅಲ್ಲಿನ ಅಭಿನವ ಮಲ್ಲಿಕಾರ್ಜುನ ದೇವರನ್ನು ಕಂಡು, ತನ್ನ ಹೆಗ್ಗಡೆ ನಾಗಣ್ಣ ನಾಯಕ, ನಾಗಿದೇವ, ಚಿಕ್ಕ ಚಂಡರಸ ಸಾಂಬರಸ, ಮಾಚಿಗೌಡ್ರ ಕೋಟಿಗೌಡ ಮೊದಲಾದವರ ಸಮ್ಮುಖದಲ್ಲಿ ನೆಲುವಿಗೆಯ ಶಿವಯೋಗಿ ಸಾತಯ್ಯನನ್ನು ಸ್ಮರಿಸಿ, ಅವನ ಶಿಷ್ಯನಾದ ಬಸಯ್ಯನಿಗೆ ಭೂದಾನ ನೀಡಿದ ವಿಷಯವು ಒಂದಿದೆ.

೨೫. ಯಾದವ ಸಿಂಘಣನ ಕಾಲದಲ್ಲಿ ರಚನೆಗೊಂಡಿರುವ ಗುಂಡಕರ್ಜಗಿಯ ಶಾಸನವು ಶಿವಯೋಗಿ ಸಿದ್ಧರಾಮನ ವಚನದಿಂದ ಆರಂಭಗೊಂಡು ವೀರಶೈವ ಪರವಾದ ದಾನದ ವಿಷಯವನ್ನು ಹೇಳುತ್ತದೆ.

೨೬. ಕ್ರಿ.ಶ. ೧೦೭೬ ರಿಂದ ೧೧೨೬ ರವರೆಗೆ ಪ್ರಧಾನಿಯಾಗಿದ್ದು ಕಲ್ಯಾಣಿ ಚಾಲುಕ್ಯ ವಿಕ್ರಮಾದಿತ್ಯನ ರಾಜಾಭಿವೃದ್ಧಿಗೆ ಕಾರಣನಾಗಿದ್ದ ಕೊಂಡಗುಳಿ ಕೇಶಿರಾಜನಿಗೆ ಸಂಬಂಧಿಸಿದ ಶಾಸನಗಳೆಲ್ಲವೂ ವೀರಶೈವ ಪರವಾದ ಶಾಸನಗಳೆಂದೇ ಹೇಳಲಾಗುತ್ತದೆ.

**ವೈಷ್ಣವದಾನ ಶಾಸನಗಳು:**

೧. ಚಾಲುಕ್ಯ ವಿಕ್ರಮಾದಿತ್ಯನ ಕಾಲದ ಈ ಶಾಸನವು ಬಿಜಾಪುರದ ನರಸಿಂಹ ದೇವರಿಗೆ ಮಹಾಪ್ರಭು ಹುಬಿನ ಹಿರಿಯ ದೇವರಸನು ಜಕ್ಕಿಮಯ್ಯನ ಹಳ್ಳಿಯಲ್ಲಿ ಭೂಮಿಯನ್ನು ದತ್ತಿ ಬಿಟ್ಟಂತೆ ತಿಳಿಸುತ್ತದೆ.

೨. ಕ್ರಿ.ಶ. ೧೦೩೩ರ ಶಾಸನವು ಜಗದೇಕಮಲ್ಲನ ಸೇನಾಧಿಪತಿ ಆನಂದಪಾಲ ದಂಡನಾಯಕನು ತರ್ದವಾಡಿಯನ್ನು ಆಳುತ್ತಿದ್ದಾಗ ಚಕ್ರವರ್ತಿಯ ನಿರೂಪದಂತೆ, ವಿಜಾಪುರದ ಜಲಮಂಟಪದ ನರಸಿಂಹದೇವರ ರಂಗಮಂಟಪದ ಜೀರ್ಣೋದ್ಧಾರ ಮಾಡಿಸಿದ ವಿಚಾರವು ತಿಳಿಸುತ್ತದೆ.

೩. ಕ್ರಿ.ಶ. ೧೦೯೫ರ ಚಾಲುಕ್ಯರ ಕಾಲದ ಶಾಸನದಲ್ಲಿ ಕೆರೆ ಗೋವಿಂದಯ್ಯ ಎಂಬುವವನು ಕೇಶವ ದೇವಾಲಯವನ್ನು ಕಟ್ಟಿಸಿ, ದೇವರ ಪೂಜೆಯಾದಿಗಳಿಗೆ ದಾನ ನೀಡಿದ ಸಂಗತಿಯು ಉಕ್ತವಾಗಿದೆ.

೪. ಕ್ರಿ.ಶ. ೧೧೧೫ರ ಶಾಸನವೊಂದು ತ್ರಿಭುವನ ಮಲ್ಲನು ಜಯಂತಿಪುರದ ನೆಲವೀಡಿನಲ್ಲಿ ಇದ್ದಾಗ, ಅವನ ಆಡಳಿತದ ಮೇಂಡೆಯ ಬರ್ಮ್ಮಣ ಎಂಬುವನು ನಿಡುವಣಿಯಲ್ಲಿ ವಿಷ್ಣು ದೇವಾಲವನ್ನು ಕಟ್ಟಿಸಿದನು. ಆ ದೇವಾಲಯಕ್ಕೆ ತರ್ದವಾಡಿ ನಾಡಿನ ಪೆರ್ಗ್ಗಡೆ ಲಕ್ಷ್ಮರಸ, ಮಹಾಜನರು ಕೂಡಿಕೊಂಡು ೨೦ ಮತ್ತರ ಭೂಮಿಯನ್ನು ದಾನವಾಗಿ ನೀಡಿದಂತೆ ತಿಳಿಸುತ್ತದೆ.

೫. ಕ್ರಿ.ಶ. ೧೧೧೭ರ ಶಾಸನದಲ್ಲಿ ಚಾಲುಕ್ಯ ತ್ರಿಭುವನ ಮಲ್ಲನ ಕಾಲದಲ್ಲಿ ದಂಡಾಧೀಶನಾಗಿದ್ದ ಕಾಳಿಮರಸನು ಕಲಕೇರಿಯ ಅಗ್ರಹಾರದಲ್ಲಿ ಅಮ್ಮತಪಟ್ಟವರ್ಧನ ವಾಸುದೇವ ಘಳಿಸಾನ ಮತ್ತು ಅವನ ಪತ್ನಿ ಚಾಮಿಯಕ್ಕ ಸೇರಿ ಕಟ್ಟಿಸಿದ ಕೇಶವ ದೇವಾಲಯಕ್ಕೆ ಭೂಮಿಯನ್ನು ದತ್ತಿ ಬಿಟ್ಟಂತೆ ತಿಳಿಸಲಾಗಿದೆ.

೬. ಕ್ರಿ.ಶ. ೧೧೧೮ರ ರುದ್ರವಾಡಿಯ ಶಾಸನದಲ್ಲಿ ರುದ್ರವಾಡಿಯ ಕೇಶವದೇವರ ಅಲ್ಲಿಯ ಚತುರ್ವಿಂಸತಿ ದೇವಾಲಯಕ್ಕೆ ನೀಡಿದ ದತ್ತಿಯ ವಿಚಾರವನ್ನು ಒಳಗೊಂಡಿದೆ.

೭. ಕ್ರಿ.ಶ. ೧೧೪೨ರ ಜಗದೇಕಮಲ್ಲನ ಕಾಲದ ಶಾಸನದಲ್ಲಿ ವಡ್ಡವ್ಯವಹಾರಿ ಸೋಮಶೆಟ್ಟಿಯೆಂಬುವವನು ವಿಷ್ಣು ಪ್ರತಿಮೆಯನ್ನು ಮಾಡಿಸಿ, ತನ್ನ ತಂದೆ ನಿರ್ಮಿಸಿದ ಜಗನ್ನಾಥ ದೇವಾಲಯಕ್ಕೆ ಬಂಗಾರದ ಲೇಪನವನ್ನು ಮಾಡಿಸಿದ. ಹಾಗೆಯೇ ಕೇಶವ ದೇವರ ನಿತ್ಯ ಪೂಜಾದಿ ಕಾರ್ಯಗಳಿಗಾಗಿ ಭೂಮಿಯನ್ನು ದಾನ ನೀಡಿದಂತೆ ದಾಖಲುಗೊಳಿಸಲಾಗಿದೆ.

೮. ಕ್ರಿ.ಶ. ೧೧೪೨ರ ಗೊಬ್ಬೂರ ಶಾಸನವು ಪರಮಭಾಗವತ ವೈಷ್ಣವ ಬೊಪ್ಪಣ್ಣಗಳು, ಜಿನ್ನೆಯಜರ್ವೇದಿಭಟ್ಟ ಸೋಮಯಾಜಿಗಳಿಂದ ಕ್ರಯಗೊಂಡು ಪ್ರಸನ್ನ ಕೇಶವದೇವರಿಗೆ ಹೊಲವು ಬೆಳೆಸಹಿತ ಸಮಸ್ತ ಹಳ್ಳಿಯನ್ನು ಅಷ್ಟಭೋಗತೇಜ ಸಾಮ್ಯವಾಗಿ ಧಾರಾಪೂರ್ವಕವಾಗಿ ದತ್ತಿಯಾಗಿ ಬಿಟ್ಟಂತೆ ಹೇಳುತ್ತದೆ.

೯. ಕ್ರಿ.ಶ. ೧೧೫೧ರ ಕಲ್ಯಾಣ ಚಾಲುಕ್ಯ ತ್ರೈಲೋಕ್ಯದೇವನ ಆಡಳಿತದಲ್ಲಿ ಹುಟ್ಟಿದ ಶಾಸನದಲ್ಲಿ ಬಿಜ್ಜಳನ ದಂಡನಾಯಕನಾಗಿದ್ದ ಮೈಲಾರ ದಂಡಾಧೀಶನ ಕೈಕೆಳಗಿನವರಾಗಿದ್ದ ಪರ್ಗ್ಗಡೆ ಮಲ್ಲಿದೇವ, ಕರಣರೇಚಣ, ಒಮ್ಮರಸ–ಗೋವಿಂದ ಎಂಬ ಕಲಿಗಳು ಇವರೆಲ್ಲರೂ ಸೇರಿ ರಾಜಧಾನಿ ವಿಜಯಪುರದ ಒಳಮಂಟಪದ ನರಸಿಂಹ ದೇವರಿಗೆ ೨೦೦ ಮತ್ತರಿನ ಉತ್ಪತ್ತಿಯನ್ನು ದಾನಬಿಟ್ಟಂತೆ ಅಲ್ಲಿ ಉಲ್ಲೇಖಿಸಲಾಗಿದೆ.

೧೦. ಕ್ರಿ.ಶ. ೧೧೫೪ರ ಶಾಸನವು ಕಲ್ಯಾಣಿ ಚಾಲುಕ್ಯ ತ್ರೈಲೋಕ್ಯಮಲ್ಲನ ಆಡಳಿತದಲ್ಲಿ ಸಾಮಂತನಾಗಿ ಆಳುತ್ತಿದ್ದ ಬಿಜ್ಜಳನ ಮಂತ್ರಿ ಚಲ್ಲಣ ದಂಡನಾಯಕನು ತರ್ದವಾಡಿ ನಾಡನ್ನು ತ್ರಿಭೋಗಾಭ್ಯಂತರವಾಗಿ ಆಳುತ್ತಿದ್ದನು. ಅವನ ಆಡಳಿತದಲ್ಲಿದ್ದ ಕೇಳಿಯಣ್ಣ ನಾಯಕ, ಶ್ರೀಧರನಾಯಕ, ಕಪ್ಪರದೇವ, ಗಣಪತಿ ನಾಯಕ, ಸುಂಕವೆರ್ಗ್ಗಡೆ ಮಲ್ಲದೇವ ಮೊದಲಾದವರು ರಾಜಧಾನಿ ವಿಜಯಪುರದ ನರಸಿಂಹದೇವರ ಪೂಜಾರ್ಥವಾಗಿ ಕೆಲವು ತೆರಿಗೆಗಳನ್ನು ದತ್ತಿ ಬಿಟ್ಟರೆಂದು ಹೇಳುತ್ತದೆ.

೧೧. ಕ್ರಿ.ಶ. ೧೧೬೫ರ ಶಾಸನವು ಬಿಜ್ಜಳನ ಕಾಲದಲ್ಲಿ ಮಣಿಗವಳ್ಳಿ ಮಾದಿರಾಜ, ಮಹಾಜನರು, ಮಹಾಪ್ರಧಾನ ಅಮ್ಮಣ್ಣಯ್ಯ ದಂಡನಾಯಕ, ಕರಣಗಳು.... ಮುಂತಾದವರೆಲ್ಲರೂ ಸೇರಿ ದಂಗೆಯ ವಾಸುದೇವ ನಾಯಕನು ಮಾಡಿಸಿದ ಚನ್ನಕೇಶವ ದೇವರ ಪೂಜೆಯಾದಿಗಳಿಗೆ ೧೨ ಮತ್ತರು ಭೂಮಿಯನ್ನು ದಾನ ನೀಡಿದ ವಿಷಯವು ಇಲ್ಲಿ ತಿಳಿಸುತ್ತದೆ.

೧೨. ಕ್ರಿ.ಶ. ೧೧೬೫ರ ಶಾಸನದಲ್ಲಿ ಪ್ರಸನ್ನಕೇಶವ ದೇವರ ಪೂಜೆ ಹೂವುಗಳಿಗಾಗಿ, ಇತರ ಉಪಚಾರಗಳಿಗಾಗಿ, ಮಹಾಜನರು, ನಾರಾಯಣ ಶಡಂಗಿಯ ಮಗ ಆದಿತ್ಯದೇವನು ಅವರೆಲ್ಲ ಕೂಡಿಕೊಂಡು ದಾನವನ್ನು ನೀಡಿದ ವಿಷಯವು ಬಂದಿರುವುದು.

೧೩. ಕ್ರಿ.ಶ. ೧೧೮೯ರ ಶಾಸನದಲ್ಲಿ ಬಿಲ್ಲಮದೇವನ ಕಾಲದಲ್ಲಿ ಅವನ ಮಹಾಪ್ರಧಾನಿ, ಬಾಹತ್ತರ ನಿಯೋಗಾಧಿಪತಿ ಪೇಯಿಯ ಸಾಹಣಿ ಮತ್ತು ಸೇನಾಪತಿ ಸಾಹಣಿಯ ವಡ್ಡವ್ಯವಹಾರಿ ಚೌಡಶೆಟ್ಟಿಯು ಪ್ರತಿಷ್ಠೆ ಮಾಡಿಸಿದ, ಲಕ್ಷ್ಮೀನರಸಿಂಹದೇವರ

ಪಾದಾರಾಧಕನಾದ ಶಂಕರ ಸ್ವಾಮಿಗಳ ಉಪದೇಶ ಕೇಳಿ ಬಿಲ್ಲಮನು ೨೦ ಮತ್ತರ ಭೂಮಿಯನ್ನು ದಾನ ನೀಡಿದಂತೆ ಹೇಳಲಾಗಿದೆ.

೧೪. ಕ್ರಿ.ಶ. ೧೧೯೨ರ ಶಾಸನದಲ್ಲಿ ಗೋವಿಂದೇಶ್ವರ ದೇವರ ಆಚಾರ್ಯರಾದ ಹಿರಿಯ ಸೋಮಾಶಿಜೀಯ, ಚಿಕ್ಕಸೋವರಾಶಿಜೀಯ, ಹೆಗ್ಗಡೆ ಮಲ್ಲಯ್ಯ..... ಮೊದಲಾದವರು ಸೇರಿ ನರಸಿಂಹದೇವರಿಗೆ ೧೨ ಕಟ್ಟು ಹೂವು ಕೊಡುತ್ತಿದ್ದ ಮಾಲೆಗಾರರಿಗೆ ತೋಟವೊಂದನ್ನು ದತ್ತಿಬಿಟ್ಟ ಉಲ್ಲೇಖವು ಬಂದಿರುವುದು.

೧೫. ಕ್ರಿ.ಶ. ೧೨೨೪ರ ಶಾಸನವು ಸಿಂಘಣದೇವನು ರಾಜ್ಯಭಾರ ಮಾಡುತ್ತಿದ್ದಾಗ ರಕ್ಕರಸನು ತರ್ದವಾಡಿ, ಹೆಡ, ಕಣಬಡೆಗಳನ್ನು ಆಳುತ್ತಿದ್ದ. ಈತನ ಪಸಾಯಿತ ಸುಂಕಾಧಿಕಾರಿ ಮಿಂಚುವದೇವರಸನು ವಿಜಯಪುರದ ನರಸಿಂಹ ದೇವರಿಗೆ ಭೂಮಿಯನ್ನು ದಾನವಾಗಿ ನೀಡಿದಂತೆ ಹೇಳುತ್ತದೆ.

೧೬. ಕ್ರಿ.ಶ. ೧೨೬೫ಕ್ಕೆ ಸಂಬಂಧಿಸಿದ ಒಂದು ಶಾಸನವು ಯಾದವ ಮಹಾದೇವನ ಆಳ್ವಿಕೆಯ ಸಮಯದಲ್ಲಿ ೧೦೦೦ ಮಹಾಜನರು ಕೂಡಿ ಇಂಗಳೇಶ್ವರ ಗೋಪಿನಾಥ ದೇವರಿಗೆ ೨೨ ಮತ್ತರು ಭೂಮಿಯನ್ನು ದಾನ ನೀಡಿದ ವಿಷಯವು ತಿಳಿಸುತ್ತದೆ.

**ಧಾರ್ಮಿಕ ಸಮನ್ವಯದ ದಾನ ಶಾಸನಗಳು:**

೧. ಕ್ರಿ.ಶ. ೧೦೮೩ರ ಶಾಸನವು ತ್ರಿಭುವನಮಲ್ಲನ ಕಾಲದ್ದು. ಅದು ತಾಮ್ರಶಾಸನ. ಕನ್ನಸಾಮಂತನು ಶಿವ ವಿಷ್ಣುದೇವರಿಗೆ ದತ್ತಿಬಿಟ್ಟ ವಿಚಾರವು ಹೇಳಲಾಗಿದೆ. ಶಾಸನವು ಮೊದಲಿಗೆ ವಿಷ್ಣುವಿನ ಸ್ತುತಿಯಿಂದ ಆರಂಭವಾಗಿದೆ.

೨. ಕ್ರಿ.ಶ. ೧೧೯೩ರ ಶಾಸನವು ಎಂಗಲದೇವಿಯರು ಬ್ರಹ್ಮ-ವಿಷ್ಣು ಮಹೇಶ್ವರರ ತ್ರೈಪುರುಷದೇವಾಲಯವನ್ನು ಕಟ್ಟಿಸಿ, ಅದಕ್ಕೆ ಭೂಮಿಯನ್ನು ದಾನವಾಗಿ ನೀಡಿದ ವಿಚಾರವು ತಿಳಿಸುತ್ತದೆ.

೩. ಕ್ರಿ.ಶ. ೧೧೧೦೮ರ ಮುಡಗೊಂಡ ಶಾಸನವು ಶ್ರೀಮದ್ದದಂಡನಾಯಕ ನರವೈದ್ಯ ನಾರಾಯಣಭಟ್ಟನು ತನ್ನ ತಂದೆಯ ಸ್ಮರಣೆಗಾಗಿ ಶೈವ-ವೈಷ್ಣವ ಧರ್ಮದ

ಸಮನ್ವಯದಂತಿರುವ ನೀಲಕಂಠೇಶ್ವರ ದೇವರು, ಕೇಶವ ದೇವರುಗಳನ್ನು ಸ್ಥಾಪಿಸಿ ಅವುಗಳಿಗೆ ದತ್ತಿ ಬಿಟ್ಟ ವಿಚಾರವು ತಿಳಿಸಿದೆ.

೪. ಕ್ರಿ.ಶ. ೧೧೨೧ರ ಶಾಸನದಲ್ಲಿ ಕಾಶ್ಯಪ ಗೋತ್ರಕ್ಕೆ ಸೇರಿದ ಗೋವಿಂದ ದಂಡನಾಥನು ಅಗ್ರಹಾರ ಪಾಠಗೆಯ ತ್ರೈಪುರುಷ ದೇವಾಲಯದ ಬ್ರಹ್ಮ, ವಿಷ್ಣು, ಶಿವರನ್ನು ಪೂಜಿಸಲು ಹಾಗೂ ದರ್ಶನಕ್ಕೆ ಬರುವ ಭಕ್ತರುಗಳಿಗೆ ಪ್ರಸಾದ ನೀಡಲು ಅನುಕೂಲವಾಗುವಂತೆ ೨೭೦ ನಿಷ್ಕಗಳನ್ನು ಕೊಡುಗೆಯಾಗಿ ನೀಡಿದಂತೆ ಹೇಳಲಾಗಿದೆ.

೫. ಕ್ರಿ.ಶ. ೧೧೨೪ರ ಮರತೂರ ಶಾಸನವು ಹೆಗ್ಗಡೆ ಬಾಚಿರಾಜನಿಂದ ಮರತೂರು ಗ್ರಾಮದಲ್ಲಿ ಶೈವ ದೇವರಾದ ಮಹಾದೇವ ಹಾಗೂ ವೈಷ್ಣವ ದೇವರಾದ ಕೇಶವರನ್ನು ಪ್ರತಿಷ್ಠಾಪಿಸಿ ಆ ದೇವರುಗಳ ಪೂಜಾದಿ ಕಾರ್ಯಗಳಿಗಾಗಿ ಭೂಮಿಯನ್ನು ದತ್ತಿ ಬಿಟ್ಟಂತೆ ಹೇಳುತ್ತದೆ.

೬. ಕ್ರಿ.ಶ. ೧೧೨೮ರ ಗೊಬ್ಬೂರ ಶಾಸನವು ಆದಿತ್ಯ ಕೇಶವ ಸೋಮಯಾಜಿಗಳು ಕೇಶವ, ಹರಿಹರ, ಗಣಪತಿ, ಸೂರ್ಯ, ಸರಸ್ವತಿ ಹಾಗೂ ಮಹೇಶ್ವರರಿಗೆ ಭೂಮಿಯನ್ನು ದತ್ತಿ ಬಿಟ್ಟಂತೆ ತಿಳಿಸುತ್ತದೆ.

೭. ಕ್ರಿ.ಶ. ೧೧೪೩ರ ಬೋದನದ ಶಾಸನವು ನಾರಾಯಣ ದಂಡನಾಥನು ಮನೆವೆರ್ಗ್ಗಡೆ ಬೊಮ್ಮಣ್ಣಯ್ಯ, ಮನೆಯ ಕಾಚರಸ, ಸರಸ್ವತಿಪುರದ ತಳಾರ ಸಾಂತಯ್ಯ ನಾಯಕ ಮೊದಲಾದವರು ಕೂಡಿ ಶೈವ–ವೈಷ್ಣವ ಧರ್ಮದ ಸಮನ್ವಯದಂತೆ ಇರುವ ಸ್ವಯಂಭು ಮಲ್ಲಿಕಾರ್ಜುನ ದೇವರು ಹಾಗೂ ಮಾಧವ ದೇವರು ಇವರುಗಳ ಅಂಗ–ರಂಗ ಭೋಗಗಳಿಗೆ ದತ್ತಿಬಿಟ್ಟರೆಂದು ಹೇಳುತ್ತದೆ.

೮. ಕ್ರಿ.ಶ. ೧೧೪೮ರ ಚಾಂಬಾಳ ಶಾಸನವು ಸಿಂಧನೂರ ಪ್ರಭುತ್ವದ ಕೇಶವ ದಂಡನಾಯಕರು ತಮ್ಮ ಹೆಂಡತಿ ಜೋಗಲ ದೇವಿಯರನ್ನು ಕೂಡಿಕೊಂಡು ಬೆಳ್ಳಂಬಟ್ಟೆಯ ಕಮ್ಮತದ ಐದುನೂರು ಮತ್ತರು ಭೂಮಿಯನ್ನು ಕೇಶವದೇವರು, ನರಸಿಂಹದೇವರು, ಜಲಶಯನದೇವರು, ಶಿವರೂಪಿಸಿದ್ದೇಶ್ವರ ದೇವರು ಇವರುಗಳಿಗೆ ಧಾರಾಪೂರ್ವಕವಾಗಿ ದಾನ ನೀಡಿದಂತೆ ಹೇಳಿದಂತೆ.

೯. ಕ್ರಿ.ಶ. ೧೩ನೇ ಶತಮಾನಕ್ಕೆ ಸೇರಿದ ಈ ಶಾಸನದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಇರುವ ತ್ರಿಕೂಟೇಶ್ವರ ದೇವಾಲಯಕ್ಕೆ ಮುಟ್ಟರಸನೆಂಬುವನು ತಮ್ಮ ಕಮ್ಮತದಲ್ಲಿ ೨೦ ಮತ್ತರ ಭೂಮಿಯನ್ನು ದಾನಬಿಟ್ಟು ಅದರಿಂದ ತ್ರಿಕೂಟೇಶ್ವರ ದೇವಾಲಯದ ಸಭಾಮಂಟಪ ಜೀರ್ಣೋದ್ಧಾರ ಮಾಡಬೇಕೆಂದು ಉದ್ದೇಶ ಇಟ್ಟುಕೊಂಡಂತೆ ತಿಳಿಸಲಾಗಿದೆ.

**ಗೋಸಾಸ ದಾನ ಶಾಸನಗಳು:**

ರನ್ನನ ಅಜಿತ ಪುರಾಣದಲ್ಲಿ ಬರುವ "ಪರಹಿತ ವ್ಯವಸನಿಗಳಲ್ಲದೆ ದುರ್ವ್ಯಸನಿಗಳಲ್ಲ, ಗೋಸಾಸಮಲ್ಲದೆ ಕನ್ನೆ ಗೋಸಾಸಮಿಲ್ಲ" ಎಂಬ ವಾಕ್ಯವನ್ನು ಬಿಟ್ಟರೆ, ಕೇವಲ ಶಾಸನಗಳಲ್ಲಿ, ಅದೂ ಒಂದು ನಿರ್ದಿಷ್ಟ ಅವಧಿಯ ಶಾಸನಗಳಲ್ಲಿ ಕಂಡು ಮರೆಯಾಗುವ ಪದವೇ ಗೋಸಾಸ.

'ಗೋಸಾಸವೆಂದರೆ ಊರ ಹೊರಗೆ ಗೋವುಗಳು ನಿಂತುಕೊಳ್ಳುವ ಸ್ಥಳ' ಎಂಬುದು ಡಾ. ಫ್ಲೀಟ್‌ರವರ ಅಭಿಪ್ರಾಯ. ಕನ್ನಡ ಸಾಹಿತ್ಯ ನಿಘಂಟು ಗೋಸಾನ ಪದಕ್ಕೆ ೩ ಅರ್ಥಗಳನ್ನು ಕೊಟ್ಟಿದ್ದಾರೆ. ಅವೆಂದರೆ,

೧. ತುರುಗಾಳಗದಲ್ಲಿ ಹಸುಗಳನ್ನು ಬಿಡಿಸಿಕೊಳ್ಳುವುದಕ್ಕಾಗಿ ತೋರುವ ಸಾಹಸ, ಗೋವುಗಳನ್ನು ಹಿಡಿಯುವಲ್ಲಿ ತೋರುವ ಪರಾಕ್ರಮ.

೨. ಸಾವಿರ ದಾನ

೩. ಪುಣೆ ಜಿಲ್ಲೆಯ ಬೇಡ ತಾಲ್ಲೂಕಿನ ಒಂದು ಹಳ್ಳಿ.

"ಸಾವಿರ ಗೋವುಗಳನ್ನು ದಾನ ಕೊಡುವ ಕ್ರಮವನ್ನೇ 'ಗೋಸಾಸ ಅಥವಾ ಗೋಸಹಸ್ರ' ದಾನವೆಂದು ಹೇಳಲಾಗಿದೆ"[೩] ಎಂದು ಡಾ. ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯಪಟ್ಟಿದ್ದಾರೆ.

ಅನ್ನದಾನದಂತೆ, ಗೋವುದಾನವು ಶ್ರೇಷ್ಠವಾದ ದಾನವಾಗಿತ್ತು. ಹಲವಾರು ದಾನಿಗಳು ಈ ದಾನವನ್ನು ಮಾಡಿರುವರು. ಕರ್ನಾಟಕದ ಶಾಸನಗಳ ಅನೇಕ ಪ್ರಕಾರಗಳಲ್ಲಿ ದಾನಶಾಸನ ಪ್ರಕಾರವೂ ಒಂದು. ಗೋಸಾಸ ಮೂಲತಃ ದಾನಶಾಸನ ಪ್ರಕಾರವಾಗಿದ್ದರೂ ಈ ಕೆಳಗಡೆ

ಸೂಚಿಸಿದಂತೆ ಸಂಖ್ಯೆ, ಕಾಲ, ಭೌಗೋಳಿಕತೆ, ಪಾಠ, ಶಿಲ್ಪವಿನ್ಯಾಸ.... ಇತ್ಯಾದಿ ದೃಷ್ಟಿಗಳಿಂದಾಗಿ ಅವುಗಳನ್ನು ಪ್ರತ್ಯೇಕ ಪ್ರಕಾರವೆಂದು ಪರಿಗಣಿಸಬೇಕಾಗುತ್ತದೆ.

**ಗೋಸಹಸ್ರ ದಾನ ಶಾಸನಗಳ ಶಿಲ್ಪ:**

ಆಕಳು-ಕರು ಇದ್ದರೆ ದಾನಶಾಸನ, ಹೋರಾಟ-ಸ್ವರ್ಗಾರೋಹಣ-ಸ್ವರ್ಗವಾಸ ಸ್ತರಗಳಿದ್ದರೆ ವೀರಗಲ್ಲು, ಎತ್ತಿದ ಕೈಯಿದ್ದರೆ ಮಾಸ್ತಿ ಶಾಸನವೆಂದು ತಟ್ಟನೆ ಹೇಳುವಂತೆ ಗೋಸಾಸ ಶಾಸನಗಳನ್ನು ನೋಡಿದ ಕೂಡಲೇ ಗುರುತಿಸಬಹುದು. ಇವು ಮಿಕ್ಕ ಶಾಸನಗಳಂತೆ ಫಲಕದ ಆಕಾರದಲ್ಲಿರದೆ ಕಂಬದ ಆಕಾರದಲ್ಲಿರುತ್ತವೆ. ಇದು ಧ್ಯಾನ ಅಥವಾ ತ್ಯಾಗದ ದಾಖಲೆ. ೪ ಮೈಯುಳ್ಳ ಆ ಕಂಬದ ಎತ್ತರ ಸುಮಾರು ೪.೫ ಅಡಿ ಮೇಲ್ಭಾಗ ಕಮಾನಿನಂತೆ ಅರ್ಧವರ್ತುಲಾಕಾರವಾಗಿರುತ್ತದೆ. ಸಾಮಾನ್ಯವಾಗಿ ಆ ಅರ್ಧವರ್ತುಲಾಕಾರದಲ್ಲಿ ಕಲಶ, ಕಲಶದ ಎಡಬಲದಲ್ಲಿ ಮೀನು ಬಿಡಿಸಲಾಗಿರುತ್ತದೆ. ಎಸಳೆಯ ಗೋಸಾಸ ಕಂಬದ ಒಂದು ಭಾಗದಲ್ಲಿ ಕಲಶ, ಮತ್ತೊಂದು ಭಾಗದಲ್ಲಿ ಆನೆ, ನೊಗ ಹೇರಿದ ಎರಡು ಎತ್ತುಗಳು, ಎರಡು ಹಂಸ-ಒಂದು ಆಮೆಯ ಪಂಚತಂತ್ರ ಘಟನೆ, ಎರಡು ನರಿ, ಒಂದು ಗಣಪತಿ ಚಿತ್ರಗಳನ್ನು ಬಿಡಿಸಲಾಗಿರುತ್ತದೆ.

ಒಟ್ಟಿನಲ್ಲಿ, ಶಿಲ್ಪವಿನ್ಯಾಸ ದೃಷ್ಟಿಯಿಂದ ಕಂಬದಂತಿರುವ, ಕಲಶ ಇತ್ಯಾದಿ ವಿಶಿಷ್ಟ ಚಿತ್ರಗಳನ್ನು ಒಳಗೊಂಡ ತುಂಬಾ ಆಕರ್ಷಕ ಶಾಸನವರ್ಗವದು. ಇಲ್ಲಿ ಕೆಲವೊಂದು ಗೋಸಾಸ ಶಾಸನಗಳನ್ನು ಉಲ್ಲೇಖಿಸಲಾಗಿದೆ.

೧. "ಲೋಕ ಮಹಾದೇವಿಯರ ದೇಗುಲದ ಸೂಳೆ ಗೋಯಿನ್ದ ಪೊಟ್ಟಿಯ ಮಗಳು ಬಾದಿ ಪೊಟ್ಟಿಯೆಂಬೋಳ್ ಉತ್ತಮ ಗೋಸಾಸ ಮಿಕ್ಕಾಳ್" (ಪಟ್ಟದಕಲ್ಲು ಶಾಸನ-೭೭೮).

೨. "ಗೋಸಾಸಿಯ ಮರ್ಮದರಮ್ಬಯ ಗೋಸಹಸ್ರಮಿಳ್ದಂ" (ಐಹೊಳೆ ಶಾಸನ-೯೪೫).

೩. "ಶಾಂತಗಾವುಣ್ಣ ದೇಗುಲಂ ಮಾಡಿಸಿ ಗೋಸಹಸ್ರಮಿಳ್ದಂ" (ಐಹೊಳೆ ಶಾಸನ-೯೭೧).

೪. "ಸಡಗರರ ತಿಳ್ತಮಂ ವಿಕ್ರಮಮೆಂಬ ವರ್ಷದೊಳ್ ಗೋಸಹಸ್ರ ಮಿಳ್ದೋ" (ಅಸೂಟಿ ಶಾಸನ-೯೭೧).

೫. "ಕೊಣ್ಡಿ ಶುಲರ ಕುಪ್ಪಕೀರ್ತಿಮರ್ಮ್ಮ ಗೋಸಾಸಿಯಾನಿರೆಸಿದಾ ಕೀರ್ತ್ತನಂ" (ಅಣ್ಣಿಗೇರಿ ಶಾಸನ–೭೫೦).

೬. "ಮಾಸಿಗರ ಚಿದಾಣ್ಣಿ ಗೋಸಾಸಂ ಮಿಳ್ದೊಂ" (ಸೊರಟೂರು ಶಾಸನ–೮೩೩).

೭. "ಎರೆವಾಸನೂಗೋಸಹಸ್ರ ಕೊಟ್ಟೋನ್" (ಬೆಳಹೊದ ಶಾಸನ–೮೦೦).

೮. "..... ಎರೆಯಮ್ಮೆ ಗೋಸಾಸಮಿಳ್ದೋ...." (ಚಿಂತಲಿ ಶಾಸನ–೭೯೩).

೯. "ಇಂದಮ್ಮನ ಗೋಸಾಸದ ಮೇಂಟಿ" (ಗುಡಗೇರಿ ಶಾಸನ–೮ನೇ ಶತಮಾನ).

೧೦. "ಶ್ರೀ ಭಿಸರ ಅಮ್ಮ ಕೀರ್ತಿ ಕೊಟ್ಟನ್ ಗೋಸಾಸಮಾನ್..."[೪] (ದೇವಗಿರಿ ಶಾಸನ–೭ನೇ ಶತಮಾನ)

**ಬಸದಿ–ಮಠ–ದೇವಾಲಯಗಳಿಗೆ ನೀಡಿದ ದಾನ:**

ಪ್ರಾಚೀನ ಕಾಲದಲ್ಲಿ ಬಸದಿ–ಮಠ–ದೇವಾಲಯಗಳು ಧರ್ಮ ಸಂಸ್ಕೃತಿಯ ಕೇಂದ್ರಗಳಾಗಿದ್ದಂತೆ, ಶೈಕ್ಷಣಿಕ ಕೇಂದ್ರಗಳೂ ಆಗಿದ್ದವು. ಹೀಗಾಗಿ ಸಮಾಜ ಅವುಗಳಿಗೆ ದಾನದತ್ತಿಗಳನ್ನು ನೀಡಿ ಅಭಿವೃದ್ಧಿಪಡಿಸುತ್ತಿತ್ತು.

"ಗಂಗರ ಕಾಲದ ದೇವರಹಳ್ಳಿ ತಾಮ್ರ ಶಾಸನ ಪೃತುವೀನಿಗುನ್ದರಾಜನೆನಿಸಿದ ಪರಮಗೂಳನ ಪತ್ನಿ ಕುನ್ದಾಬ್ಬೆ ಎಂಬುವಳು ಕಟ್ಟಿಸಿದ ಲೋಕತಿಲಕವೆಂಬ ಹೆಸರಿನ ಬಸದಿಗೆ ಅರಸ ಗ್ರಾಮವೊಂದನ್ನು ದಾನವಿತ್ತುದನ್ನು ಹೇಳಿದೆ"[೫] ಎಂಬುದನ್ನು ವಿದ್ವಾಂಸರು ಉಲ್ಲೇಖಿಸಿದ್ದಾರೆ.

ವಿಷ್ಣುವರ್ಧನನ ಆಳ್ವಿಕೆಯನ್ನು ಉಲ್ಲೇಖಿಸುವ ಮುಗಳೂರಿನ ಶಾಸನವು ನಾರಸಿಂಹ ಹೊಯ್ಸಳದೇವನು ಗೋವಿಂದ ಜಿನಾಲಯಕ್ಕೆ ಮುಗಳಿ ಅಗ್ರಹಾರದಲ್ಲಿ ಭೂದಾನ ನೀಡಿದ ವಿಷಯವನ್ನು ನಿರೂಪಿಸುತ್ತದೆ. ಶಿಕಾರಿಪುರ ಶಾಸನವು ಜಂಬೂರಿನ ಮಠದಲ್ಲಿ ನಡೆಯುತ್ತಿದ್ದ ಪಾಠಶಾಲೆಯೊಂದರಲ್ಲಿ ಅಭ್ಯಾಸ ಮಾಡುತ್ತಿದ್ದ ವಿದ್ಯಾರ್ಥಿಗಳಿಗೆ ಭೂಮಿಯನ್ನು ಅನೇಕ ಕಾರಣಗಳಿಗೆ ಬಿಟ್ಟ ಸಂಗತಿಗಳನ್ನು ತಿಳಿಸುತ್ತದೆ. ಭೂಮಿಯನ್ನು ಯಾವ ಯಾವ ಕಾರಣಕ್ಕಾಗಿ ಬಿಡಲಾಯಿತು ಎಂಬುದನ್ನು ಪಟ್ಟಿಕರಿಸಿ ಹೇಳುತ್ತದೆ. ಹೊಯ್ಸಳ ವೀರಬಲ್ಲಾಳದೇವ

ಲಕ್ಕುಂಡಿಯನ್ನು ಒಂದು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳುತ್ತಿರುವಾಗ, ಕಾಳಾಮುಖಾಚ್ಯಾರ್ಯರಾದ ಸಿದ್ಧಾಂತಿ ಚಂದ್ರಭೂಷಣ ಪಂಡಿತ ದೇವರಿಗೆ 'ಹೊಂಬಳಲು' ಎಂಬ ಗ್ರಾಮವನ್ನು ಧಾರೆಯೆರೆದು ಕೊಟ್ಟವರ ವರ್ಣನೆ ಗದುಗಿನ ಒಂದು ಶಾಸನದಲ್ಲಿದೆ. ದೇವಾಲಯದ ಜೀರ್ಣೋದ್ಧಾರಕ್ಕಾಗಿ ವಿದ್ಯಾದಾನ ಮತ್ತು ಅನ್ನದಾನಗಳಿಗಾಗಿ ಇದನ್ನು ಕೊಟ್ಟಂತೆ ಹೇಳಲಾಗಿದೆ.

ವೀರ ಸದಾಶಿವ ಮಹಾರಾಯರ ಕಾಲದಲ್ಲಿ ಚಿಕ್ಕರಾಯ ತಮ್ಮ ಗೌಡನು, ಸೋಮೇಶ್ವರ ದೇವರು ಮತ್ತು ವೀರಭದ್ರದೇವರಿಗೆ ಅಮೃತಪಡಿ ನಡೆಯುವುದಕ್ಕಾಗಿ ಮೂರು ಗ್ರಾಮಗಳನ್ನು ದಾನವಾಗಿ ಕೊಟ್ಟಿದ್ದಾನೆ. ಮುಳುಬಾಗಿಲು ಗ್ರಾಮದ ಅರ್ಚಕ ಚಂದ್ರಶೇಖರಯ್ಯನವರಲ್ಲಿರುವ ತಾಮ್ರ ಶಾಸನ ಇದಾಗಿದೆ.

"ರಾಮನಾಥಪುರದ ಒಂದು ಶಾಸನ ಹಲವು ವಿಧಗಳಿಂದ ಕುತೂಹಲಕಾರಿಯಾಗಿದೆ. ಹಿರಿಯ ಸಂಧಿವಿಗ್ರಹಿಯಾದ ಹಾಗೂ ಕೊಂಗಮಂಡಲದ ಬೊಮ್ಮಣ್ಣದಣ್ಣಾಯಕರ ಕೈಕೆಳಗಿದ್ದ ವಾಮರಸನ ಮಗ ಕಲ್ಲಯ್ಯನೆಂಬಾತ ರಾಮನಾಥ ದೇವರ ಪೂಜೆಗಾಗಿ ಹೂದೋಟವೊಂದನ್ನು ಮಾಡಿಸಲು ದೇವಾಲಯ ಸ್ಥಾನಿಕರಿಂದ ೯೫ ಕಂಬ ಭೂಮಿಯನ್ನು ಕ್ರಮಕ್ಕೆ ಪಡೆದು ದಾನ ನೀಡಿದೆ"[೬] ಎಂಬುದನ್ನು ಗಮನಿಸಬಹುದು.

ಹೀಗೆ ಬಸದಿ-ಮಠ-ದೇವಾಲಯಗಳಿಗೆ ದಾನ ನೀಡಿದ ಉದಾಹರಣೆಗಳು ಕರ್ನಾಟಕದ ಹಲವಾರು ಶಾಸನಗಳಲ್ಲಿ ದೊರೆಯುತ್ತವೆ.

**ವಿದ್ಯಾಕೇಂದ್ರಗಳಿಗೆ ನೀಡಿದ ದಾನ:**

ಪ್ರಾಚೀನ ಭರತಖಂಡದ ವಿದ್ಯಾಪದ್ಧತಿಯು ಬಹುಪಾಲು ಧಾರ್ಮಿಕವಾದುದು. ಕ್ರಿ.ಶ. ಪೂರ್ವ ಮೂರನೆಯ ಶತಮಾನದ ಅಶೋಕನ ಕಾಲದಲ್ಲಿ ಬೌದ್ಧ ವಿಹಾರಗಳು ದೊಡ್ಡ ಸಂಸ್ಥೆಗಳಾಗಿ ಬೆಳೆದು, ಕ್ರಮೇಣ ವಿದ್ಯಾಕೇಂದ್ರಗಳಾಗಿ ಪರಿಣಮಿಸಿದವು. ಅವು ಆರಂಭದಲ್ಲಿ ಭಿಕ್ಷು ಭಿಕ್ಷುಣಿಯರ ಶಿಕ್ಷಣಕ್ಕಾಗಿ ಮೀಸಲಾಗಿದ್ದವು. ನಂತರ ಕ್ರಮೇಣ ಉಳಿದವರನ್ನು ಸೇರಿಸಿಕೊಂಡವು. "ಹಿಂದೂಗಳಲ್ಲಿ ವ್ಯವಸ್ಥಿತ ವಿದ್ಯಾಕೇಂದ್ರಗಳು ಕ್ರಿ.ಶ. ಒಂಬತ್ತನೆಯ ಶತಮಾನದ ಆದಿಯವರೆಗೆ ಕಾಣಿಸಿಕೊಳ್ಳುವುದಿಲ್ಲ"[೭]. ಇದಕ್ಕೆ ಕನ್ನಡ ಶಾಸನಗಳು ಪುಷ್ಟಿಕರಿಸುತ್ತವೆ.

ನಮ್ಮ ಕರ್ನಾಟಕದಲ್ಲಿ ದೇವಸ್ಥಾನಗಳೇ ವ್ಯವಸ್ಥಿತ ವಿದ್ಯಾಸಂಸ್ಥೆಗಳಾಗಿದ್ದವು. ಅದರ ಜೊತೆಗೆ ಬ್ರಹ್ಮಪುರಿ, ಅಗ್ರಹಾರ, ಘಟಿಕಾಸ್ಥಾನಗಳು ವಿದ್ಯಾದಾನವನ್ನು ಮಾಡುತ್ತಿದ್ದವು. ಅವು ಮಾಡುವ ವಿದ್ಯಾದಾನದ ಪ್ರತಿಯಾಗಿ ರಾಜರು, ಶ್ರೀಸಾಮಾನ್ಯರು ವಿದ್ಯಾಭಿವೃದ್ಧಿಗಾಗಿ ದಾನ–ದತ್ತಿಗಳನ್ನು ನೀಡುತ್ತಿದ್ದರು. ಅಂತಹ ವಿಷಯಗಳು ಶಾಸನಗಳಲ್ಲಿ ಕಂಡುಬರುತ್ತವೆ.

ಚಾಲುಕ್ಯ ಅರಸು ಆರನೆಯ ವಿಕ್ರಮಾದಿತ್ಯನು, ಅವನ ಮಹಾಚಮೂಪನಾದ ಮಹಾದೇವನು ಇಟ್ಟಿಗೆಯಲ್ಲಿ ಕಟ್ಟಿಸಿದ ಮಹಾದೇವೇಶ್ವರ ರಂಗಭೋಗ ಹಾಗೂ ವೇದ ವೇದಾಂಗೋಪಾಂಗ ಶಿಕ್ಷಣ, ಸತ್ರಾದಿಗಳಿಗೆ ಇಟ್ಟಿಗೆಯ ಜನರೇ ಸಮ್ಮುಖದಲ್ಲಿ ಭೂಮಿಯನ್ನು ದಾನ ನೀಡಿದ ವಿಚಾರ ಕುರಿತು ಕ್ರಿ.ಶ. ೧೧೧೦೮ರ ಶಾಸನವು ಹೇಳುತ್ತದೆ.

ಚಾಲುಕ್ಯ ಅರಸು ಒಂದನೆಯ ಸೋಮೇಶ್ವರನ ಕಾಲದಲ್ಲಿ ಕ್ರಿ.ಶ. ೧೦೫೮ ಮಧುವರಸ ದಣ್ಣಾಯಕನು ನಾಗಾವಿಯ ಅಗ್ರಹಾರದಲ್ಲಿರುವ ಘಟಿಕಾಸ್ಥಾನಕ್ಕೆ ದತ್ತಿಬಿಟ್ಟ ವಿವರವನ್ನು ತಿಳಿಸುತ್ತದೆ. ಚಾಲುಕ್ಯ ತ್ರೈಲೋಕ್ಯಮಲ್ಲನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ. ೧೦೫೮ ದಂಡನಾಯಕ ಮಧುಸೂಧನನು ನಾಗಾವಿಯಲ್ಲಿರುವ ಪಾಠ ಶಾಲೆಯಲ್ಲಿನ ವೇದ ಕಲಿಯುವ ೨೦೦ ವಿದ್ಯಾರ್ಥಿಗಳು, ಶಾಸ್ತ್ರ ಕಲಿಯುವ ೫೨ ವಿದ್ಯಾರ್ಥಿಗಳು, ೬ ಜನ ಉಪಾಧ್ಯಾಯರು, ಓರ್ವ ಸರಸ್ವತಿ ಭಂಡಾರಿಕ ಇವರೆಲ್ಲರ ನಿರ್ವಹಣೆಗಾಗಿ ಭೂಮಿಯನ್ನು ದಾನವಾಗಿ ನೀಡಿದನೆಂದು ನಾಗಾವಿ ಶಾಸನ ನಿರೂಪಿಸುತ್ತದೆ.

ಬಳ್ಳಾರಿ ಜಿಲ್ಲೆಯ ಕೊಗಳ ಶಾಸನ ಚಾಲುಕ್ಯ ಒಂದನೆಯ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ಜೈನ ಮತೀಂದ್ರರಾಗಿದ್ದ ಇಂದ್ರಕೀರ್ತಿ ಎಂಬುವರು ವಿದ್ಯಾರ್ಥಿಗಳ ವಿದ್ಯೆ ಮತ್ತು ಅನ್ನಸತ್ರಕ್ಕೆ ೨೪ ಮತ್ತರ ಭೂಮಿಯನ್ನು ದಾನವಾಗಿ ನೀಡಿದ ವಿಷಯವನ್ನು ಹೇಳುತ್ತದೆ.

ಈ ಮೇಲ್ಕಾಣಿಸಿದ ದಾನಶಾಸನಗಳನ್ನು ಗಮನಿಸಿದರೆ ತರಗತಿಗಳು ನಡೆಯುತ್ತಿದ್ದುದು ಬಹುಮಟ್ಟಿಗೆ ದೇವಸ್ಥಾನಗಳಲ್ಲೇ ಎಂಬುದು ತಿಳಿದುಬರುತ್ತದೆ. ಕಳೆದ ಶತಮಾನದ ಆರಂಭದವರೆಗೂ ದೇವಸ್ಥಾನಗಳಲ್ಲಿಯೇ ಪಾಠ ಪ್ರವಚನಗಳು ನಡೆಯುತ್ತಿದ್ದವು ಎಂಬುದನ್ನು ಇಲ್ಲಿ ಸ್ಮರಿಸಬಹುದು.

**ಪಂಡಿತ-ಗಣ್ಯವ್ಯಕ್ತಿಗಳಿಗೆ ನೀಡಿದ ದಾನ:**

ಪ್ರಾಚೀನ ಕಾಲದಲ್ಲಿ ಪಂಡಿತ ಮತ್ತು ಗಣ್ಯವ್ಯಕ್ತಿಗಳಿಗೆ ಗೌರವಪೂರ್ವಕವಾಗಿ ದಾನದತ್ತಿಗಳನ್ನು ನೀಡಿರುವ ಅನೇಕ ಉದಾಹರಣೆಗಳು ಶಾಸನಗಳಲ್ಲಿ ದೊರೆಯುತ್ತವೆ.

"ಒಂದನೆಯ ಶಿವಮಾರನ ಹಳ್ಳಿಕೆರೆ ತಾಮ್ರಶಾಸನ ಕೆರೆಗೋಡು ವಿಷಯಕ್ಕೆ ಸೇರಿದ ಕೆರೆಗೋಡು ಮತ್ತು ಇತರ ಕೆಲವು ಗ್ರಾಮಗಳನ್ನು ಕೆಲವರಿಗೆ ದಾನವಿತ್ತ ವಿಷಯವನ್ನು ತಿಳಿಸುತ್ತದೆ. ಪಲ್ಲವ ಯುವರಾಜನ ಮಕ್ಕಳಾದ ಜಯ ಮತ್ತು ಪೃಥ್ವಿ ಎಂಬುವರ ಕೋರಿಕೆಯ ಮೇರೆಗೆ ಈ ದಾನವನ್ನು ನೀಡಲಾಯಿತೆಂದು ಹೇಳಿದೆ"[೮]. ಈ ದಾನದಲ್ಲಿ ಅರಸನ ಮಕ್ಕಳ ಪಾತ್ರ ಎದ್ದು ಕಾಣುತ್ತದೆ. ಅರಸು ಮನೆತನದ ಎಲ್ಲರೂ ದಾನ ನೀಡುವ ಕ್ರಮ ಆರಚಣೆಯಲ್ಲಿತ್ತೆಂಬುದಕ್ಕೆ ಇದು ಉದಾಹರಣೆಯಾಗಿದೆ.

ಕ್ರಿ.ಶ. ೮೮೬ ರಾಷ್ಟ್ರಕೂಟ ಅಮೋಘವರ್ಷನ ಕಾಲದಲ್ಲಿಯ ಒಂದು ಶಾಸನವು ಗೋಕರ್ಣ ಪಂಡಿತ ಬಟ್ಟರ್ಗೆ ಭೂಮಿ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ದೇವಲಾಪುರ ಶಾಸನವು ಲಕ್ಷ್ಮೀಕಾಂತ ದೇವಾಲಯದಲ್ಲಿ ದೀಪಮಾಲೆಯ ಕಂಬ ಮತ್ತು ಬಾಗಿಲುವಾಡವನ್ನು ಮಾಡಿಸಿದ ಹಳಿಯಾರ ಲಚ್ಚಿನಾಯಕನ ಮಗ ಚಿಕ್ಕ ಅಲ್ಲಪ್ಪ ನಾಯಕನಿಗೆ ಸಾಳುವ ನರಸಿಂಹಯ್ಯನು ದೇವಲಾಪುರ ಗ್ರಾಮವನ್ನು ದಾನವಾಗಿ ನೀಡಿದ ವಿಷಯವನ್ನು ನಿರೂಪಿಸುತ್ತದೆ. ಕ್ರಿ.ಶ. ೧೧೯೫ರ ಅರಸಿಕೆರೆಯ ಶಾಸನವು ಹೊಯ್ಸಳ ರಾಜನಾದ ಎರಡನೆಯ ವೀರಬಲ್ಲಾಳನು ಹಲವಾರು ಪಂಡಿತರನ್ನು ಗೌರವಿಸಿ ದಾನದತ್ತಿಗಳನ್ನು ನೀಡಿದಂತೆ ತಿಳಿಸುತ್ತದೆ.

ರಾಜರೂ, ಸಾಮಂತರುಗಳೂ ಅಲ್ಲದೆ ವಿವಿಧ ಅಧಿಕಾರಿಗಳೂ, ದಂಡನಾಯಕರೂ, ಗಾವುಂಡರೂ, ಶ್ರೀಮಂತ ವರ್ತಕರೂ ದಾನ ಕೊಟ್ಟಿದ್ದನ್ನು ಉಲ್ಲೇಖಿಸುವ ಶಾಸನಗಳಲ್ಲದೆ ಜನಸಾಮಾನ್ಯರೂ ಕೊಟ್ಟ ದಾನ ಸಹ ಶಾಸನಗಳಲ್ಲಿ ವರ್ಣಿತವಾಗಿವೆ. ಇಂತಹ ಅನೇಕ ಶಾಸನಗಳು ದೊರೆತಿವೆ. ಕೆಲವು ದಾನಶಾಸನಗಳಲ್ಲಿ ಮತ್ತೊಂದು ರೀತಿಯ ಮನೋಧರ್ಮವನ್ನು ಕಾಣುತ್ತೇವೆ. ತಮ್ಮ ಬಂಧು-ಬಳಗದವರಿಗೆ, ಹಿತವರಿಗೆ ಒಳ್ಳೆಯದಾಗಲೆಂದು ಮಾಡುತ್ತಿದ್ದ ದಾನವನ್ನು ಅವು ತಿಳಿಸುತ್ತವೆ. ಅಲ್ಲದೆ ತಂದೆಯ ಅಥವಾ ಹತ್ತಿರದ ಬಂಧುಗಳ ಹೆಸರಿನಲ್ಲಿ ಭೂಮಿಯನ್ನು ನೀಡುವುದು, ಧರ್ಮಕ್ಕಾಗಿ ಗಾಣವನ್ನು ಹೊಡೆಸುವುದು, ಕೆರೆಯನ್ನು

ಕಟ್ಟಿಸುವುದು, ಸತ್ರಗಳನ್ನು ಏರ್ಪಡಿಸುವುದು... ಮೊದಲಾದ ಉದಾಹರಣೆಗಳು ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ದೊರೆಯುತ್ತವೆ.

ಒಟ್ಟಾರೆಯಾಗಿ ದಾನಶಾಸನಗಳಿಂದ ನಾಡಿನ ಅತ್ಯಂತ ಹಿರಿಯ ಸಂಸ್ಕೃತಿ, ಸಂಪ್ರದಾಯ, ಪರಂಪರೆ ವ್ಯಕ್ತವಾಗುತ್ತವೆ. ಸಾಮಾನ್ಯ ಜನಜೀವನದ ವಿವಿಧ ಮಟ್ಟಗಳಲ್ಲಿ ಧರ್ಮ ಹಾಸುಹೊಕ್ಕಾಗಿ ಸೇರಿ ಜೀವನವನ್ನು ರೂಪುಗೊಳಿಸುತ್ತಿರುವ ಶಕ್ತಿಯಾಗಿ ಗೋಚರಿಸುತ್ತದೆ. ಅಂತಹ ದಾನಗಳನ್ನು ಒಳಗೊಂಡ ಶಾಸನಗಳು ನಾಡಿನ ಸಂಸ್ಕೃತಿಯ ಪ್ರತೀಕಗಳು ಸಾವಿರಾರು ದಾನಶಾಸನಗಳು ಕನ್ನಡಿಗರ ಉದಾರತೆಯನ್ನು, ದಾನಶೂರತೆಯನ್ನು ಸಾರುತ್ತವೆ.

**ಕೆಲವೊಂದು ಶಾಸನಗಳು:**

'ಹಲ್ಮಿಡಿ ಶಾಸನ' ಕರ್ನಾಟಕದಲ್ಲಿ ದೊರೆತ ಮೊಟ್ಟಮೊದಲ ಪ್ರಾಚೀನ ಕನ್ನಡ ಶಾಸನ. ಎಂ.ಎಚ್. ಕೃಷ್ಣರವರು ೧೯೩೬ರಲ್ಲಿ ಸಂಶೋಧನೆಯಿಂದ ಗುರುತಿಸಿದರು. ಬೇಲೂರು ತಾಲ್ಲೂಕಿನ ಹಲ್ಮಿಡಿ ಗ್ರಾಮದಲ್ಲಿ ದೊರೆತ ಈ ಶಾಸನ ಕದಂಬ ವಂಶದ ಕಾಕುತ್ಸವರ್ಮನ ಕಾಲದ್ದಾಗಿದೆ (ಕ್ರಿ.ಶ. ೪೫೦).

**ಹಲ್ಮಿಡಿ ಶಾಸನದ ಪಾಠ:**

೧. "ಜಯತಿ ಶ್ರೀಪರಿಷ್ವಜ ಶಾರ್ಙ್ಗ [ಮ್ಯಾನತಿ] ರಚ್ಯುತಃ ದಾನವಾ
ಕ್ಷ್ಣೋರ್ಯುಗಾನ್ತಾಗ್ನಿ: [ಶಿಷ್ಟಾನಾನ್ತು] ಸುದರ್ಶನ॥
೨. ನಮಃ ಶ್ರೀಮತ್ಕದಂಬಪನ್ತ್ಯಾಗಸಂಪನ್ನನ್ಕಲಭೋರ [ನಾ] ಅರಿಕ
೩. ಕುಸ್ಥಭಟ್ಟೋರನಾಳೆ ನರಿದಾವಿ(ಳೆ) ನಾಡುಳ್ ಮೃಗೇಶನಾ
೪. ಗೇನ್ದ್ರಾಭೀಳಭ್ಭ‌ಟಹರಪ್ಪೋರ್ ಶ್ರೀ ಮೃಗೇಶನಾಗಾಹ್ವಯ
--------------------------------
--------------------------------
ಭಟ್ಟರ್ಗ್ಗೀಗವೆಳ್ದ ಒಡ್ಡಲಿ ಆಪತ್ತೊನ್ದಿವಿಟ್ಟಾರಕರ"

ಈ ಶಾಸನದಲ್ಲಿ ದಾನವನ್ನು ತೆಗೆದುಕೊಂಡವನು ವಿಜ ಅರಸ; ಅವನ ತಂದೆ ಎಲ್ಲ ಭಟಾರಿ. ವಿಜ ಅರಸನು ಪಶುಪತಿಯ ಅಪ್ಪಣೆಯ ಪ್ರಕಾರ ಕದನದಲ್ಲಿ ಹೋರಾಡಿ ಜಯವನ್ನು ಪಡೆದನು. ಆ ಕಾರಣದಿಂದ ಅವನಿಗೆ 'ಪಲ್ಮಡಿ' ಅಥವಾ ಇಂದಿನ 'ಹಲ್ಮಿಡಿ' ಎಂಬ ಗ್ರಾಮವು

ಮೂಳಿವಳ್ಳಿ ಅಥವಾ ಹಲ್ಮಿಡಿಗೆ ಮೂರು ಮೈಲಿ ಪಶ್ಚಿಮಕ್ಕಿರುವ ಈಗಿನ ಮುಳವಳ್ಳಿ ಗ್ರಾಮವು ದಾನವಾಗಿ ಕೊಡಲ್ಪಟ್ಟವು. ಕದನದಲ್ಲಿ ಹೋರಾಡಿದ ಕತ್ತಿಯ ಮರ್ಯಾದೆಗಾಗಿ ಕೊಟ್ಟ ದಾನವಾದುದರಿಂದ ಅದಕ್ಕೆ 'ಬಾಳ್ಗಳ್ಚು' ಎಂದು ಕರೆಯಲಾಗುತ್ತದೆ.

ಕ್ರಿ.ಶ. ಸು. ೭೦೦ರ ಮಹಾಕೂಟ ಶಾಸನವು ಬಾದಾಮಿ ಚಾಲುಕ್ಯ ವಿಕ್ರಮಾದಿತ್ಯನ ಪ್ರಾಣವಲ್ಲಭೆಯಾದ ಸೂಳಿ ವಿನಾಪೋಟಿಯು ಎಲ್ಲ ದಾನಗಳ ಜೊತೆಗೆ ಹಿರಣ್ಯ ಗರ್ಭವೆಂಬ ಮಹಾದಾನವನ್ನು ದೇವರಿಗೆ ಸುವರ್ಣಪೀಠ, ಬೆಳ್ಳಿಯ ಕೊಡೆಗಳನ್ನು ಮಂಗಲವೆಂಬ ಗ್ರಾಮದಲ್ಲಿ ೮೦೦ ಕ್ಷೇತ್ರ ಭೂಮಿಯನ್ನು ದಾನ ಮಾಡಿದರು. ಆ ಶಾಸನದ ಪಾಠ ಈ ರೀತಿಯಲ್ಲಿದೆ.

೧. "ಸ್ವಸ್ತಿ ವಿಜಯಾದಿತ್ಯ ಸತ್ಯಾಶ್ರಯ ಶ್ರೀ ಪೃಥವೀ–
೨. ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾ–
೩. ರರಾ ಪ್ರಾಣವಲ್ಲಭೆ ವಿನಾಪೋಟಿಗಳೆನ್ವಸೂರ್ಳೆ–

––––––––––––––––––––––––––––––

––––––––––––––––––––––––––––––

ತ್ರಿ [೦]ಗೊಟ್ಟೊಳ್ [॥] ಇದಾನಳೆದೊನ್ವಞ್ಚಮಹಾಪಾತಕನುಕ್ಕುಮ್। (॥)"[೧೦]

ಕ್ರಿ.ಶ. ೯೩೦ರ ಕಳಸ ಶಾಸನ ರಾಷ್ಟ್ರಕೂಟ ಚಕ್ರವರ್ತಿ ೪ನೆಯ ಗೋವಿಂದನು ತುಳಾಪುರುಷನಾದ ಸಂದರ್ಭದಲ್ಲಿ ತನ್ನ ದಂಡನಾಯಕರಾದ ರೇವದಾಸ, ವೀಸೋತ್ತರ ದೀಕ್ಷಿತರಿಗೆ ಕಾಡಿಯೂರು (ಕಳಸ) ಗ್ರಾಮವನ್ನು ದಾನ ಮಾಡಿದುದನ್ನು ಸಾರುತ್ತದೆ. ಕಾಡಿಯೂರು ೨೦೦ ಮಹಾಜನರನ್ನು ಒಳಗೊಂಡ ಒಂದು ಸುಪ್ರಸಿದ್ಧ ಅಗ್ರಹಾರ. ಆ ಗ್ರಾಮದ ಸೊಬಗನ್ನು ಅಲ್ಲಿಯ ಮಹಾಜನರ ಲೋಕಪ್ರಸಿದ್ಧಿಯನ್ನು ಈ ಶಾಸನವು ವಿವರಿಸುತ್ತದೆ. ಕನ್ನಡ ಶಾಸನಸಾಹಿತ್ಯದ ಸುದೀರ್ಘವು, ಚಂಪೂಶೈಲಿಯುತವೂ ಆದ ಪ್ರಥಮ ಶಾಸನ ಕವಿರಾಜಮಾರ್ಗ ಹಾಗೂ ಪಂಪನ ಮಧ್ಯಕಾಲಾವಧಿಯ ಚಂಪುವಿನ ಕೃಷಿಯನ್ನು ತಿಳಿಸುವ ಈ ಶಾಸನವನ್ನು ಬರೆದವರು ಕವಿರಾಜ ರಾಜ.....

೧. "ಜಯತ್ಯಾವಿಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ ದಕ್ಷಿಣೋನ್ನತದಂಷ್ಟ್ರಾಗ್ರವಿಶ್ರಾಂತಭುವನಂ ವಪುಃ॥ ಮತ್ತೇಭವಿಕ್ರೀಡಿತಂ। ಜಗತೀ ಚಕ್ರದೊಳೆ.

೨. ಯ್ದೆ ವರ್ತ್ತಿಸಿದ ಭೂಪಮ್ಮುನ್ನಮಿನ್ತಾರ್ವ್ವಿರೋಧಿಗಳಂ ಸಾಧಿಸಿ ವೀರಮಂ ತಳೆದರಿನ್ತಾರ್ವ್ವೀರರಿನ್ತಾರ್ಪ್ಪೊಗರ್ತ್ತೆ (ಳ್ತೆ) ಗಡರ್ಪ್ಪಾದ ಮಹಾಮಹರ್ಬ್ಬಗೆವೊಡೆಂಬೊಳ್ಪಂ ನಿಜ ಮಾಡಿ.

೩. ಗೊಜ್ಜಿಗದೇವಂ ನೆಗಳ್ದಂ ಧರಾಧಿಪಲಲಾಮಂ ರಾಷ್ಟ್ರಕೂಟೋತ್ತಮಂ॥
ಪಗೆಗೊಣ್ಡಾಡುವ ಶತ್ರುಭೂಪತಿಗಳಂ ದೋರ್ಗ್ಗಿರ್ವ್ವದಿಂದೇರೆದುಗ್ರಗಜೇಂದ್ರ ಬೆ–
––––––––––––––––––––––––––––––––––––––––––––––––––––––
––––––––––––––––––––––––––––––––––––––––––––––––––––––"[೧೧]

ಕ್ರಿ.ಶ. ೧೦೫೩ರ ಮುಳುಗುಂದ ಶಾಸನವು ೧ನೇ ಸೋಮೇಶ್ವರನ ಸಂಧಿವಿಗ್ರಹಾಧಿಕಾರಿಯೂ ಅಗ್ಗಿಳದೇವನ ಮಗನೂ ಆದ ಬೆಳಮದೇವನು ತನ್ನ ತಾಯಿ ಗೊಜ್ಜಿಕಬ್ಬೆಯ ಪರೋಕ್ಷವಿನಯವಾಗಿ ನಯಸೇನ ಪಂಡಿತರ ಪಾದತೊಳೆದು, ತೀರ್ಥದ ಬಸದಿಗೆ ಭೂಮಿಯನ್ನು ದಾನವಾಗಿ ನೀಡಿರುವುದನ್ನು ತಿಳಿಸುತ್ತದೆ. ಈ ನಯಸೇನನು ಧರ್ಮಾಮೃತದ ನಯಸೇನನ ಗುರುವಿನ ಗುರು.

೧. "ಶ್ರೀಮದ್ಭಕ್ತಿ ಭರಾನತಾಮರಕಿರೀಟಾನರ್ಘ್ಯರತ್ನ ಪ್ರಭಾಜಾಳಾಲೀಡ (ಢ)
ಪದಾರವಿಂದಯುಗಳಃ ಕನ್ದರ್ಪದರ್ಪ್ಪಾಪಹಃ
೨. ತ್ರೈಲೋಕ್ಯೋದರವರ್ತ್ತಿಕೀರ್ತಿ ವಿಶದಶ್ಚನ್ದ್ರ ಪ್ರಭಸ್ಸು ಪ್ರಭೋಭವ್ಯಾನಾಂ ನಿವಹಂ
ನಿರಾಕುಳಮಂ ಪಾಯಾದಪಾಯಾಜ್ಜಿನಃ
೩. ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ
ಪರಮೇಶ್ವರ ಪರಮಭಟ್ಟಾರಕಂ ಸತ್ಯಾ
––––––––––––––––––––––––––––––––––––––––––––––––
––––––––––––––––––––––––––––––––––––––––––––––––"[೧೨]

ಕ್ರಿ.ಶ. ಸು. ೧೧೩೧ರ ಶ್ರವಣಬೆಳಗೊಳ ಶಾಸನವು ವಿಷ್ಣುವರ್ಧನನ ಪಟ್ಟಮಹಿಸಿ ಶಾಂತಲದೇವಿಯು ಬೆಳ್ಗೊಳ ತೀರ್ಥದಲ್ಲಿ ಸವತಿ ಗಂಧಾವರಣ ಜಿನಾಲಯವನ್ನು ನಿರ್ಮಿಸಿ, ಅದರ ಪೂಜಾಕಾರ್ಯಗಳಿಗಾಗಿ ಅರಸನಿಂದ ಭೂಮಿಯನ್ನು ಪಡೆದುಕೊಂಡು,

ಪ್ರಭಾಚಂದ್ರದೇವರ ಪಾದಪ್ರಕ್ಷಾಳನ ಮಾಡಿ ದಾನ ನೀಡಿರುವುದನ್ನು ತಿಳಿಸುತ್ತದೆ. ಈ ಶಾಸನದ ಪಾಠವು ಈ ರೀತಿಯಲ್ಲಿದೆ.....

೧. "ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಗಲಾಂಛನಂ।
೨. ಜೀಯಾತ್ರೈಲೋಕ್ಸನಾಥಸ್ಯ ಶಾಸನಂ ಜಿನಶಾಸನಂ॥
೩. ಶ್ರೀಮದ್ಯಾದವವಂಶಮಂಡನಮಣಿಃ ಕ್ಷೋಣೀಶರ ಕ್ಷಾಮಣಿರ್ಲ
೪. ಕ್ಷ್ಮೀ ಹಾನಮಣೀ ನರೇಶ್ವರಶಿರಃ ಪೋತ್ತುಂಗಶುಂಭದ್ಮಣಿಃ ಜೀಯಾನ್ನೀತಿಪಥೇಕ್ಷ
------------------------------------
------------------------------------[೧೩]"

ಕ್ರಿ.ಶ. ೧೧೭೬ರ ಕುರಗೋಡ ಶಾಸನವು ಮಹಾಶಿವಭಕ್ತ ಕಲ್ಲಿಸೆಟ್ಟಿ ಕುರಗೋಡಿನಲ್ಲಿ ಕಲಿದೇವಾಲಯವನ್ನು ನಿರ್ಮಿಸಿ ಅನೇಕ ದತ್ತಿಗಳನ್ನು ಬಿಟ್ಟುದು, ಶಿವೈಕ್ಯ ಚೂಡಾಮಣಿಯೆನಿಸಿದ ಮಾಂಡಲಿಕ ಸಿಂಧವಂಶದ ರಾಚಮಲ್ಲ, ಬಳ್ಳಾರೆಯ ಅಜ್ಜರಸರು ಭೂದಾನ ನೀಡಿದುದನ್ನು ವಿವರಿಸುತ್ತದೆ. ಆ ಶಾಸನದ ಪಾಠ....

೧. "ಶ್ರೀ ಕಲಿದೇವ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ।
ತ್ರೈಲೋಕ್ಯನಗರಾ-
೨. ರಂಭಮೂಲಸ್ತಂಭಾಯ ಶಂಭವೇ॥ ಶ್ರೀರಾಮಾರಮಣ ಪ್ರಣತಮಹಿ-
೩. ಮೆಂ ಬೃಂದಾರ ಕೋದಾರ ಬೃನ್ದಾರಾಧ್ಯಂ ತ್ರಿದಶಾಧಿನಾಥನಗಿ ಜಾಚಂಚ
ತ್ಕು ಚಾಲೋಲ ಕಾಶ್ಮೀರೋರಳಸ್ಥಳ-
------------------------------------
------------------------------------"[೧೪]

ಕ್ರಿ.ಶ. ಸು. ೧೧೯೬ರ ಅಮ್ಮತಾಪುರ ಶಾಸನವು ಗದುಗಿನಲ್ಲಿ 'ಅಮ್ಮತಸಮುದ್ರ' ಅಮ್ಮತಾಪುರ ಗ್ರಾಮದಲ್ಲಿ ಅಮ್ಮತೇಶ್ವರ ದೇವಾಲಯ ನಿರ್ಮಿಸಿದ ದಂಡನಾಯಕ ಅಮ್ಮತೇಶ್ವವರನು ಹೊಯರಸಳ ಚಕ್ರವರ್ತಿಯಿಂದ ಅಗ್ರಹರ ಹುಣಸಕಟ್ಟೆಯನ್ನು ಪಡೆದು ದಾನ ಮಾಡಿರುವುದನ್ನು ತಿಳಿಸುತ್ತದೆ. ಜೊತೆಗೆ ಹಲವು ಜನರೂ ದೇವರಿಗೆ ದಾನ ನೀಡಿದರು.

ಈ ಶಾಸನದ ಪಾಠ ಈ ರೀತಿಯಲ್ಲಿದೆ.

೧. "ಜಯತಿ ಶಿವಶಾಸನಂ ಭೂಚರ ಖೇಚರದಿ ವಿಜುರಾಜಿಮಕುಟಾರೂಢಂ
ಧರ್ಮ್ಮ ಪ್ರಸಾದಿವರ್ದ್ಧಿತಲಕ್ಷ್ಮೀ ನಿತ್ಯ ಪ್ರದಾಯಕಂ ಜಗತಿ॥

೨. ಶ್ರೀ ಮತ್ಸೇನಾಧಿನಾಥೋತ್ತಮ ನನಮಿತನಂ ರಕ್ಷಿಸುತ್ತಿರ್ಕ್ಕೆ ತಾರಾಸ್ತೋಮಂ
ನಿಲ್ವಂನೆಗಂ ನಾರದಮಸ್ಮಣರಸವ್ಯಕ್ತಗೀತಾಮ್ಮತಂ

೩. ಗೌರಿ ಮುಗ್ದಮನ್ದಸ್ಮಿತಮಧುರ ಕಟಾಕ್ಷಾಮ್ಮತಂ ದೇವರಾಜ ಪ್ರೇಮಸ್ತುತ್ಯಾದಿಸ-
ದ್ದಾಗಮ್ಮತ ನಮ್ಮತನಾಥಂ ತ್ರಿಳೋಕ್ಷೆಕನಾಥಂ॥ ಸಿರಿಯ-
--------------------------------
--------------------------------"[೧೫]

ಚಿತ್ರದುರ್ಗದ ಬಳಿಯ ಚಂದ್ರಪಳ್ಳಿ ಕಣಿವೆಯ ಬಳಿ ಒಂದು ಬಂಡೆಯ ಮೇಲೆ ಮಯೂರಶರ್ಮನ ಶಾಸನವನ್ನು ಕೊರೆದಿದೆ. ಅದರ ಕಾಲ ಸುಮಾರು ನಾಲ್ಕನೆಯ ಶತಮಾನ. ಇದರಲ್ಲಿ ಕದಂಬ ರಾಜವಂಶ ಸ್ಥಾಪಕನಾದ ಮಯೂರಶರ್ಮನು ಒಂದು ಕೆರೆಯನ್ನು ಕಟ್ಟಿಸಿದನೆಂದು ಹೇಳಿದೆ.

ಶಾಸನ ಪಾಠ ಈ ರೀತಿಯಲ್ಲಿದೆ-

"ಕದಂಬಾಣಂ ಮಯೂರಶಮ್ಮಣ ವಿನಿಮ್ಮಿ ಅಂ
ತಟಾಕಂ ಕುಟ ತೇಕೂಡ ಅಭಿರ ಪಲ್ಲವ ಪರಿ
ಯಾತಿಕ ಸಕಸ್ಥನ ಸಯಿನ್ದಕ ಪುನಾಡ ಮೊಕರಿಣ॥"[೧೬]

ಕ್ರಿ.ಶ. ೧೫೧೦ರ ಸಿಂಗನಾಯಕನಹಳ್ಳಿ ಶಾಸನವು ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ಸಮಯದಲ್ಲಿ ಸಿಂಗೆನಾಯಕನಹಳ್ಳಿ ಎಂಬ ಗ್ರಾಮವನ್ನು ವಿರೂಪಾಕ್ಷ ದೇವರಿಗೆ ದಾನ ನೀಡಿದ ವಿಷಯವನ್ನು ವಿವರಿಸುತ್ತದೆ. ದೇವರ ಅಮೃತಪದಿ ನೈವೇದ್ಯ, ಅಂಗರಂಗ, ವೈಭೋಗ, ಚೈತ್ರಮಾಸದ ರಥ ಉತ್ಸವ, ಮಕರ ಸಂಕ್ರಾಂತಿಯ ರಥ ಉತ್ಸವ, ನಿತ್ಯ ಉತ್ಸವ, ಪಕ್ಷ ಉತ್ಸವ, ಮಾಸ ಉತ್ಸವ, ಸಂವತ್ಸರ ಉತ್ಸವ, ನಿತ್ಯ ದೀಪಾರಾಧನೆಗೆ ಸಿಂಗೆನಾಯಕನಹಳ್ಳಿ ಗ್ರಾಮವನ್ನು ದಾನ ನೀಡಿ, ಆ ಗ್ರಾಮದ ಕಾಡಾರಂಭ, ನೀರಾರಂಭದಿಂದ ಬರುವ ಹಣದ ಆದಾಯ, ಭತ್ತಾದಾಯ, ಸುಂಕಕಟ್ಟೆ, ತಳವಾರಿಕೆ... ಮುಂತಾದ ಎಲ್ಲ ರೀತಿಯ ಆದಾಯವನ್ನು ವಿರೂಪಾಕ್ಷನಿಗೆ ಸಮರ್ಪಿಸಲಾಗಿದೆ. ಅಲ್ಲಿನ ಹನುಮಂತ ಗುಡಿಯ ಎಡಬದಿಯ ಬಂಡೆಯ ಮೇಲೆ ಈ ಶಾಸನವನ್ನು ಕೆತ್ತಲಾಗಿದೆ.

೧. "ಶ್ರೀ ವಿರೂಪಾಕ್ಷ ದೇವರ ಗ್ರಾಮ ಸಿಂಗೆನಾಯಕನಹಳ್ಳಿ.
೨. ಸ್ವಸ್ತಿ ಶ್ರೀ ಜಯಾದ್ಬುದಯ ಸಾಲಿವಾನ ಶಕವರುಷ ೧೪೩೧ ನೆಯ ಸುಕ್ಲ ಸಂವ
೩. ತ್ಸರದ ಮಾಘಸುಧ ೧೪ ಲು ಶ್ರೀಮಂನ್ ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀವೀರ ಪ್ರತಾಪ ಶ್ರೀವೀರಕ್ರು
೪. ಷ್ಣರಾಯ ಮಹಾರಾಯರು ಶ್ರೀ ವಿರೂಪಾಕ್ಷದೇವರಿಗೆ ಅಮ್ರುತಪದಿ ನಯಿವೇದ್ಯಕ ಅಂಗರಂಗ ವೈಭೋಗ ಚಯಿತ್ರ ಮಾ

---------------------------

---------------------------"[೧೭]

ಕ್ರಿ.ಶ. ೧೫೧೦ರ ಹಂಪಿ ಶಾಸನವು ಕೃಷ್ಣದೇವರಾಯನ ಅವಧಿಯ ಮೊಟ್ಟಮೊದಲ ಸಂಸ್ಕೃತ ಶಾಸನವಿದಾಗಿದೆ. ಅವನು ತನ್ನ ಪಟ್ಟಾಭಿಷೇಕದ ದಿವಸ ದೇವರ ಅಮ್ರುತಪಡಿ ನೈವೇದ್ಯಕ್ಕೆ ಸಿಂಗೆನಾಯಕನಹಳ್ಳಿ ಗ್ರಾಮವನ್ನು ದಾನ ನೀಡಿ, ಅದೇ ಸಮಯದಲ್ಲಿ ದೇವರ ಮುಂದಿನ ದೊಡ್ಡರಂಗಮಂಟಪ, ಅದರ ಮುಂದೆ ಗೋಪುರವನ್ನು, ಗುಡಿಯ ಮುಂದಿನ ದೊಡ್ಡ ಗೋಪುರವನ್ನು ಜೀರ್ಣೋದ್ಧಾರ ಮಾಡಿಸಿ, ದೇವರಿಗೆ ನವರತ್ನದಿಂದ ಕೂಡಿದ ಚಿನ್ನದ ಕಮಲವನ್ನು, ನಾಗಾಭರಣವನ್ನು ಮಾಡಿಸಿ, ದೇವರ ಪೂಜೆಗೆ ಒಂದು ಚಿನ್ನದ ಹರಿವಾಣ, ಎರಡು ಚಿನ್ನದ ಆರತಿ, ೨೪ ಬೆಳ್ಳಿಯ ಆರತಿಗಳನ್ನು ಮಾಡಿಸಿ ದಾನವಾಗಿ ನೀಡಿದ್ದಾನೆ.

**ಶಾಸನದ ಪಾಠ:**

೧. "ಶ್ರೀಕೃಷ್ಣದೇವರಾಯ ಶ್ರೀ
೨. ಶುಭಮಸ್ತು। ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ।
೩. ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ।
೪. ಕಲ್ಯಾಣಯಾಸ್ತು ತದ್ಧಾಮ ಪ್ರತ್ಸಹ ತಿಮಿರಾಪಹಂ। ಯುದ್ಧ ಜ್ಯೋಪ್ಯಗಜೋದ್ಯೋ

-----------------------------------

-----------------------------------"[೧೮]

ಕ್ರಿ.ಶ. ೧೫೧೦ರ ಲಿಂಗಾಪುರ ಶಾಸನವು ಕೃಷ್ಣದೇವರಾಯನ ತಂದೆ ನರಸಂಣನಾಯಕರು ತನ್ನ ಕೈಕೆಳಗಿನ ದಳವಾಯಿ ಗಂಡರಗೋಳ ನಾಯಕರ ಮಕ್ಕಳಿಗೆ ದಾನ

ನೀಡಿದ ವಿಷಯವನ್ನು ಒಳಗೊಂಡಿದೆ. ಶಾಸನದಲ್ಲಿ ಉಲ್ಲೇಖವಾಗಿರುವ ಗಂಡರಗೋಳಿ ನಾಯಕನ ಹೆಸರಿನಲ್ಲಿ ಅದೇ ತಾಲ್ಲೂಕಿನಲ್ಲಿ 'ಗಂಡರಗೂಳಿಮರ' ಎಂಬ ಗ್ರಾಮವೊಂದಿದೆ.

**ಶಾಸನದ ಪಾಠ**

೧. "ಶುಭಮಸ್ತು ಸ್ವಸ್ತಿಶ್ರೀ ಜ
೨. ಯಾಭ್ಯುದಯ ಶಾಲಿವಾ
೩. ಹನ ಶಕವರುಷ ೧೪೩೩
೪. ನೆಯ ಪ್ರಮೋದತ ಸಂವತ್ಸ
೫. ರದ ಕಾರ್ತಿಕ ಶು ೧೨ ಸೋ
೬. ಶ್ರೀಮನ್ ಮಹಾರಾಜಾಧಿರಾ
೭. ಜ ರಾಜ ಪರಮೇಶ್ವರ ಭಾಷೆ
೮. ಗೆತಪ್ಪದ ರಾಯರಗಂಡ
೯. ಮೂವರರಾಯರಗಂಡ ಪೊ
________________________".[೧೯]

ಕ್ರಿ.ಶ. ೧೫೧೦ರ ದೇವರಾಯನದುರ್ಗ ಶಾಸನದಲ್ಲಿ ಬಲಭದ್ರಯ್ಯನ ಮಗನಾದ ಲಕ್ಷ್ಮಯ್ಯನವರಿಗೆ ಅನೇಕ ಗ್ರಾಮಗಳಲ್ಲಿ ಭೂಮಿಯನ್ನು ದಾನ ನೀಡಿದ ವಿವರವಿದೆ. ಆದರೆ ಏತಕ್ಕೆ ದಾನ ನೀಡಲಾಯಿತೆಂಬ ವಿವರಗಳು ಲಭ್ಯವಿಲ್ಲ. ಕುರಪೇಲ, ಮುದ್ದಸಮುದ್ರ, ದಾಸರಹಳ್ಳಿ, ಗೋತೇನಹಳ್ಳಿ, ಮಾದಿನಾಯಕನಹಳ್ಳಿ, ಬಿಲೆಯಂಣನಹಳ್ಳಿ, ಮೈದಾತಿದ ಕೆರೆ, ಹಳಶಿನ ನಾಗನಹಳ್ಳಿ, ಪುಷ್ಪಾರಹಳ್ಳಿ, ಕಟ್ಟಿಗೆ ಹಳ್ಳಿ, ತಿಂಮನಹಳ್ಳಿಗಳ ಬಳಿ ಭೂಮಿಗಳನ್ನು ವೃತ್ತಿದಾನವಾಗಿ ನೀಡಿದ ವಿವರವಿದೆ. ಶಾಸನದ ಕೊನೆಯಲ್ಲಿ ಶ್ರೀ ರಾಮಭದ್ರ ಎಂಬ ಅಂಕಿತವಿದೆ.

**ಶಾಸನದ ಪಾಠ:**

೧. "ನರಸಿಂಗರಾಯರ್ಯೆಯನವರ ಕೊ
೨. ಮಾರ ಕೃಷ್ಣರಾಯನೈವರು ವಿಜಯ
೩. ನಗರದಲ್ಲಿ ಸಾಂಮ್ರಾಜ್ಯಂ ಗೈಯು
೪. ತ್ತಿರಲು ಬಲಭದ್ರಯ್ಯನ ಕೊಮಾರ ಲ

೫. ಕ್ಷ್ಮಯನವರಿಗೆ ಮಾರ್ಗಶಿರ ಶುದ್ಧ
೬. ಪೌರ್ನಮಾಸ್ಯದಲ್ಲೂ ಸೋಮೋಪರಾಗ
೭. ದಲ್ಲಿ ಕುರುವೇಶ ಗ್ರಾಮ। ಮುದ್ದಸ
೮. ಮುದ್ರದ ಗ್ರಾಮ। ದಾಸರಹಳ್ಳಿ ಗ್ರಾಮ। ಗೋಪೇನಹಳ್ಳಿ ಗ್ರಾ। ಮಾದಿ
೯. ನಾಯಕನಹಳ್ಳಿ ಗ್ರಾಮ। ಬಿಲೆಯಂಣ

-------------------------

-------------------------"[೨೦]

ಕ್ರಿ.ಶ. ೧೫೧೧ರ ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು 'ಹಂದ್ರಾಳು' ಗ್ರಾಮದ ರಂಗನಾಥ ದೇವಾಲಯದ ಅಂಗಳದ ಬಾವಿ ಬಳಿಯ ಶಾಸನವು ಕೃಷ್ಣದೇವರಾಯನಿಗೆ ಪುಣ್ಯವಾಗಲಿಯೆಂದು ಅವನ ಕೈಕೆಳಗಿನ ಅಧಿಕಾರಿ ಯೆಲ್ಲಪ್ಪನಾಯ್ಕರು ರಾಮನಾಯ್ಕನ ಹಳ್ಳಿ ಸೀಮೆಗೆ ಸೇರಿದ 'ಹಂದರಹಾಳು' ಗ್ರಾಮವನ್ನು ಅದೇ ಊರಿನ ತಿರುಮಲ ದೇವರಿಗೆ ಅಂಗರಂಗ ವೈಭೋಗ, ನೈವೇದ್ಯ, ನಂದಾದೀಪಕ್ಕಾಗಿ ದಾನವಾಗಿ ನೀಡಿದ ವಿಷಯವನ್ನು ಒಳಗೊಂಡಿದೆ.

**ಶಾಸನದ ಪಾಠ:**

೧. "ಶುಭಮಸ್ತು ಸ್ವಸ್ತಿಶ್ರೀ ಜಯಾ
೨. ಭ್ಯುದಯ ಶಾಲಿವಾಹನ ಶಕವರುಶ
೩. ಸಾವಿರದ ನಾನೂರಮುಂಮತ್ತೆಂಠನೆ
೪. ಯ ಪ್ರಮೋದತ ಸಂವತ್ಸರದ ಚಯಿತ್ರ
೫. ಶುಧ। ಲು ಶ್ರೀ ಮನ್ಮಹಾರಾಜಾ(ಧಿ) ರಾಜ ರಾ
೬. ಜ ಪರಮೇಶ್ವರ ಶ್ರೀವೀರ ಕೃಷ್ಣರಾಯ ಮಹಾ
೭. ರಾಯರ ಸಂಮ್ರಾಜ್ಯದಲು ಯೆಲ್ಲಪ್ಪನಾಯ್ಕ
೮. ರು ಹಂದರಹಾಳು ತಿರುಮಲ ದೇವರಿಗೆ ಕೊಟ್ಟಂಥ
೯. ಶಾಸನದ ಕ್ರಮವೆಂತೆಂದರೆ ರಾಯರು ನಮಗೆ ನಾ
೧೦. ಸೀಮೆಗೆ ಸಲುವ ಹಂದರಹಾಳ ಗ್ರಾಮವನು ಶ್ರೀ

--------------------------

--------------------------"[೨೧]

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಬುಕ್ಕಸಾಗರ ಗ್ರಾಮದ ಚಿನಲಪಟ್ಟೆ ಗದ್ದೆಯಲ್ಲಿರುವ ಗುಂಡಿನ ಮೇಲಿರುವ ಶಾಸನವು ಕೃಷ್ಣದೇವರಾಯನು ತನ್ನ ಆಳ್ವಿಕೆಯಲ್ಲಿ ಪ್ರಭಾಕರಭಟ್ಟನೆಂಬುವವನಿಗೆ ಬುಕ್ಕಸಾಗರ ಗ್ರಾಮದಲ್ಲಿ ಭೂಮಿಯನ್ನು ದಾನ ನೀಡಿದ ವಿಷಯವನ್ನು ಒಳಗೊಂಡಿದೆ.

**ಶಾಸನ ಪಾಠ:**

೧. "ಅಂಗೀರಸ ಸಂವತ್ಸರದ ಮಾಗ ಮಾಸದಲಿ
೨. ಶುಭಮಸ್ತು ಶ್ರೀ ಮಂಮ್ನಹಾರಾಜಾಧಿ
೩. ರಾಜ ರಾಜ ಪರಮೇಶ್ವರ ಶ್ರೀ ವೀರ ಪ್ರತಾಪ
೪. ಶ್ರೀ ಕೃಷ್ಣರಾಯ ಮಹಾರಾಯರು ಪ್ರಭಾರ
೫. ಭಟರಿಗೆ ಬುಕಸಾಗರದಲು ದಾರೆಯ ನರೆ
೬. ದು ಕೊಟದು ಖಂಡುಗದ ಮಾನ್ಯಯಿ ಮಾನ್ಯಕೆ
೭. ಆರೊಬರು ತಪಿದವರಿಗೆ ಕತೆಮಾಉಸ ಕಳಮಾಫೆ"[೨೨]

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ದೊಡ್ಡ ಬೂಟಕದ ಒಳಗೆರೆಪುರದ ಪಟೇಲ್ ಸುಬ್ಬಣ್ಣನವರ ಬಳಿಯಿದ್ದ ತಾಮ್ರ ಶಾಸನವು ಕೃಷ್ಣದೇರವರಾಯನು ಹೊಯ್ಸಳ ದೇಶದ, ವೆಲ್ಲೂರು ಸೀಮೆಯ ಹಿರಿಜಟ್ಟಿಗ ಎಂಬ ಗ್ರಾಮವನ್ನು ಶ್ರೀನಿವಾಸಾಧ್ವರಿ ಎಂಬ ಬ್ರಾಹ್ಮಣನಿಗೂ ಮತ್ತು ಇನ್ನಿತರ ಬ್ರಾಹ್ಮಣರಿಗೆ ಇಪ್ಪತ್ತು ವೃತ್ತಿಗಳನ್ನಾಗಿ ವಿಭಾಗಿನ ದಾನವಾಗಿ ನೀಡಿರುವುದನ್ನು ವಿವರಿಸುತ್ತದೆ. ಇದರ ಕಾಲ ಕ್ರಿ.ಶ. ಸು. ೧೫೧೨.

ಈ ಶಾನದಲ್ಲಿ ಶ್ರೀನಿವಾಸಾಧ್ವರಿಯನ್ನು ಶಾಸ್ತ್ರ, ಕಾವ್ಯ, ಪುರಾಣ.... ಮುಂತಾದವುಗಳಲ್ಲಿ ಪ್ರವೀಣನೂ ಮತ್ತು ಅತಿರಾತ್ರಯಾಗ ಮಾಡಿದವನೂ ಎಂದು ಬಣ್ಣಿಸಿದೆ. ಮೇಲ್ಕಂಡ ಹಿರಿಜಟ್ಟಿಗ ಗ್ರಾಮವನ್ನು ಚಿನ್ನದೇವೀಮರವೆಂದು ಮರುಹೆಸರಿಟ್ಟು ಶಿವಗಂಗೆಯ ಗಂಗಾಧರನ ಸನ್ನಿಧಿಯಲ್ಲಿ ದಾನ ನೀಡಿದ ವಿಷಯವಿದೆ. ದಾನ ಪಡೆದ ಬ್ರಾಹ್ಮಣರ ಗೋತ್ರ-ಸೂತ್ರಗಳನ್ನು ವಿವರವಾಗಿ ನಮೂದಿಸಲಾಗಿದೆ. ಜೊತೆಗೆ ಗ್ರಾಮದ ಗಡಿಯನ್ನು ತಿಳಿಸುವಲ್ಲಿ ದೊಡ್ಡಯ್ಯನಹಳ್ಳಿ-ಕುಪ್ಪೆ ಮಂಚನಹಳ್ಳಿ, ಚಿಕ್ಕಜಟ್ಟಿಗಹಳ್ಳಿ ಗ್ರಾಮಗಳನ್ನು ಉಲ್ಲೇಖಿಸಿದೆ. ಸಭಾಪತಿ ರಚಿಸಿದ ಈ

ಶಾಸನವನ್ನು ವೀರಣಾಚಾರ್ಯನ ಮಗನಾದ ಮಲ್ಲಗಾಚಾರ್ಯನು ಬರೆದನೆಂದು ಹೇಳಿದ್ದು, ಅವನಿಗೂ ಒಂದು ವೃತ್ತಿಯನ್ನು ನೀಡಲಾಗಿದೆ.

**ಶಾಸನದ ಪಾಠ:**

೧. "ಶುಭಮಸ್ತು ನಮಸ್ತುಂಗಶಿರಶ್ಚುಂಬಿಚಂದ್ರ ಚಾಮರಚಾರವೇ ತ್ರೈಲೋಕ್ಯನಗರಾರಂಭ
೨. ಮೂಲಸ್ತಂಭಾಯ ಶಂಭವೇ॥ ಹರೇರ್ಲೀಲಾವರಾಹಸ್ಯ ದಂಷ್ಟ್ರದಂಡಃ ಸಪಾತು ರ್ವ ಹೇಮಾದ್ರಿ
೩. ಕಲಶಾಯತ್ರ ಧಾತ್ರೀಚ್ಛತ್ರಶ್ರಿಯಂ ದಧೌ। ಕಲ್ಯಾಣಯಾಸ್ತುತದ್ಧಾಮ ಪ್ರತ್ಯೂಹತಿಮಿಹಾ ಪಹಂ।
೪. ಯದ್ಗಜೋಪ್ಯ ಗಜೋದ್ಭೂತಂ ಹರಿಣಾಪಿ ಚ ಪೂಜ್ಯತೇ। ಅಸ್ತಿ ಕ್ಷೀರಮಯದ್ದೇವೈರ್ಮಥ್ಯ ಮಾನಾನ್ಮ
೫. ಹಾಂಬುಧೇಃ ನವನೀತಮೀವೋದ್ಭೂತಮಪನೀತತಮೋ ಮಹಃ॥ ತಸ್ಸಾಸೀತ್ತನಯಸ್ತಪೋ
೬. ಭಿರುತಲ್ಗೆರನ್ವರ್ಥನಾಮಾ ಬುಧಃ ಪುಣ್ಯೈರಸ್ಯ ಪುರೂರವಾಃ ಭುಜಬಲ್ಲೆರಾಯಿರ್ದ್ವಿ
----------------------------------------------
----------------------------------------------"[೨೩]

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಹಂಪಿಯ ವಿಠಲ ದೇವರಾಯದ ರಂಗಮಂಟಪದ ದಕ್ಷಿಣ ದ್ವಾರದ ಬಲಗಡೆ ಶಾಸನವು ಕೃಷ್ಣದೇವರಾಯನು ತಂದೆ ನರಸಂಣ್ಣ ನಾಯಕನಿಗೂ ತಾಯಿ ನಾಗಾಜಿದೇವಿ ಅಮ್ಮನವರಿಗೂ ಪುಣ್ಯವಾಗಲೆಂದು ಸೂರ್ಯಗ್ರಹಣದ ದಿವಸ ಶ್ರೀ ವಿಠಲದೇವರಿಗೆ, ಅನೇಕ ರೀತಿಯ ಸೇವೆಗಳಿಗೆ ಮತ್ತು ಉತ್ಸವಗಳಿಗಾಗಿ ಹರಿಹರಪುರ, ಹೊಸಲೂರ ಮಾಗಣೆಯ ವಿರುಪಾಪುರ, ಮಳಲ ಕೊಡುಗೆವೊಳಗಿನ ಗದ್ದೆ, ಪಂಚಕ ಸೀಮೆಯೊಳಗಣ ಗೋಪಿಸೆಟಿಹಳ್ಳಿಗಳ ಸಕಲ ಆದಾಯವನ್ನು ದಾನವಾಗಿ ನೀಡಿದ ವಿಷಯವನ್ನು ಒಳಗೊಂಡಿದೆ. ಇಷ್ಟೇ ಅಲ್ಲದೇ ಕೃಷ್ಣದೇವರಾಯನ ಪಟ್ಟದೇವಿಯರಾದ ಚಿಂನ್ನಾದೇವಿ ಅಂಮ್ಮನವರು ಮತ್ತು ತಿರುಮಲದೇವಿ ಅಂಮ್ಮನವರು ಶ್ರೀ ವಿಠಲದೇವಿಗೆ ಗೋಪುರಗಳನ್ನು ಕಟ್ಟಿಸಿ, ದೇವರ ಪೂಜೆಗಾಗಿ ಚಿನ್ನದ ಹರಿವಾಣ, ಬೆಳ್ಳಿಯ ನೀಲಾಂಜನದ ಹಲಗೆ, ಹಿರಿಯ ಆರತಿ, ಪ್ರತಿಮೆ ಆರತಿ, ಪುರುಪಾಮ್ಮಗದ ಆರತಿ ಮತ್ತು ಮೂವತ್ತು ಹಸುಗಳನ್ನು ದಾನವಾಗಿ ನೀಡಿರುವರು.

**ಶಾಸನದ ಪಾಠ:**

೧. "ಶ್ರೀ ವಿಠಲದೇವರು

೨. ಸ್ವಸ್ತಿ ಶ್ರೀ ವಿಜಯಾಧ್ಯುದಯ ಶಾಲಿವಾಹನ ಶ

೩. ಕ ವರುಷ ೧೪೩೫ನೆಯ ಶ್ರೀಮುಬ ಸಂವಥರದ

೪. ಚಯಿತ್ರ ಶುಧ ಪಂಚಮಿ ವಾರದಲ್ಲೂ ಶ್ರೀ

೫. ಮಂನುಮಹಾರಾಜಾಧಿರಾಜ ರಾಜಪರಮೇಶ್ವ

------------------------

------------------------"[೨೪]

ಮಹಾರಾಷ್ಟ್ರದ ಮಂಗಳವೇಡೆದಲ್ಲಿ ದೊರೆತ ಶಾಸನದ ಕಾಲ ಕ್ರಿ.ಶ. ೧೦೫೨. ಮಹಾಮಂಡಳೇಶ್ವರ ಕನ್ನಪ್ಪಯ್ಯರಸರು ಭೋಗೇಶ್ವದೇವಿಗೆ ಐವತ್ತು ಮತ್ತರು ಭೂಮಿಯನ್ನು ದಾನ ನೀಡಿದ ವಿವರವಿದೆ. ಕಳಚೂರಿ ಕನ್ನಮನನ್ನು ಕನ್ನಪ್ಪಯ್ಯರಸರು ಎಂಬುದಾಗಿ ಶಾಸನ ಉಲ್ಲೇಖಿಸಿದೆ.

೧. "ಶ್ರೀಮನ್ಮಹಾಮ

೨. ಣ್ಡಳೇಸ್ವರ [ಕನ್ನ]

೩. ಪಯ್ಯರಸ (೦)ರ್ ನ

೪. ನ್ದನ ಸಂವತ್ಸರದ

೫. ಕಾರ್ತ್ತಿಕದ ಮಾವಾಸ್ಯೆ

೬. ವಡ್ಡವಾರು ಸೂರ್ಯ

೭. ಗ್ರಹಣದೊಳ್ ಭೋಗೇ

೮. ಶ್ವರಕೆ ಬಿಟ್ಟ (ನೆ)ಲ

೯. ಮತ್ತರ

೧೦. ಯ್ವೆತ್ತು"[೨೫]

ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಉಚ್ಚಂಗಿದುರ್ಗದ ಚಿಕ್ಕಹೊಂಡದ ಹತ್ತಿರದ ಶಿವದೇವಾಲಯದ ಸಮೀಪದಲ್ಲಿರುವ ಶಾಸನದ ಕಾಲ, ಕ್ರಿ.ಶ. ೧೦೬೪. ಇದು ಚಾಲುಕ್ಯ ತ್ರೈಲೋಕಮಲ್ಲನ ಆಡಳಿತವನ್ನು ತಿಳಿಸುತ್ತದೆ. ಮೆಂಡಳೇಶ್ವರರಾದ ನಯ್ಯನದಂಡ, ವಿಷ್ಣುವರ್ಧನ ಮಹಾರಾಜ. ವಿಜಯಾದಿತ್ಯ ದೇವರು ಆಡಳಿತ ನಡೆಸುತ್ತಿರುವುದನ್ನು

ಉಲ್ಲೇಖಿಸಿದೆ. ಮಹಾಮಂಡೇಶ್ವರ ಬಿಜ್ಜಳ ದೇವರಿಗೆ, ಸೋಳವಾಳ ಮಾರಮಯ್ಯನು ಭಿನ್ನಪ ಮಾಡಿ ಮಾರೇಶ್ವರ ದೇವರಿಗೆ, ಪಂಚಮಠಸ್ಥಾನದ ಖಳೇಶ್ವರ ಪಂಡಿತಂ ಪಾದಪೂಜೆ ಮಾಡಿ, ದಾನ ನೀಡಿದ ವಿವರವು ತಿಳಿಯುತ್ತದೆ.

೧. "[೦] ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀ ಪೃಥ್ವೀವಲ್ಲಭ [೦] ಮಹಾರಾಜಾ[ಧಿ] ರಾಜ ಪರಮೇ [೦]
೨. ಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀ
೩. ಮುತ್ತ್ರೈಳೋಕ್ಯಮೆಲ್ಲದೇವರ ವಿಜೆಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧ
೪. ಮಾನಮಾಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ತತ್ಪಾದಪದ್ಮೋ [ಪ]ಜೀವಿ॥
-----------------------------
-----------------------------"[೨೬]

ಕ್ರಿ.ಶ. ೧೦೬೭ರ ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಚಡಚಣದ ಪರಮಾನಂದ ದೇವಾಲಯದ ಪ್ರಾಕಾರದ ಗೋಡೆಯಲ್ಲಿರುವ ಶಾಸನದಲ್ಲಿ ಮಹಾಮಂಡಳೇಶ್ವರ ಕನ್ನಮ್ಮರಸರು ಮಂಗಳವೇಡೆಯಲ್ಲಿ ಆಳುತ್ತಿರುವುದನ್ನು ಪ್ರಸ್ತಾಪಿಸುತ್ತದೆ. ರಾಜಧಾನಿಯೆನಿಸುವ ಚ(ಟೆ) ತಾಣದ ಪ್ರಭುರಾಜ ಚಟ್ಟನ ಪುತ್ರ ಪ್ರಭುದಾಸನು ಚಟೆತಾಣವನ್ನು ದಾನವಾಗಿ ನೀಡಿದ ವಿವರವಿದೆ.

೧. "ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಣ್ಡಳೇಸ್ವರ ಮಲಯ
೨. ಮಣ್ಡಳಿಕ ಮದನಮಹೇಸ್ವರಂ ಕಳಿಂಗವೆಂಗಿಭುಜಂಗವೈನ
೩. ತೇಯನ ಹಿತಕೌಂತೇಯ ಲಾಳಚೋಳ ಬಳಜಳಧಿಬಡವಾನ
೪. ಳ ದ್ರೋಹಕಾಳಾನಕ ನಿರತಿಶಯಲಕ್ಷ್ಮೀ ಮನೋರಜಂನ ಸತ್ರು [ಮ]
೫. ದಭಂಜನ ನಾಮಾದಿಸಮಸ್ತ ಪ್ರಸಸ್ತಿಸಹಿತಂ ಶ್ರೀಮನ್ಮಹಾಮ [ಣ್ಡ]
೬. ಳೇಸ್ವರಂ ಕನ್ನಮರಸರ್ ಮಂಗಳಿವೇಡದಲು ಸುಖಸಂಕಥಾವಿನೋದ [ದಿಂ]
೭. ರಾಜ್ಯಂಗೆಯ್ಯುತ್ತಮಿರೆ ತತ್ಪಾದಪದ್ಮೋಪಜೀವಿ ಸಮಸ್ತಗುಣ
----------------------------------------
----------------------------------------"[೨೭]

ಕ್ರಿ.ಶ. ೧೦೬೯ರ ಮಹಾರಾಷ್ಟ್ರದ ಭಂಡಾರಕವತೆಯ ಮಾರುತಿ ದೇವಾಲಯದ ಹಿಂಬದಿಯಲ್ಲಿ ದೊರೆತ ಶಾಸನವು ಕಳಚೂರಿ ದೊರೆ ಮಹಾಮಂಡಳೇಶ್ವರ ಅಮ್ಮುಗಿ ದೇವನ

ಕಾಲದ್ದಾಗಿದೆ. ಅಣಂದೂರು ೩೦೦೦ ರೊಳಗಣ, ಮಂದುರ್ವ್ವ ೩೦ರ ಬಳಿಯ ಭಡದ ಭಂಡಾರಗೌಟಗೆಯಲ್ಲಿ ನಾಗರ ಮುದ್ದಗಾವುಂಡ, ಮೇಲಾಳಿಕೆಯ ಮನ್ನೆಯರು ಮೊದಲಾದವರು ಸೇರಿ ನಾಗೇಶ್ವರ ದೇವಾಲಯಕ್ಕೆ ವಿವಿಧ ರಿತಿಯ ದಾನಗಳನ್ನು ನೀಡಿದ ವಿವರವಿದೆ. ದೇವಾಲಯದ ಆಚಾರ್ಯ ಬ್ರಹ್ಮರಾಶಿ ಪಂಡಿತರಿಗೂ ದಾನ ನೀಡಿದ ವಿವರವಿದೆ.

೧. "ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಳೋಕ್ಯ ನಗರರಾಂಭ ಮೂಲಸ್ತಂ
೨. ಭಾಯ ಸಂಭವೇ॥... ಖಂಡಳ.... ಯೆತು...... ನಖಮಂಡನಂಖರ.....
೩. ಶೇಖರಿಭೂತಂ ನಮಸ್ತಸ್ತೈಸ್ವಯ್ವಂಭುವೇ॥ ಸ್ವಸ್ತಿ ಸಮಧಿಗತ ಪಂಚಾಮಪಾನಬ್ದ ಮ
೪. ಹಾಮಣ್ಡಳೇಸ್ವರ ಕಾಳಾಂಜರಮರವರಾಧೀಸ್ವರ ಸುವರ್ಣ್ನವ್ರಿಶಭಧ್ವಜಂ ಡಮರುಗತೂರ್ಯ್ಯ
೫. ನಿರ್ಗ್ಘೋಶಣಂ ಕಳತುರಿಯ ಕುಳತಿಳಕಕಮಳ ಮೊರ್ತ್ತಣ್ಡ ಕದನ ಪ್ರಚಂಡ ಮಾನಕನಕಾಚಳ ಸುಭ
೬. ಟರಾದಿತ್ಯಂ ಕಲಿಗಂ ಕುಸಂ ಗಜಸಾಮಂತ ಸರಣಾಗತ ವಜ್ರಾಪಂಜರ ಪ್ರತಾ
೭. ಪಲಂಕೇಸ್ವರ ವೊರೀಭಕಂಠೀರವ ನಿಸ್ಸಂಕಮಲ್ಲ ರಾಯರಾಚಾರ್ಯ್ಯರಾಯ ಸಮುದ್ಧ
೮. ರಣ ನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ ಶ್ರೀಮನು ಮಹಾಮಂಡಳೇಸ್ವರ ಅಮ್ಮ
--------------------------------------------
--------------------------------------------"[೨೮]

ಕ್ರಿ.ಶ. ೧೧೮೦ರ ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ನಿಂಬರಗಿ ಮಹದೇವ ದೇವಾಲಯದಲ್ಲಿನ ಎರಡನೆಯ ಶಾಸನವು ಕಳಚೂರಿ ವಂಶದ ದೊರೆ ಅಮ್ಮರಸ ಅಥವಾ ಅಮ್ಮುಗಿದೇವನ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಎಳ್ಳನಿಂಬರಿಗೆಯ ಮೂಲಿಗ ನಾಗಗಾವುಂಡನ ಉಲ್ಲೇಖವಿದೆ. ಭೋಗಗಾವುಂಡನೆಂಬುವನು ನಿಂಬರಿಗೆಯಲ್ಲಿ ನೇಮಿನಾಥ ಬಸದಿ ನಿರ್ಮಿಸಿದ್ದನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಕೊಂಡಕುಂದಾಚಾರ್ಯ ಮೂಲಸಂಘ, ದೇಶಿಗಣ, ಪುಸ್ತಕಾನ್ವಯದ ಗುರು ಪರಂಪರೆಯ ಮುನಿಗಳ ಹೆಸರು ಉಲ್ಲೇಖವಾಗಿದೆ. ಮಹಾಮಂಡೆಳೇಶ್ವರ ಅಮ್ಮರಸನು ನೇಮಿನಾಥ ದೇವರ ಬಸದಿಗೆ ದಾನ ನೀಡಿದ ವಿವರವಿದೆ.

೧. "............. ಅಮ್ಮರಸ .........

೨. ಸ್ವಸ್ತ್ಯ ನವರತ ಪರಮಕಲ್ಯಾಣಾಷ್ಠ ಮಹಾಪ್ರ......

೩. ....... ಗವಡಹಾತ್ವಾರಮೇಶ್ವರ ಪರಮಭಟ್ಟಾರಕ ಮಹಾಭಿಷವಣ ನಿಮ್ಮ ......

೪. ವಿಮಳ ಗುಣಗಣೋತ್ತುಂಗ ಆಹಾರಾಭಯ ಭೈಷಜ್ಯಶಾಸ್ತ್ರ...... ವಿನೋ.....

೫. ....... ಕವನಿರತ ಸುಖಫಳಿತಲಶಿತ ಮಾಕಂದ। ಪರಾಂಗನಾಕಂದ। ರಿಪಬುಳ ಘನಾಘನೌಘ

..............................................................

.............................................................."[೨೯]

ಕ್ರಿ.ಶ. ೧೦೮೨ರ ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ತೀರ್ಥದ ರಾಮಲಿಂಗ ಮಂದಿರದ ಗರ್ಭಗೃಹ ಸಮೀಪದಲ್ಲಿಟ್ಟಿರುವ ಕಂಬದ ಭಾಗದಲ್ಲಿಯ ಶಾಸನವು ತ್ರಿಭುವನಮಲ್ಲ ನಾಲ್ಕನೇ ಸೋಮೇಶ್ವರನ ಆಡಳಿತ ಕಾಲದಲ್ಲಿ ಮಹಾಮಂಡಳೇಶ್ವರನಾದ ಜೋಗಮರಸನು ವಿದುಳಸಕ್ತಿಪಣ್ಡಿತ ದೇವರಿಗೆ ಅಣಂದೂರು ೩೦೦ ಕುಂಪಣ ಕುಂಬರಿಗಾವೆಯ ತೀರ್ಥವೊಂದರಲ್ಲಿ ರಾಮೇಶ್ವರ ದೇವರಿಗೆ ತ್ರಿಭೋಗಾಭ್ಯಂತರ ಸಿದ್ಧಿಯಿಂದ ದಾನ ನೀಡಿದ್ದನ್ನು ದಾಖಲಿಸಿದೆ.

೧. "ೀ ನಮಸ್ತುಂಗಸಿರಸ್ತುಂಗ ಚಂದ್ರಚಾಮರಜಾ

೨. ರವೇ। ತ್ರೈಶೋಕ್ಯನಗರಾರಂಭ (೧) ಮೂಲಸ್ತಂಭಾ

೩. ಯ ಶಂಭವೇ।

೪. ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವೀ [ವಲ್ಲಭ]

೫. ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾ [ರಕಂ]

೬. [ಸ] ತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ [ಶ್ರೀ]

೭. [ಮತ್ರಿ] ಭುವನಮಲ್ಲದೇವರ ವಿಜಯರಾಜ್ಯ ಮುತ್ತರೋ

೮. [ತ್ತರಾಭಿವ್ರಿ] ದ್ಧಿ ಪ್ರವರ್ದ್ಧ ಮಮಾನಮಾಚಂದ್ರಾ....

೯. ...... ಲುತ್ತಿರೆ ರಾಜಧಾನಿ ಕಲ್ಯಾಣದ......

೧೦. ಸಂಕಥಾವಿನೋದದಿಂ ರಾಜ್ಯಂಗೆಯುತ್ತಮಿರೆ॥

___________________________

___________________________"[೩೦]

ಕ್ರಿ.ಶ. ೧೦೯೨ರ ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ಅಕ್ಕಲಕೋಟೆಯ ಅರಮನೆ ಆವರಣದಲ್ಲಿ ದೊರೆತ ಎರಡನೆಯ ಶಾಸನವು ಚಾಲುಕ್ಯ ದೊರೆ ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಈವರೆಗೆ ಲಭ್ಯವಾದ ಶಾಸನಗಳಲ್ಲಿ ಇದು ಆರನೇ ವಿಕ್ರಮಾದಿತ್ಯನ ಸಾಮಂತ ದೊರೆ ಕಳಚೂರಿ ವಂಶದ ಮಹಾಮಂಡಳೇಶ್ವರ ಜೋಗಮರಸನಿಗೆ ಸಂಬಂಧಿಸಿದ ಮೊದಲ ಶಾಸನವಾಗಿದೆ. ಮಹಾಮಂಡಳೇಶ್ವರ ಜೋಗಮರಸ ಹಾಗೂ ಶಿಲಾಹಾರ ವಂಶದ ಮಹಾಮಂಡಳೇಶ್ವರ ಕವಿಲಾಸರಸ ಮತ್ತು ಹಂದೆಕ್ಕಾಡಿಯ ಪ್ರಭುಚಂದ್ರಾದಿತ್ಯ ಮತ್ತು ಅವನ ಮಗ ಮಲ್ಲರಸ ಮೊದಲಾದವರು ಸೇರಿ ಹಂದೆಕ್ಕಾಡಿಯ ಚಂದ್ರೇಶ್ವರ ದೇವರಿಗೆ ದಾನ ನೀಡಿದ ವಿವರವಿದೆ. ಕಳಚೂರಿ ದೊರೆ ಜೋಗಮನು ಚಾಲುಕ್ಯರ ಸಾಮಂತನಾಗಿ ಮಂಗಳವೇಡದಿಂದ ರಾಜ್ಯಭಾರ ಮಾಡುತ್ತಿದ್ದುದು ತಿಳಿಯುತ್ತದೆ. ಕಳಚೂರಿಗಳ ಮೊದಲ ರಾಜಧಾನಿ 'ಮಂಗಳವೇಡ' ಆಗಿತ್ತು. ಮತ್ತು ಚಾಲುಕ್ಯರೊಂದಿಗೆ ಒಳ್ಳೆಯ ಸಂಬಂಧವನ್ನು ಇಟ್ಟುಕೊಂಡಿದ್ದರೆಂಬುದನ್ನು ಈ ಶಾಸನವು ತಿಳಿಸುತ್ತದೆ.

೧. "ಶ್ರೀ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ। ತ್ರೈಶೋಕ್ಯ ನಗರಾರಂಭ
೨. ಮೂಳ ಸಂಭ್ರಾಯ ಶಂಭವೇ॥ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ
೩. ಪೃಥ್ವೀವಲ್ಲಭಂ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸ
೪. ತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲ
೫. ದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧ ಮಾನಮಾ ಚಂದ್ರಾ
೬. ರ್ಕ್ಕತಾರಂ ಸಲುತ್ತ ಕಲ್ಯಾಣದ ನೆಲೆವೀಡನೊಳು ಸುಖಸಂಕಥಾ ವಿನೋದದಿಂ ರಾಜ್ಯಂಗೆ
೭. ಯ್ಯುತ್ತುಮಿರೆ ತತ್ಪಾದ ಪದ್ಮೋಪಜೀವಿ ಸಮದಾಗತ ಪಞ್ಚಮಹಾಶಬ್ದ ಮಹಾಮಣ್ಡಳೇ
೮. ಶ್ವರಂ ಕಾಳಾಂಜರ ಪುರವರಾಧೀರ್ಶವರಂ ಸುವರ್ಣ್ನ ವ್ರಷಭಧ್ವಜಂ ಡಮರುಗತೂರ್ಯ್ಯ ನಿರ್ಗ್ಘೋ
೯. ಶರಣಂ ಕಳಚೂರಿಕುಳಕಮಳ ಮಾರ್ತ್ತಣ್ಡಂ ಕದನಪ್ರಚಣ್ಡ॥ ಮಾಸಕನಕಾಚಳಂ ಸುಭಟರಾ
೧೦. ದಿತ್ಯಂ ಕಲಿಗಳಂಕುಶಂ ಗಜಸಾಮಸ್ತ ಶರಣಾಗತ ವಜ್ರಪಂಜರಂ ಪ್ರತಾಪ ಲಂಕೇಶ್ರಂ

-------------------------------

-------------------------------"[೩೧]

ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಶಿರೋಳದ ಕ್ರಿ.ಶ. ೧೧೩೪ರ ಶಾಸನವು ಹಿರಿಯ ಅಗ್ರಹಾರ ಜಮಖಂಡಿಯ ೪೦೦ ಜನರು, ಶಿರೋಳ ಗ್ರಾಮದ ಹೊರಗಿರುವ ನಾಗೇಶ್ವರ ದೇವಾಲಯಕ್ಕೆ ನಿವೇಶನ ಹಾಗೂ ವಿವಿಧ ದಾನಗಳನ್ನು ನೀಡಿದ ವಿಷಯವಿದೆ. ಸಿರಿವೊಳಲ, ಸೇನಬೋವ, ವಿಶ್ವನಾಥದೇವ, ಹೊದ್ದಿಯರ ಹೊಲ್ಲಗಾವುಂಡ, ಸಮಸ್ತ ಒಕ್ಕಲು, ಹೆಗ್ಗಡೆ ಮಾರಣ, ಮಾಲಗಾರರಿಬ್ಬರು, ಸೂಳೆಯರು, ಸೆಟ್ಟಿಯರು ತಂಬುಲಿಗರು..... ಮುಂತಾದವರು ಚೈತ್ರ ಪವಿತ್ರ ಕಾರ್ಯಕ್ಕಾಗಿ ದಾನ ನೀಡಿದ ಪ್ರಸ್ತಾಪವಿದೆ. ಬಿಜ್ಜಳ ತಾನು ಮಹಾಮಂಡಳೇಶ್ವರನಾಗಿದ್ದಾಗಲೇ 'ಕಳಚೂರಿ ಚಕ್ರವರ್ತಿ ವೀರ ಬಿಜ್ಜಳದೇವ' ಎಂದು ಹೇಳಿಕೊಂಡಿರುವ ಸಂಗತಿ ಮೊದಲಿಗೆ ಈ ಶಾಸನದಿಂದ ತಿಳಿದು ಬರುತ್ತದೆ.

೧. "ಸ್ವಸ್ತಿ [॥] ಶ್ರೀ ನಮಸ್ತುಂಗ ಶಿರಚುಂಬಿತ ಚಂದ್ರಚಾಮರ ಚಾರವೇ। ತ್ರೈಲೋಕ್ಯನಗರಾ
೨. ರಂಭ ಮೂಲಸ್ತಂಭಾಯ ಶಂಭವೇ ॥ ಸ್ವಸ್ತಿ [॥] ಸಮಸ್ತ ಭುವನಾಶ್ರಯ ಶ್ರೀಪ್ರಿಥ್ವೀವ
೩. ಲ್ಲಭ ಮಹಾರಾಜಾಧಿರಾಜ ಕಾಳಾಂಜರ ಮೆರವರಾಧೀಶ್ವರ ಸುವ[ರ್ಣ್ಣ]
೪. ವ್ರಿಷಭಧ್ವಜ ಡಮರುಗ ತೂರ್ಯ್ಯ ನಿರ್ಘೋಷಣ ಕದನ ಪ್ರಚಂಡ ಸುಭಟರಾದಿತ್ಯ
೫. ಕಲಿಗಳಂಕುಸ ಚಲದಂಕರಾಮ ಸಾಹಸೋತು (ತ್ತು)ಂಗ ನಾಮಾದಿ ಸಮಸ್ತ ಪ್ರಶಸ್ತಿ ಸ
೬. ಹಿತಂ ಶ್ರೀಮತು ಕಳಚುರ್ಯ್ಯ ಚಕ್ರವರ್ತ್ತಿ ವೀರಬಿಜ್ಜಲದೇವ ಸುಖಸಂಕತಾ
೭. ವಿನೋದದಿಂದಿರೆ। ಸ್ವಸ್ತಿ [॥] ಯಮನಿಯಮನಸ್ವಾಧ್ಯಾಯ [ಧ್ಯಾ]ನ ಧಾರನಮೋನಾನು
೮. ಷ್ಠಾನ ಜಪ ಸಮಾಧಿ ಶೀಲಗುಣಸಂಪಂನರುಂ ಯಜನಯಾ [ಜ]ನಾಧ್ಯಯನಧ್ಯಾಪನ
೯. ದಾನ ಪ್ರತಿಗ್ರಹ ಷಟ್ಕರ್ಮ್ಮ ನಿರತರೌಪಾಸನಾಗ್ನಿಹೋತ್ರ ದ್ವಿಜಗುರುದೇವ
೧೦. ತಾ ಪೂಜಾತತ್ವರರುಂ ಮಾರ್ತ್ತಂಡೋಜ್ಜಳ ಕೀರ್ತ್ತಿಯುತರುಂ ಸ[ಕ]ಳಶಾಶಾಸ್ತ್ರ ಪ್ರವೀಣರುಂ

------------------------------------

------------------------------------"೩೨

ಕ್ರಿ.ಶ. ೧೧೩೬ರ ಮಹಾರಾಷ್ಟ್ರದ ಸೊಲ್ಲಾಪುರದ ಬುಧವಾರ ಪೇಟೆ ಬಳಿ ದೊರೆತ ಶಾಸನ ಮಹಾಮಂಡಳೇಶ್ವರ ಬಿಜ್ಜಲದೇವರಸನು ಹಾನುಗಲ್ಲ ಕೋಟೆಯ ಮೇಲೆ ದಾಳಿ ಮಾಡಿ, ಮಾಂಡಳಿಕ ಮಸಣೆಯನನ್ನು ಸದೆ ಬಡೆದು, ಕಪ್ಪವನ್ನು ಪಡೆದಿರುವುದನ್ನು ದಾಖಲಿಸುತ್ತದೆ. ತನ್ನ ಮಹಾಪ್ರಧಾನ ಕನ್ನಪ್ಪಯ್ಯ ನಾಯಕನ ವಿನಂತಿಯ ಮೇರೆಗೆ ಬಿಜ್ಜಳದೇವನು ಕನ್ನಪ್ಪಯ್ಯ ನಾಯಕ ಸೊನ್ನಲಿಗೆಯಲ್ಲಿ ಕಟ್ಟಿಸಿದ ಶ್ರೀ ಕನ್ನೇಶ್ವರ, ಚಟ್ಟೇಶ್ವರ, ಮಲ್ಲಿಕಾರ್ಜುನ ಎಂಬ ತ್ರಿಕೂಟ

ಶಿವಾಲಯಕ್ಕೆ ದಾನ ನೀಡಿದ ವಿವರವಿದೆ. ಬಿಜ್ಜಳ ಸ್ವತಂತ್ರನಾಗುವುದಕ್ಕೆ ಮೊದಲೇ ಮಹತ್ವಾಕಾಂಕ್ಷಿಯೂ, ಪ್ರಬಲನೂ ಆಗಿದ್ದು, ಅನೇಕ ದಂಡಯಾತ್ರೆಗಳ ನೇತೃತ್ವವನ್ನು ವಹಿಸಿದ್ದನೆಂಬುದು ಈ ಶಾಸನದಿಂದ ತಿಳಿದುಬರುತ್ತದೆ.

೧. "ಶ್ರೀ ಶ್ರೀ ಶ್ರೀ ಮಚ್ಚಾಳುಕ್ಯ ಸರ್ವ್ವಜ್ಞ ಚಕ್ರವರ್ತ್ತಿ ಹತ್ತನೆಯ ರಾಕ್ಷಸಿ ಸಂ
೨. ವತ್ಸರದ ಮಾಘ ಪುಣ್ಣಮೆ ಸೋಮವಾರದಂದು ಸೋಮಗ್ರಹಣ ನಿಮಿತ್ತಂ ಶ್ರೀ
೩. ಮನು ಮಹಾಮಣ್ಡಳೇಸ್ವರಂ ಬಿಜ್ಜಲದೇವರಸರು ಹಾನುಗಲ್ಲ ಕೋಟೆಯಲು
೪. ಮಣ್ಡಲಿಕ ಮಸಣೆಯನನಾಕ್ರಮಿಸಿ ಕಪ್ಪವಂ ಕೊಂಡು ಸುಖ
೫. ಸಂಕಥಾವಿನೋದದಿಂದ ಶ್ರೀಮೆನು ಮಹಾಪ್ರಧಾನಂ ಶ್ರೀಕರಣಂ ಕನ್ನ
೬. ಪಯ್ಯನಾಯಕಂ ಬಿನ್ನವಿಸಲು ಶ್ರೀಮದರಸರು ಸವಿಸ್ತರದಿಂದ ದಿಬ್ಯಚಿತ್ತ
೭. ದೊಳವಧಾರಿಸಿ ಕೇಳ್ದು ನಿಂನೂರು ಸೊನ್ನಲಿಗೆಯಲಿ ಕಟ್ಟಿಸಿದ ಶ್ರೀ ಕನ್ನೇ
೮. ಸ್ವರ ಚಟ್ಟೇಶ್ವರ ಮಲ್ಲಿಕಾರ್ಜ್ಜುನ ತ್ರಿಕೂಟ ಶಿವಾಲಯಕ್ಕೆ ಹಾರುವ
೯. ಕೋಲಲು ನೂರು ಮತ್ತರು ಕೆಯ್ಯಂ[ಕೊಂಡು] ಪುರೋಹಿತರಿಂ ಕಾಲಂ
೧೦. ಕರ್ಚ್ಚಿಸಿ ಶ್ರೀಮದರಸರು ತಮ್ಮ ಹಸ್ತದಿಂದ ಧಾರೆಯನೆರೆಯಲು ಸ್ವಸ್ತಿ ಮಹಾಪ್ರಸಾ
-----------------------------------
-----------------------------------"[೩೩]

ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ನಂದರಗಿ ಗ್ರಾಮದ ಸರ್ವೆ ನಂ. ೧೧೫ ರಲ್ಲಿರುವ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಹದಿನೆಂಟು ಗೇಣಿನ ಕೋಲಿನಲ್ಲಿ ಅಳೆದು ನೂರು ಮತ್ತರು ಭೂಮಿಯನ್ನು ನಂದರಗಿಯ ದಾವಪೇಶ್ವರ ದೇವರಿಗೆ ಬಿಜ್ಜಣನು ದಾನ ನೀಡಿದ ವಿಚಾರವಿದೆ.

೧. "ಶ್ರೀಮನ್ಮಹಗಾಮಣ್ಯಳೇಶ್ವರಂ ಬಿಜ್ಜಲ
೨. ದೇವರಸರು ನನ್ದುರಗೆಯ
೩. ದಾವಪೇಶ್ವರದೇವರ್ಗ್ಗೆ ಪದಿ
೪. ನೆಂಟು ಗೇಣ ಕೋಲಲಳೆದು ಕೊಟ್ಟ
೫. ಮತ್ತರು ನೂರು ೧೦೦ ಮಂಗಳ
೬. ಮಹಾಶ್ರೀ [॥]"[೩೪]

ಕ್ರಿ.ಶ. ೧೧೫೭ರ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಂದ ಶಿಲಾಶಾಸನವು ಪ್ರಾರ್ಥನೆಯೊಂದಿಗೆ ಆರಂಭವಾಗಿ ಚಾಲುಕ್ಯ ವಂಶಾವಳಿಯನ್ನು ಪ್ರಶಸ್ತಿಯೊಂದಿಗೆ ಕಾವ್ಯಮಯವಾಗಿ ಪ್ರಸ್ತಾಪಿಸಿದೆ. ರೇಚರನೆಂಬುವನಿಂದ ಕೇಳಿದ ಮಾತಿನಿಂದ ಪ್ರೇರೇಪಿತನಾಗಿ ಸ್ಥಾನುಗೂಡಹಳ್ಳಿಯ (ತಾಳಗುಂದ) ಪರಮೇಶ್ವರ ದೇವರಿಗೆ ೩೨೦೦೦ ಬ್ರಾಹ್ಮಣರು ಹಾಗೂ ಮತ್ತಿತರ ಅಧಿಕಾರಿಗಳ ಸಮ್ಮುಖದಲ್ಲಿ ಬನವಾಸಿ ಸಹಸ್ರದ ನಾಗರಖಂಡ ಎಪ್ಪತ್ತರ ಹಿರಿಯ ತಗುಲಟ್ಟಿಯನ್ನು ದಾನವನ್ನಾಗಿ ನೀಡಿದ ವಿಷಯ ತಿಳಿಯುತ್ತದೆ. ದೇವಾಲಯದ ಇತರ ಕಾರ್ಯಗಳಿಗೆ, ನಂದಾದೀವಿಗೆ, ನೈವೇದ್ಯ.... ಮುಂತಾದವುಗಳಿಗೆ ದಾನ ನೀಡಿರುವುದನ್ನು ಪ್ರಸ್ತಾಪಿಸಿದೆ.

೧. "ಓಂನಮಸ್ತುಂಗ ಜಟಾಚಂದ್ರ ಚಂದ್ರಿಕಾಭೋಗಭೂತಯೇ। ಭವಾನೀದೋರ್ಲ್ಲ ತಾಗಾಡ ಪರೀರಂಭಾಯ ಸಂಭವೇ॥ ಸ್ವೇಷ್ಟ್ಯಾರಂಭ ಕಾಲೇಷು [ತ್ರಯ]

೨. ಸ್ತ್ರೀಭುವನೇಶ್ವರಾಃ॥ ದೇವಾದಿಶಂತುನಂ ಸಿದ್ಧಿಂಬ್ರಹ್ಮೇಶಾನಜನಾರ್ಧ್ಯನಾಃ॥ ಸರ್ವ್ವಾಕಾರಮ ಶೇಷಸ್ಯಜ ಗತಃ ಸರ್ವ್ವದಾಶಿವಂ। ಗೋ ಬ್ರಾಹ್ಮಣ.....

೩. ಚಶಿವಂಭವತು ಸರ್ವ್ವದಾ॥ ಶಿವಮಾದೌಶಿವಂಮಧ್ಯೇಶಿವಮಂತ್ಯೇ (ಶಿಮಂತೇ) ಚಸರ್ವ್ವದಾ। ಸರ್ವ್ವೇಶಾಂ ಶಿವಭಕ್ತಾನಂಮನುಜಾನಾಂಚ ತಚ್ಛಿವಂ

೪. ಶ್ರೀಮದ್ದೇವಾಧಿದೇವಂ ಪ್ರಣವತಿ ಮಹೀಸೋಮಸೂರ್ಯಾತ್ಮವಾಯುವ್ಯೋಮಾಗ್ನ್ಯಂ ಬುಪ್ರಜಾತಪುಯುತತನುಭವಾನೀ....

-------------------------

-------------------------"[೩೫]

ಒಟ್ಟಾರೆ ಯಾವುದೇ ದಾನವಾಗಲಿ, ಪರೋಪಕಾರ, ಪುಣ್ಯದ ಭಾವನೆ ಇಟ್ಟುಕೊಂಡು ನೀಡುವವನು ದಾನಿಯಾಗುತ್ತಾನೆ. ಯಾವುದೇ ವಾಂಛೆ ಇಲ್ಲದೆ ನೀಡುವವನು ದಾಸೋಹಿಯಾಗುತ್ತಾನೆ. ಹೀಗೆ ಹಲವಾರು ಸಂಬಂಧಿತ ಶಾಸನಗಳು ಕರ್ನಾಟಕದ ಒಳಗೂ ಹೊರಗೂ ವಿಫುಲವಾಗಿ ದೊರಕುತ್ತವೆ. ಇದು ಕನ್ನಡ ನಾಡಿಗರ ಹೆಮ್ಮೆಯ ಸಂಸ್ಕೃತಿಯ ಪ್ರತೀಕವೂ ಹೌದು. ಈ ಹಿಂದಿನಂತೆ ಮುಂದೆಯು ನೆಲೆನಿಲ್ಲಬೇಕಾದುದು ಮನುಕುಲದ ಹಿತದೃಷ್ಟಿಯಿಂದ ಅವಶ್ಯವೂ ಅನಿವಾರ್ಯವೂ ಶ್ರೇಯಷ್ಕರವೂ ಆಗಿದೆ.

**ಅಡಿಟಿಪ್ಪಣಿಗಳು:**

೧. ಶಾಸನಾನುಸಂಧಾನ, ಪು. ೧೦೨.
೨. ಅದೇ, ಪು. ೧೦೩.
೩. ಅದೇ, ಪು. ೧೧೯.
೪. ಅದೇ, ಪು. ೧೨೦.
೫. ಅದೇ, ಪು. ೧೨೨.
೬. ಕನ್ನಡ ಶಾಸನಗಳ ಅಧ್ಯಯನ, ಪು. ೧೨೩.
೭. ಅದೇ, ಪು. ೧೨೩.
೮. ಅದೇ, ಪು. ೧೨೪.
೯. ಅದೇ, ಪು. ೧೫೦.
೧೦. ಕನ್ನಡ ಶಾಸನ ಸಂಪದ, ಪು. ೯.
೧೧. ಅದೇ, ಪು. ೧೪.
೧೨. ಅದೇ, ಪು. ೩೮.
೧೩. ಅದೇ, ಪು. ೪೮.
೧೪. ಅದೇ, ಪು. ೬೫.
೧೫. ಅದೇ, ಪು. ೭೪.
೧೬. ಶಾಸನ ಮತ್ತು ಗದ್ಯ, ಪು. ೫೯.
೧೭. ಪೆಣ್ಬುಯ್ಯಲ್, ಪು. ೫.
೧೮. ಅದೇ, ಪು. ೭.
೧೯. ಅದೇ, ಪು. ೧೯.
೨೦. ಅದೇ, ಪು. ೨೦.
೨೧. ಅದೇ, ಪು. ೨೩.
೨೨. ಅದೇ, ಪು. ೩೭.
೨೩. ಅದೇ, ಪು. ೩೭
೨೪. ಅದೇ, ಪು. ೪೮
೨೫. ಅದೇ, ಪು. ೭೦.
೨೬. ಕಳಚೂರಿನ ಶಾಸನಗಳು, ಪು. ೧.
೨೭. ಅದೇ, ಪು. ೪.
೨೮. ಅದೇ, ಪು. ೫.
೨೯. ಅದೇ, ಪು. ೮.
೩೦. ಅದೇ, ಪು. ೧೦.
೩೧. ಅದೇ, ಪು. ೧೨.

೩೨. ಅದೇ, ಪು. ೧೪.

೩೩. ಅದೇ, ಪು. ೨೪.

೩೪. ಅದೇ, ಪು. ೨೯.

೩೫. ಅದೇ, ಪು. ೫೮.

೩೬. ಅದೇ, ಪು. ೮೭.